ಸಂಕ್ಷಿಪ್ತ

# ಕನ್ನಡ ಭಾಷೆಯ ಚರಿತ್ರೆ

ಎಂ.ಎಚ್. ಕೃಷ್ಣಯ್ಯ

## ಸಂಕ್ಷಿಪ್ತ

# ಕನ್ನಡ ಭಾಷೆಯ ಚರಿತ್ರೆ

ಎಂ. ಎಚ್. ಕೃಷ್ಣಯ್ಯ



ಸುವಿದ್ಯಾ ಪ್ರಕಾಶನ
೯, ಡಾ|| ಎ. ಆರ್. ಕೃಷ್ಣಶಾಸ್ತ್ರೀ ರಸ್ತೆ
ಬಸವನಗುಡಿ, ಬೆಂಗಳೂರು–೫೬೦ ೦೦೪

SAMKSHIPTHA KANNADA BHASHEYA CHARITHRE—
A Short History of Kannada Language by Prof. M. H. Krishnaiah, Professor of Kannada, Maharani's Arts College for Women, Bangalore; Published by Suvidya Prakashana, 9, Dr. A. R. Krishnashastry Road, Basavanagudi, Bangalore-4
Pages: viii + 176 **Price: Rs. 38–00**



**ಬೆಲೆ: ಮೂವತ್ತೆಂಟು ರೂಪಾಯಿ**

ಮುಖಪುಟ ವಿನ್ಯಾಸ :
ಶ್ರೀ ಎಚ್. ಎಸ್. ವೇಣುಗೋಪಾಲ

ಮುದ್ರಣ :
ಪ್ರಭಾ ಮುದ್ರಣಾಲಯ
೨೨/ಎ, ಡಾ॥ ಡಿ. ವಿ. ಗುಂಡಪ್ಪ ರಸ್ತೆ,
ಬಸವನಗುಡಿ, ಬೆಂಗಳೂರು–೫೬೦ ೦೦೪

ಡಾ. ಎಂ. ಕೆ. ಶಾಲಿನಿ
ಕು. ಗ್ರೀಷ್ಮಾ ಮೋಹನ್
ಅವರಿಗೆ
ವಾತ್ಸಲ್ಯಪೂರ್ವಕ

## ಒಂದು ಮಾತು

ಭಾಷಾ ವಿಜ್ಞಾನ, ಕನ್ನಡ ಭಾಷೆಯ ಚರಿತ್ರೆ, ಶಬ್ದಮಣಿದರ್ಪಣದಂತಹ ಹಳಗನ್ನಡ ವ್ಯಾಕರಣವನ್ನು ಬೋಧಿಸುವಾಗ ಸರಳತೆ, ಖಚಿತತೆ, ನಿರ್ದುಷ್ಟತೆ, ನಿರೂಪಣೆಯ ಸ್ವಾರಸ್ಯವನ್ನು ಸಾಧಿಸುವುದು ಎಷ್ಟು ಕಷ್ಟ ಎಂಬ ಅನುಭವ ಕಳೆದ ಮೂರು ದಶಕಗಳಲ್ಲಿ ನನಗೆ ಆಗಿದೆ. ಬರವಣಿಗೆ ಮತ್ತೂ ಅಸಾಧ್ಯ. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಕೈಪಿಡಿಯ ಸರಳತೆ, ಡಾ. ಎಚ್. ಎಸ್. ಬಿಳಿಗಿರಿಯವರ ಖಚಿತ ಪ್ರತಿಪಾದನೆ ನನಗೆ ಇಂದಿಗೂ ಮೆಚ್ಚುಗೆಯ ಅಂಶಗಳು. ಈ ಕೃತಿಯಲ್ಲಿ ಸಂಕ್ಷಿಪ್ತವಾಗಿ, ಸರಳವಾಗಿ, ಆದಷ್ಟು ಕಡಿಮೆ ಪಾರಿಭಾಷಿಕಗಳೊಡನೆ ಕನ್ನಡ ಭಾಷೆ ನಡೆದುಬಂದ ದಾರಿಯ ಬಗ್ಗೆ, ಅಸ್ತಿತ್ವವನ್ನು ವೈಶಿಷ್ಟ್ಯಗಳನ್ನು ಪಡೆದುಕೊಂಡ ಬಗ್ಗೆ, ಸ್ವರೂಪ ವರ್ತನೆ ಬದಲಾವಣೆಗಳ ಹಲವು ಮಜಲು ಮಗ್ಗಲುಗಳ ಬಗ್ಗೆ ಪರಿಚಯ ಮಾಡಿಕೊಡುವುದು ಉದ್ದೇಶ. ಕನ್ನಡ ಭಾಷೆಯನ್ನು ವಿಶೇಷ ಅಧ್ಯಯನ ವಿಷಯವಾಗಿ ಆರಿಸಿಕೊಂಡ ವಿದ್ಯಾರ್ಥಿಗಳಿಗೆ, ಸ್ಪರ್ಧಾತ್ಮಕ ಪರೀಕ್ಷೆಯ ಅಭ್ಯರ್ಥಿಗಳಿಗೆ, ಕುತೂಹಲ ಆಸಕ್ತಿಯುಳ್ಳ ಸಾಮಾನ್ಯ ಓದುಗರಿಗೆ ಇದರಿಂದ ಅಲ್ಪಸ್ವಲ್ಪ ಪ್ರಯೋಜನವಾಗುವುದಾದರೆ ನನ್ನ ಶ್ರಮ ಸಾರ್ಥಕ.

ಇಂತಹ ಪುಸ್ತಕ ಬರೆಯುವಲ್ಲಿ ಪೂರ್ವಸೂರಿಗಳಿಗೆ, ಸಂಶೋಧಕ ಲೇಖಕರಿಗೆ ಎಷ್ಟು ಋಣಿ ಎಂದು ಪ್ರತ್ಯೇಕ ಹೇಳಬೇಕಿಲ್ಲ. ಗೆಳೆಯ ಪ್ರೊ. ಅ. ರಾ. ಮಿತ್ರ ಉದ್ದಕ್ಕೂ ಸಲಹೆ, ಸೂಚನೆ ನೀಡಿ ಉಪಕರಿಸಿದ್ದಾರೆ. ಅನಿರೀಕ್ಷಿತ ಸಂತೋಷದ ವಿಷಯವೆಂದರೆ ನನ್ನ ಮೊಮ್ಮಗಳಿಂದ ಒದಗಿಬಂದ ಅವಕಾಶ. 'ಮ್ಮ' ಉಚ್ಚಾರಣೆಯಿಂದ ತೊಡಗಿ ಶಬ್ದ ಮತ್ತು ದೃಶ್ಯ ಸಂಕೇತಗಳ ಗ್ರಹಿಕೆ, ಕಣ್ಣು ಕಿವಿಗಳ ಚುರುಕುತನ, ಕೇಳಿ ಕೇಳಿ ತಿಳಿದು ನೆನಪಿಗೆ ದಾಖಲಿಸಿಕೊಳ್ಳುವ ಕ್ರಮ, ಪದ ಪದಪುಂಜಗಳನ್ನು ಸಾದೃಶ ಸಂದರ್ಭಗಳಲ್ಲಿ ಒಮ್ಮೊಮ್ಮೆ ತಪ್ಪಾದರೂ ಪ್ರಯೋಗಿಸುವ ವಿಧಾನ ನನ್ನಲ್ಲೂ ಮುಗ್ಧತೆಯ ಬೆರಗನ್ನು ಮೂಡಿಸಿವೆ. ಆಧುನಿಕರ ಅಭಿಪ್ರಾಯಗಳನ್ನು ತೂಗಿ ನೋಡುವ ಅವಕಾಶ ಕಲ್ಪಿಸಿದುವು. ಇದು ಎಲ್ಲರ ಮನೆಯಲ್ಲೂ ಎಲ್ಲರಿಗೂ ಮಕ್ಕಳ ಭಾಷೆಯ ಕಲಿಕೆಯ ಹಂತಗಳಲ್ಲಿ ಆಗಬಹುದಾದ ವಿಸ್ಮಯಕಾರಿ ಅನುಭವವೆ. ತಾಯಿ, ಮಗಳಿಗೆ ಈ ಕೃತಿ ಅರ್ಪಿತ.

ಸುವಿದ್ಯಾ ಪ್ರಕಾಶನದ ಶ್ರೀಮತಿ ಲಲಿತ ಸತ್ಯನಾರಾಯಣ ಅವರ ವಿಶ್ವಾಸಪೂರ್ವಕ ಒತ್ತಾಯವಿಲ್ಲದಿದ್ದರೆ ಈ ಬರವಣಿಗೆ ಆಗುತ್ತಿರಲಿಲ್ಲ. ಅವರಿಗೆ ವಿಶೇಷ ವಂದನೆಗಳು. ವಿಶೇಷ ಮೊಳೆಗಳ ಅಗತ್ಯವಿರುವ, ಸಹನೆಯನ್ನು ಒರೆಗಲ್ಲಿಗೆ ಹಚ್ಚುವ, ಕಾಲವನ್ನು ನುಂಗುವ ಇಂತಹ ಪುಸ್ತಕ ಮುದ್ರಣಕಾರ್ಯವನ್ನು ಒಂದು ಬಗೆಯ

ಮೋಹದಿಂದಲೇ ಪ್ರಭಾ ಮುದ್ರಣಾಲಯದ ಒಡೆಯರಾದ ಶ್ರೀ ಡಿ. ಎಸ್. ಕೃಷ್ಣಾಚಾರ್ ಅವರು ನಿರ್ವಹಿಸಿದ್ದಾರೆ. ಅವರಿಗೆ ನನ್ನ ಕೃತಜ್ಞತೆಗಳು. ಕೆಲವು ಲಿಪಿ ಚಿಹ್ನೆಗಳನ್ನು ರಚಿಸಿಕೊಟ್ಟ ಕಲಾವಿದ ಶ್ರೀ ಸುಧಾಕರ್ ದರ್ಬೆ ಮತ್ತು ಮುಖಪುಟ ವಿನ್ಯಾಸವನ್ನು ರಚಿಸಿದ ಶ್ರೀ ಎಚ್. ಎಸ್. ವೇಣುಗೋಪಾಲ ಅವರಿಗೂ ವಂದನೆಗಳು.

೨೨-೫-೧೯೬೩
೧೮೨, 'ಶಾಲಿನಿ'
೧ ನೇ 'ಎನ್' ಬ್ಲಾಕ್
ರಾಜಾಜಿನಗರ
ಬೆಂಗಳೂರು-೫೬೦ ೦೧೦

**ಎಂ. ಎಚ್. ಕೃಷ್ಣಯ್ಯ**

# ಪ್ರಕಾಶಕರ ಮಾತು

ಸುವಿದ್ಯಾ ಪ್ರಕಾಶನದ ಇಪ್ಪತ್ತೊಂಬತ್ತನೆಯ ಪ್ರಕಟಣೆಯನ್ನು ಕನ್ನಡಿಗರ ಕೈಯಲ್ಲಿಡಲು ತುಂಬಾ ಸಂತೋಷವಾಗಿದೆ. ನಮ್ಮ ಪ್ರಕಟಣೆಗಳಿಗೆ ವಾಚಕರು ತೋರುತ್ತಿರುವ ಆಸಕ್ತಿ ಮತ್ತು ಪ್ರೋತ್ಸಾಹಗಳಿಗಾಗಿ ಆಭಾರಿಯಾಗಿದ್ದೇವೆ.

ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ ವಿದ್ಯಾರ್ಥಿಗಳಿಗಾಗಿಯೇ ರೂಪುಗೊಂಡ ಒಂದು ಪರಾಮರ್ಶನಗ್ರಂಥವಾಗಿದೆ. ಭಾಷೆಯ ಕಲಿಸುವಿಕೆ, ಕಲಿಕೆ ಮತ್ತು ಬಳಕೆ ಒಂದು ವಿಶೇಷವಾದ ಕಲೆ. ಈ ಕಲೆಯನ್ನು ಕರಗತಮಾಡಿಕೊಂಡು ಸಹಪ್ರಾಧ್ಯಾಪಕರ ಹಾಗೂ ವಿದ್ಯಾರ್ಥಿಗಳ ಅಪಾರ ಮೆಚ್ಚುಗೆಯನ್ನು ಪ್ರೊ. ಎಂ. ಎಚ್. ಕೃಷ್ಣಯ್ಯ ನವರು ಪಡೆದುಕೊಂಡಿದ್ದಾರೆ. ಅವರ ವೃತ್ತಿ ಅಧ್ಯಾಪನವಾದರೂ ಯಾವಾಗಲೂ ಏನಾದರೊಂದು ಹೊಸ ಪ್ರಯೋಗವನ್ನು ಮಾಡುತ್ತ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಅಪೂರ್ವವಾದ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಇದಕ್ಕೆ ನಿದರ್ಶನ, ಅವರು ಇದುವರೆಗೆ ಪ್ರಕಟಪಡಿಸಿರುವ ವಿವಿಧ ಪ್ರಕಾರಗಳ ವೈವಿಧ್ಯಮಯ ಗ್ರಂಥಗಳು. ಇಂತಹ ಒಬ್ಬ ಶ್ರೇಷ್ಠ ವಿದ್ವಾಂಸರ ಪುಸ್ತಕವನ್ನು ನಮ್ಮ ಪ್ರಕಾಶನದಡಿಯಲ್ಲಿ ಪ್ರಕಟಿಸಲು ಅನುಮತಿಯಿತ್ತ ಲೇಖಕರಿಗೆ ನಾವು ಕೃತಜ್ಞರಾಗಿದ್ದೇವೆ.

ಮುದ್ರಣದ ಕಾರ್ಯದಲ್ಲಿ ಮೂರು ದಶಕಗಳಿಂದಲೂ ಪರಿಚಿತರಾಗಿರುವ ಪ್ರಭಾ ಮುದ್ರಣಾಲಯದ ಶ್ರೀ ಡಿ. ಎಸ್. ಕೃಷ್ಣಾಚಾರ್ ಮತ್ತು ಅವರ ಪುತ್ರ ಶ್ರೀ ವಾಸುದೇವ್ ಅವರುಗಳು ನಾವು ಕೊಟ್ಟ ತೊಂದರೆಗಳನ್ನು ಸಹನೆಯಿಂದ ಭರಿಸಿ ಪುಸ್ತಕವನ್ನು ಅತ್ಯಂತ ಸುಂದರವಾಗಿ ರೂಪಿಸಿಕೊಟ್ಟಿದ್ದಾರೆ. ಇವರಿಗೆ ನಮ್ಮ ಶ್ರದ್ಧಾಪೂರ್ವಕ ವಂದನೆಗಳು.

ಗ್ರಂಥದಲ್ಲಿರುವ ಲಿಪಿಯ_ಅಕ್ಷರಗಳ ವಿನ್ಯಾಸವನ್ನು ಬಹಳ ತಾಳ್ಮೆಯಿಂದ ಮಾಡಿಕೊಟ್ಟ ಶ್ರೀ ಸುಧಾಕರ್ ದರ್ಜಿ ಹಾಗೂ ಸುಂದರ ಮುಖಪುಟವನ್ನು ರಚಿಸಿದ ಶ್ರೀ ಎಚ್. ಎಸ್. ವೇಣುಗೋಪಾಲ ಅವರಿಗೂ ನಾವು ಆಭಾರಿಯಾಗಿದ್ದೇವೆ.

ಈ ಕೃತಿಯು, ಕನ್ನಡಿಗರಿಗೂ ಅದರಲ್ಲೂ ವಿಶೇಷವಾಗಿ ಅಧ್ಯಾಪಕರಿಗೂ ಮತ್ತು ವಿದ್ಯಾರ್ಥಿಗಳಿಗೂ ಉಪಯುಕ್ತವಾಗುವುದೆಂದು ನಂಬಿದ್ದೇವೆ. ಇವರ ಪ್ರೋತ್ಸಾಹವೇ ನಮ್ಮ ಮುಂದಿನ ಯೋಜನೆಗಳಿಗೆ ಅಡಿಗಲ್ಲು.

ಜೂನ್ ೧೯೯೩ **ಲಲಿತ ಸತ್ಯನಾರಾಯಣ**

# ಪರಿವಿಡಿ

# ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ

## ೧. ಭಾಷೆ ಎಂದರೇನು ?

ಮನುಷ್ಯ ಬುದ್ಧಿಜೀವಿ. ಈ ಜಗತ್ತಿನ ಮಿಕ್ಕೆಲ್ಲ ಜೀವಿಗಳಿಂದ ಈತನನ್ನು ಪ್ರತ್ಯೇಕಗೊಳಿಸುವುದು ಅವನ ಬೌದ್ಧಿಕತೆ, ಬೌದ್ಧಿಕ ಶಕ್ತಿ. ತನ್ನ ಬುದ್ಧಿಶಕ್ತಿಯಿಂದ ಮನುಷ್ಯ ಭಾಷೆಯನ್ನು ರೂಪಿಸಿಕೊಂಡಿದ್ದಾನೆ. ಇದು ಮನುಷ್ಯನಿಗೆ ನಿಸರ್ಗದತ್ತವಾದ, ಸಹಜವಾದ, ಸ್ವಾಭಾವಿಕವಾದ ಕ್ರಿಯೆಯಲ್ಲ. ತಾಯಿನುಡಿ ರಕ್ತದಲ್ಲಿ ಹರಿಯುತ್ತದೆ ಎಂದು ಭಾವೋದ್ರೇಕದಿಂದ ಹೇಳಿದರೂ ಭಾಷೆ ರಕ್ತಗತವಾಗಿಯೂ ಬರುವುದಿಲ್ಲ, ವಂಶವಾಹಿಯಾಗಿಯೂ ಬರುವುದಿಲ್ಲ. ಕನ್ನಡಿಗ ತಾಯಿತಂದೆಯರ ಮಗುವೊಂದನ್ನು ಚೀನೀ ಕುಟುಂಬವೊಂದರಲ್ಲಿ ಬಿಟ್ಟರೆ ಅದು ಚೀನೀ ಭಾಷೆಯನ್ನು ನಮ್ಮ ಮಕ್ಕಳಂತೆಯೇ ಸಹಜ ಎಂಬಂತೆ ಕಲಿಯಬಲ್ಲುದು. ಬೇರೆ ರಾಜ್ಯದಲ್ಲಿ ನೆಲೆಸಿರುವ ಕನ್ನಡಿಗರ ಮಕ್ಕಳು ಮನೆಯಲ್ಲಿ ಕನ್ನಡ, ಪ್ರಾಥಮಿಕಪೂರ್ವ ಶಾಲೆಯಲ್ಲಿ, ಶಿಶುವಿಹಾರದಲ್ಲಿ ಇಂಗ್ಲಿಷ್, ನೆರೆಹೊರೆಯ ಮಕ್ಕಳೊಡನೆ ಆ ಪ್ರದೇಶದ ಭಾಷೆಗಳಲ್ಲಿ ಅಡೆತಡೆಯಿಲ್ಲದೆ ಮಾತನಾಡುತ್ತಾ ಭಾಷೆಗಳನ್ನು ರೂಢಿಸಿಕೊಳ್ಳುತ್ತವೆ. ಭಾಷೆ ಕಲಿಯಲು ಈ ಬಗೆಯ ವಯಸ್ಸಿನ ನಿರ್ಬಂಧವೂ ಇಲ್ಲ. ವರ್ತಕರು ತಾವು ವ್ಯಾಪಾರಕ್ಕಾಗಿ ಹೋದಕಡೆ, ನೆಲೆಸಿದಕಡೆ ಅಲ್ಲಿಯ ಭಾಷೆಯನ್ನು ಬಳಕೆಯಿಂದಲೇ ಕಲಿತು ವ್ಯವಹರಿಸುತ್ತಾರೆ. ಆದ್ದರಿಂದ ಭಾಷೆ ವಂಶದಿಂದ ಬರುವಂತಹುದಲ್ಲ, ಕಲಿಕೆಯಿಂದ ಬರುವಂತಹುದು—ಎನ್ನುವುದು. ಪ್ರಾಣಿಗಳು ಭಾವನೆಗಳನ್ನು ತಮ್ಮದೇ ಕೆಲವು ಕ್ರಿಯೆಗಳಿಂದ, ವರ್ತನೆಯ ರೀತಿಯಿಂದ, ಧ್ವನಿಗಳಿಂದ, 'ಚೇಷ್ಟೆ'ಗಳಿಂದ ವ್ಯಕ್ತಪಡಿಸಬಹುದು. ಇರುವೆ, ದುಂಬಿಯಂತಹ ಕೀಟಗಳು, ಗೊರಿಲ್ಲಾ, ಆನೆ ಮುಂತಾದ ಪ್ರಾಣಿಗಳು, ಡಾಲ್ಫಿನ್, ತಿಮಿಂಗಿಲದಂತಹ ಜಲಚರಿಗಳನ್ನು ಸೂಕ್ಷ್ಮವಾಗಿ ಅಭ್ಯಸಿಸಿ ಅವುಗಳ ವರ್ತನೆ, ಬೇರೆಬೇರೆ ಸಂದರ್ಭಗಳಲ್ಲಿನ ಧ್ವನಿ ವಿನ್ಯಾಸ ವಿಶಿಷ್ಟತೆಯನ್ನು ಗಮನಿಸಿ ವಿಜ್ಞಾನಿಗಳು ಅವುಗಳ ಸಂಪರ್ಕ ವಿಧಾನ, ಸುದ್ದಿ ಮುಟ್ಟಿಸುವ ತಿಳಿಯುವ ವಿಶಿಷ್ಟ ಬಗೆಯನ್ನು ಅರಿಯುವ ಪ್ರಯತ್ನ ಮಾಡಿದ್ದಾರೆ. ಈ ಜೀವಿಗಳಿಗೂ ಅವುಗಳದೇ ಆದ ವಿಶಿಷ್ಟ ಸಂಪರ್ಕ, ಸಂವಹನ ವಿಧಾನಗಳಿವೆ. ಅವುಗಳಲ್ಲಿ ಧ್ವನಿ ಮಾಧ್ಯಮವೂ ಇದೆ. ಆದರೆ ಅವು ಅಮೂರ್ತ ಆಲೋಚನೆಗಳನ್ನು ವ್ಯವಸ್ಥಿತವಾದ, ಸಾಂಕೇತಿಕ ಧ್ವನಿ ಸಮೂಹಗಳ ರೂಪದಲ್ಲಿ ತಿಳಿಸಲಾರವು. ಅವುಗಳಿಗೆ ಬಾಯಿ, ಅವುಗಳ ಆಹಾರ ಕ್ರಮಕ್ಕೆ ತಕ್ಕಂತೆ ಆಹಾರ ಸೇವಿಸಲು ಮಾತ್ರ ಉಪಯುಕ್ತವಾಗುವಂತೆ ವಿಕಾಸಗೊಂಡಿದೆ. ವಿಕಾಸಕ್ರಮದಲ್ಲಿ ಮನುಷ್ಯ ಬಾಯಿಯ ತುಟಿ, ನಾಲಗೆ, ಕಂಠಗಳನ್ನು ನಿಯಂತ್ರಿಸಿ, ಬಳಸಿ, ಸಂಕೇತ ಧ್ವನಿಗಳನ್ನಾಗಿ ಪರಿವರ್ತಿಸಿ ಮನಸ್ಸಿನ ಇಚ್ಛೆಯನ್ನು ತಿಳಿಸಬಲ್ಲ. ಆದ್ದರಿಂದ ಭಾಷೆ

ಒಂದು ನಿರ್ದಿಷ್ಟ ಪರಿಸರದಲ್ಲಿ ಬಾಲ್ಯದಿಂದ ಕಲಿಯುವುದರಿಂದ ಬರುತ್ತದೆಯೇ ಹೊರತು, ಹುಟ್ಟಿನೊಡನೆ ಬರುವುದಿಲ್ಲ. ಭಾಷೆ ವ್ಯಕ್ತಿ, ಕುಟುಂಬ, ಸಮುದಾಯ, ಸಮಾಜ, ಪ್ರದೇಶಗಳಲ್ಲಿ ನಿರ್ದಿಷ್ಟ ಪರಿಸರದ ಪರಸ್ಪರ ಒಪ್ಪಿಗೆಯ, ರೂಢಿಯಿಂದ ಬಂದ ಒಂದು ವ್ಯವಸ್ಥೆಯಾಗುತ್ತದೆ.

ಹೇಗೋ ಏನೋ, ಭಾಷೆ ಎಂದ ಕೂಡಲೆ ಬರೆಯುವ, ಲಿಪಿಬದ್ಧವಾದ ಎಂಬ ಅಭಿಪ್ರಾಯ ಜನರಲ್ಲಿ ಮೂಡಿದೆ. ಲಿಪಿ ಭಾಷೆಯಲ್ಲ. ಆಡುವ ನುಡಿಯೇ ನಿಜವಾದ ಭಾಷೆ. ಧ್ವನಿಗಳ ಸಮೂಹದಿಂದ ಕೂಡಿದ ಶಬ್ದಗಳು ನಿರ್ದಿಷ್ಟ ಅರ್ಥದ ಸಂಕೇತಗಳು. ಅಂದರೆ ಒಂದು ಅರ್ಥಕ್ಕೆ ಒಂದು ಧ್ವನಿಸಮೂಹ ಸಂಕೇತವಾಗುತ್ತದೆ. ಆ ಧ್ವನಿಸಂಕೇತಗಳಿಗೆ ಸಂಕೇತ ಲಿಪಿ. ಆದ್ದರಿಂದ ಲಿಪಿ ಏನಿದ್ದರೂ ಸಂಕೇತದ ಸಂಕೇತ. ಆಯಾ ಧ್ವನಿಗಳನ್ನು ಸೂಚಿಸುವ ಲಿಪಿ ಅಥವಾ ಅಕ್ಷರಗಳಿದ್ದರೆ ಯಾವ ಭಾಷೆಯನ್ನಾದರೂ ಯಾವ ಲಿಪಿಯಲ್ಲಾದರೂ ಬರೆಯಬಹುದು. ಕೆಲವು ಅಧಿಕಾರಿಗಳು, ರಾಜಕಾರಣಿಗಳು, ಬೇರೆ ರಾಜ್ಯಗಳಲ್ಲಿ ಭಾಷಣ ಮಾಡಬೇಕಾದಾಗ ತಮ್ಮ ಭಾಷೆಯ ಲಿಪಿಯಲ್ಲೇ ಬರೆದುಕೊಂಡು ಭಾಷಣವನ್ನು ಓದಿ ಸಭಿಕರನ್ನು ಸಂತೋಷಪಡಿಸುವುದಿಲ್ಲವೆ! ಕನ್ನಡವನ್ನು ಇಂಗ್ಲಿಷ್ ಲಿಪಿಯಲ್ಲಿ ಬರೆಯಬಹುದು, ಹಿಂದಿ ಲಿಪಿಯಾದ ದೇವನಾಗರಿಯಲ್ಲಿ ಬರೆಯಬಹುದು. ಆದರೆ ದೇವನಾಗರಿ ಲಿಪಿಯಲ್ಲಿ ಕನ್ನಡದಲ್ಲಿರುವ ಎ, ಒ ಹ್ರಸ್ವಸ್ವರಗಳಿಲ್ಲ, ಏ, ಓ ದೀರ್ಘಸ್ವರಗಳು ಮಾತ್ರ ಇವೆ. ಆದ್ದರಿಂದ ಕೆಲವೊಮ್ಮೆ ತೊಡಕಾಗುತ್ತದೆ. ಮರಾಠಿಯನ್ನು ದೇವನಾಗರಿ ಲಿಪಿಯಲ್ಲೆ ಬರೆಯಲಾಗುತ್ತಿದೆ. ದೇವನಾಗರಿಯಲ್ಲಿ ಈಗ 'ಳ' ಇಲ್ಲ. ಮರಾಠಿಯಲ್ಲಿದೆ. ಅದಕ್ಕೆ 'ಲ'ಗಿಂತ ಬೇರೆಯಾದ ಸಂಕೇತ 'ಹ' ಬಳಸುತ್ತಾರೆ. ತುರ್ಕಿ ಭಾಷೆಯನ್ನು ರೋಮನ್ ಲಿಪಿಯಲ್ಲಿ ಬರೆಯುತ್ತಾರೆ. ನಮ್ಮ ದೇಶದಲ್ಲಿಯೇ ಸಿಂಧಿಯನ್ನು ಉರ್ದು ಲಿಪಿಯಲ್ಲಿ ಬರೆಯುತ್ತಾರೆ.

ಬರೆಯಲು ಲಿಪಿಯಿಲ್ಲದ ಭಾಷೆಗಳೂ ಇವೆ. ಅವು ಕೇವಲ ಆಡುಮಾತಿನಲ್ಲಿ ಉಳಿದಿವೆ. ಅವುಗಳನ್ನು ಕ್ಷುಲ್ಲಕ* ಭಾಷೆಗಳು ಎನ್ನುತ್ತಾರೆ. ಇಲ್ಲಿ ಕ್ಷುಲ್ಲಕ ಎಂದಾಕ್ಷಣ ಕೀಳು ಎಂಬರ್ಥದಲ್ಲಿ ಅಲ್ಲ, ಗ್ರಂಥಸ್ಥವಲ್ಲದ ಎನ್ನುವ ಅರ್ಥದಲ್ಲಿ. ಕೊಂಕಣಿ— ಮಂಗಳೂರು, ಗೋವಾ ಮೊದಲಾದೆಡೆ ಸಾಕಷ್ಟು ವ್ಯಾಪಕವಾಗಿ ಬಳಕೆಯಲ್ಲಿರುವ ಭಾಷೆ. ಅದನ್ನು ಕನ್ನಡ ಲಿಪಿಯಲ್ಲೂ ಬರೆಯುತ್ತಾರೆ, ದೇವನಾಗರಿ ಲಿಪಿಯಲ್ಲೂ ಬರೆಯುತ್ತಾರೆ. ತುಳು, ಕೊಡಗು ಭಾಷೆಗಳಿಗೆ ತಮ್ಮದೇ ಲಿಪಿಯಿಲ್ಲ. ಲಿಪಿಯಿರುವ ಭಾಷೆಗಳು ಗ್ರಂಥಸ್ಥ ಭಾಷೆಗಳು. ಅವು ಆಡುವ ಭಾಷೆಯೂ ಅಹುದು, ಬರಹದಲ್ಲಿರುವ ಭಾಷೆಯೂ ಅಹುದು. ಕೆಲವು ಭಾಷೆಗಳು ಒಂದಾನೊಂದು ಕಾಲದಲ್ಲಿ

* ಈ ಶಬ್ದ ಬಳಸಲು ಸಂಕೋಚವಾಗುತ್ತದೆ. ಆದರೆ ರೂಢಿಯಲ್ಲಿರುವುದರಿಂದ ಬಳಸಲಾಗಿದೆ. ನಿರ್ಲಿಪಿ ಭಾಷೆಯೆಂದು ಕರೆಯಬಹುದು.

ರೂಢಿಯಲ್ಲಿದ್ದು ಈಗ ಬಳಕೆಯಲ್ಲಿಲ್ಲ. ಅವು ಗ್ರಂಥದಲ್ಲಿ ಮಾತ್ರ ಉಳಿದಿವೆ. ಇಂತಹ ವನ್ನು ಮೃತಭಾಷೆಗಳು ಎನ್ನುತ್ತಾರೆ. ಲ್ಯಾಟಿನ್, ಸಂಸ್ಕೃತ ಅಂತಹ ಭಾಷೆಗಳು. ಅವು ಇಂದು ಮನೆಬಳಕೆಯ ಮಾತಾಗಿಲ್ಲ, ಭಾಷೆಯಾಗಿಲ್ಲ. ಆಕಾಶವಾಣಿಯಲ್ಲಿ ಸಂಸ್ಕೃತದ ಸುದ್ದಿಪ್ರಸಾರವಿದೆ, ಸಂಸ್ಕೃತ ಪತ್ರಿಕೆಯೂ ಪ್ರಸಾರದಲ್ಲಿದೆ, ಒಂದು ಹಳ್ಳಿಯಲ್ಲಿ ಎಲ್ಲರೂ ಸಂಸ್ಕೃತದಲ್ಲೇ ಮಾತನಾಡುತ್ತಾರೆ ಎಂದೂ ಹೇಳಲಾಗುತ್ತಿದೆ. ಆದರೆ ಇದೆಲ್ಲ ಅಭಿಮಾನದ ಒತ್ತಾಯದ ಉದ್ದೇಶಪೂರ್ವಕವಾದ ಸಾಂದರ್ಭಿಕ ಒತ್ತಡದ ಕ್ರಿಯೆಗಳು. ಸಂಸ್ಕೃತ ಇಂದು ಮನೆಮಾತಾಗಿ ಸಮಾಜದಲ್ಲಿ ಬಳಕೆಯಾಗುತ್ತಿಲ್ಲ.

ಭಾಷೆಯನ್ನು ನಮ್ಮವರು ಬೆಳಕು, ಜ್ಯೋತಿ ಎಂದರು. ಅಲ್ಲಮನ ವಚನದ ಸಾಲು 'ಮಾತೆಂಬುದು ಜ್ಯೋತಿರ್ಲಿಂಗ' ಎಂಬುದು ತುಂಬ ವ್ಯಾಪಕವಾದ ಗಹನವಾದ ಅರ್ಥವನ್ನೂ ಒಳಗೊಂಡಿದೆ. ಭಾಷೆ ಇಲ್ಲದಿದ್ದರೆ ನಮ್ಮ ಜೀವನ ಕತ್ತಲು. ವ್ಯವಹರಿಸಲು ಸಾಧ್ಯವಾಗುತ್ತಿರಲಿಲ್ಲ.

ಇದಮಂಧಂತಮಃ ಕೃತ್ಸ್ನಂ ಜಾಯತೇ ಭುವನತ್ರಯಂ ।
ಯದಿ ಶಬ್ದಾಹ್ವಯಂ ಜ್ಯೋತಿಃ ಆಸಂಸಾರಾನ್ನ ದೀಪ್ಯತೇ ॥

ಎಂಬ ಸಂಸ್ಕೃತದ ಪ್ರಸಿದ್ಧ ಉಕ್ತಿಯುಂಟು. ಅಂದರೆ, ಭಾಷೆಯೆಂಬ ಬೆಳಕು ಇಲ್ಲದಿದ್ದರೆ ಜಗತ್ತೇ ಕತ್ತಲಲ್ಲಿ ಮುಳುಗಿರುತ್ತಿತ್ತು. ಮನುಷ್ಯನಿಗೆ ವ್ಯವಹಾರವಾಗಲಿ, ಆತ ತನ್ನ ಮನಸ್ಸನ್ನು ಬಿಚ್ಚಿಡುವುದಾಗಲಿ, ಆಲೋಚನೆಗಳನ್ನು ತಿಳಿಸುವುದಾಗಲಿ ಆಗುತ್ತಿರಲಿಲ್ಲ. ಸಂಜ್ಞೆಗಳ ಮೂಲಕ ವ್ಯವಹರಿಸುವ ಮಿತಿ ಮಾತ್ರ ಇರುತ್ತಿತ್ತೇನೋ. ಪ್ರಾಣಿಗಳೂ ಭಾವನೆಗಳನ್ನು ಸಂಜ್ಞೆಗಳ ಮೂಲಕ ಸೂಚಿಸಬಹುದು. ನಾಯಿ ಬಾಲ ಆಡಿಸುತ್ತಾ ಯಜಮಾನನನ್ನು ಸುತ್ತಬಹುದು. ಯಜಮಾನ ಅದಕ್ಕೆ ಬಿಸ್ಕತ್ ಕೊಡಬಹುದು. ಆದರೆ ಬಿಸ್ಕತ್ತೇ ಬೇಕೆಂದು ಅದು ಸೂಚಿಸಲಾರದು. ಅದರ ಇಷ್ಟಾನಿಷ್ಟಗಳನ್ನು ಗಮನಿಸಿ ತಿಳಿಯಬೇಕಷ್ಟೆ. ಹಾಗೇ ಮೂಕರೂ ಅಂಗಸಂಜ್ಞೆಗಳಿಂದ ಅಭಿಪ್ರಾಯ ಸೂಚಿಸಬಹುದು. ಇಂದು ಮೂಕರ ಸಂಜ್ಞಾಭಾಷೆಯನ್ನು ರೂಪಿಸಲಾಗಿದೆ. ಆದರೆ ಅದಕ್ಕೂ ಒಂದು ಮಿತಿ ಇದೆ. ಅವು ಜಟಿಲ ಭಾವಗಳನ್ನು ವಿವರಿಸಲಾರವು. ಆದರೆ ಮಾತಿನ ಕ್ರಿಯೆಗೆ ಆ ಮಿತಿಯಿಲ್ಲ. ನಮ್ಮ ದೇಹದಲ್ಲಿ ಭಾಷೆಗೆಂದೇ ಒಂದು ಪ್ರತ್ಯೇಕ ಅಂಗವಿಲ್ಲ. ನಾಲಗೆ, ಹಲ್ಲು, ಬಾಯಿ, ಕಂಠನಾಳಗಳು ಬೇರೆ ಬೇರೆ ಉದ್ದೇಶಗಳಿಗಾಗಿ ಇರುವಂಥವು. ಮನುಷ್ಯ ಅವುಗಳನ್ನು ಬಳಸಿಕೊಂಡು ಅರ್ಥಪೂರ್ಣ ಅಥವಾ ಅರ್ಥಸೂಚಕ ಧ್ವನಿಗಳನ್ನು ಹೊರಡಿಸಿದಾಗ ಭಾಷೆ ಉದಯವಾಯಿತು. ಮನಸ್ಸಿನ ಕತ್ತಲು ಹೋಗಿ ಬೌದ್ಧಿಕ ಬೆಳಕು ಮೂಡಿತು.

ಇಂತಹ, ಬದುಕಿಗೆ ಬೆಳಕಾದ, ಮನುಷ್ಯನಿಗೆ ಬಗೆಬಗೆಯಲ್ಲಿ ಉಪಯುಕ್ತವಾದ, ಭಾಷೆಯ ಬಗ್ಗೆ ಒಂದು ಸೂತ್ರದಲ್ಲಿ ವಿವರಣೆ ಕೊಡುವುದು ಕಷ್ಟ. ಆದರೂ ಅನೇಕ

*

ಭಾಷಾ ವಿಜ್ಞಾನಿಗಳು ಸೂತ್ರರೂಪವಾಗಿ ಹೇಳಲು ಪ್ರಯತ್ನಮಾಡಿದ್ದಾರೆ. ಜೆ. ಬಿ. ಕ್ಯಾರಲ್ ಎಂಬಾತ "ಯಾದೃಚ್ಛಿಕ ಧ್ವನಿಸಂಕೇತಗಳ ಮತ್ತು ಧ್ವನಿಯ ಅನುಕ್ರಮಣಿಕೆಗಳ ರಚನಾಪದ್ಧತಿಯಿಂದ ಕೂಡಿ, ಒಂದು ಜನಸಮುದಾಯವು ಪರಸ್ಪರ ವ್ಯಕ್ತಿಸಂಪರ್ಕಕ್ಕೆ ಬಳಸಬಹುದಾದ ಮತ್ತು ಮಾನವ ಪರಿಸರದಲ್ಲಿನ ವಸ್ತು ಘಟನೆ ಮತ್ತು ಕ್ರಿಯೆಗಳನ್ನು ವಿಸ್ತಾರವಾಗಿ ದಾಖಲುಗೊಳಿಸುವ ಧ್ವನಿವ್ಯವಸ್ಥೆಯನ್ನು ಭಾಷೆ ಎಂದು ಕರೆಯುತ್ತಾರೆ" ಎಂದಿದ್ದಾನೆ.*

ಈ ಸೂತ್ರದಲ್ಲಿ ಭಾಷೆಯ ಬಗೆಗಿನ ಮುಖ್ಯ ಅಂಶಗಳಾದ ಯಾದೃಚ್ಛಿಕ ಧ್ವನಿಸಂಕೇತ, ಧ್ವನಿಗಳ ಅನುಕ್ರಮಣಿಕೆ, ರಚನಾ ಪದ್ಧತಿ, ಜನಸಮುದಾಯ, ಪರಸ್ಪರ ಸಂಪರ್ಕ ಮುಂತಾದುವು ಇವೆ. ಇದಕ್ಕಿಂತ ಸ್ಟರ್ಟಿವಾಂಟ್‌ನ ಸೂತ್ರ ಹೆಚ್ಚು ಸರಳವಾಗಿಯೂ ಅಡಕವಾಗಿಯೂ ಇದ್ದು ಪ್ರಸಿದ್ಧವಾಗಿದೆ: "ಒಂದು ಸಮಾಜದ ವ್ಯಕ್ತಿಗಳು ಪರಸ್ಪರ ವ್ಯವಹಾರಕ್ಕಾಗಿ ಬಳಸುವ ಯಾದೃಚ್ಛಿಕ ಧ್ವನಿ ಸಂಕೇತಗಳ ವ್ಯವಸ್ಥೆಯೇ ಭಾಷೆ." ‡

ಭಾಷೆ ಧ್ವನಿಸಂಕೇತಗಳ ವ್ಯವಸ್ಥೆ. ವ್ಯವಸ್ಥೆ, ಕ್ರಮಬದ್ಧತೆ ಇದ್ದಾಗ ಮಾತ್ರ ಒಬ್ಬರು ಇನ್ನೊಬ್ಬರನ್ನು ಅರ್ಥಮಾಡಿಕೊಳ್ಳಲು ಸಾಧ್ಯ. ಇದು ಕಾಲಾನುಕ್ರಮದಲ್ಲಿ ರೂಢಿಯಿಂದ ಒಂದು ಭಾಷಾ ಸಮಾಜದಲ್ಲಿ ಅಥವಾ ಪ್ರದೇಶದಲ್ಲಿ ನಿಯಮಬದ್ಧವಾಗುತ್ತದೆ. ಹಾಗೇ ಧ್ವನಿಸಂಕೇತಗಳು. ಅಂದರೆ ಮನುಷ್ಯ ಉಚ್ಚರಿಸಲು ಸಾಧ್ಯವಾದ ಎಲ್ಲ ಧ್ವನಿಗಳೂ ಭಾಷೆಯಲ್ಲಿರುವುದಿಲ್ಲ. ಒಂದೊಂದು ಭಾಷೆಯಲ್ಲಿ ರೂಢಿಗತವಾಗಿ ಕೆಲವು ಧ್ವನಿಗಳು ಮಾತ್ರ ಬಳಕೆಯಾಗುತ್ತವೆ. ಇಂಗ್ಲಿಷಿನ ಫ಼ ಜ಼ಗಳು ಕನ್ನಡದಲ್ಲಿಲ್ಲ; ಉರ್ದುವಿನ ಖ಼್ ಸಹ ಇಲ್ಲ. ಕನ್ನಡದ ಲ - ಳ ವ್ಯತ್ಯಾಸ ಇಂಗ್ಲಿಷ್‌ನಲ್ಲಿಲ್ಲ. ಮಲೆ - ಮಳೆ ಸ್ಪಷ್ಟವಾದ ಭಿನ್ನ ಉಚ್ಚಾರ ಉಳ್ಳವು, ಅದರಿಂದ ಅರ್ಥವೂ ಬೇರೆ ಬೇರೆ ಆಗುತ್ತದೆ. ಹೀಗೆ ನಿರ್ದಿಷ್ಟ ಧ್ವನಿಗಳು ಒಂದು ಮಿತಸಂಖ್ಯೆಯಲ್ಲಿ ಪ್ರತಿ ಭಾಷೆಗೂ ಇರುತ್ತವೆ. ಈ ಧ್ವನಿಗಳ ಗುಂಪು ಕೂಡಿ ಧ್ವನಿಸಂಕೇತ, ಪದ. ಹೀಗೆ ಕೂಡಿ ಆದ ಧ್ವನಿಸಂಕೇತಗಳು ಆಯಾ ಭಾಷೆಗೆ ಅರ್ಥವತ್ತಾಗುತ್ತವೆ. ಒಂದು ಕ್ರಮ, ವ್ಯವಸ್ಥೆಯಿಂದ ರೂಢಿಗತವಾಗಿ ಆ ಭಾಷಾಸಮುದಾಯಕ್ಕೆ ತಿಳಿಯು

---

* "A Language is a structural system of arbitrary vocal sounds and sequences of sounds which is used, or can be used, in inter-Personal Communication by aggregation of human beings, and which exhaustively catalogs the things, events and processes in the human environment." Quoted in *Psycho Linguistics* by Hans Hormann.

‡ "Language is a system of arbitrary vocal symbols by which members of a society act and react." E. H. Sturtevant.

ವಂತೆ ಇರುತ್ತವೆ. ಪದ ಸೂಚಿಸುವ ಅರ್ಥಕ್ಕೂ ಆ ವಸ್ತು ಅಥವಾ ಕ್ರಿಯೆಗೂ ಯಾವುದೇ ಸಂಬಂಧ, ಸಹಜವಾದ ಸಂಬಂಧ ಇರುವುದಿಲ್ಲ. ಅದು ಯಾದೃಚ್ಛಿಕ. ಅಂದರೆ ಇಚ್ಛೆಯಿಂದ ಸೂಚಿಸಿರುವುದು, ಸಂಕೇತ ಮಾತ್ರ. ನೀರು ಎನ್ನುವುದಕ್ಕೆ ಮಕ್ಕಳು 'ಈಯು' ಎನ್ನಬಹುದು. ಅರ್ಥಮಾಡಿಕೊಳ್ಳುವ ತಂದೆತಾಯಿಗಳಿಗೆ ಅದು ನೀರನ್ನು ಸಂಕೇತಿಸುತ್ತದೆ. ಬೇರೆ ಭಾಷೆಗಳಲ್ಲಿ ಜಲ, ಪಾನಿ, ವಾಟರ್ ಇತ್ಯಾದಿ ಸಂಕೇತಗಳಿರಬಹುದು. ಈ ಧ್ವನಿಸಂಕೇತಗಳಿಗೆ ಅರ್ಥಮಾಡಿಕೊಳ್ಳುವ ಸಮಾಜದಿಂದ ಬೆಲೆ ಬರುತ್ತದೆ, ಇಲ್ಲದಿದ್ದಲ್ಲಿ ಆ ಭಾಷೆಯಲ್ಲಿ ಅವು ಅರ್ಥಹೀನ ವಾಗುತ್ತವೆ.

ಹಾಕೆಟ್ ಎಂಬಾತ ಭಾಷೆಯ ಏಳು ಲಕ್ಷಣಗಳನ್ನು ಗುರುತಿಸಿದ್ದಾನೆ.* ೧. ದ್ವಿರೂಪ (Duality). ೨. ಉತ್ಪಾದಕತೆ (Productivity). ೩. ಯಾದೃಚ್ಛಿಕತೆ (Arbitrariness). ೪. ಅಂತರ್‌ವಿನಿಮಯಕ್ಷಮತೆ (Interchangeability). ೫. ವಿಶಿಷ್ಟತೆ (Specialization). ೬. ಪರ್ಯಾಯ ಬಳಕೆ (Displacement). ೭. ಸಾಂಸ್ಕೃತಿಕ ಪ್ರಸರಣ (Cultural Transmission).

೧. ದ್ವಿರೂಪ (Duality) ಎಂದರೆ ಇಬ್ಬಗೆ, ಜೋಡಿ ಬಗೆ. ಪ್ರತಿ ಭಾಷೆಯೂ ಒಂದು ಸ್ತರದಲ್ಲಿ ಮಹತ್ವದ ಧ್ವನಿಘಟಕಗಳ ವ್ಯವಸ್ಥೆಯನ್ನು ಹೊಂದಿರುತ್ತದೆ. ಇದನ್ನು ಧ್ವನಿಮಾ (Phoneme) ಎಂದು ಕರೆಯುತ್ತಾರೆ. ಇದು ಅರ್ಥವಿಲ್ಲದ ಘಟಕ, ವರ್ಣ. ಕನ್ನಡದ ವರ್ಣಮಾಲೆಯನ್ನು ನೆನಪಿಸಿಕೊಳ್ಳಬಹುದು. ಇನ್ನೊಂದು ಸ್ತರದಲ್ಲಿ ಪ್ರತಿ ಭಾಷೆಯೂ ಆಕೃತಿಗಳ ಘಟಕಗಳನ್ನು ಹೊಂದಿರುತ್ತದೆ. ಇದನ್ನು ಆಕೃತಿಮಾ (Morpheme) ಎಂದು ಕರೆಯುತ್ತಾರೆ. ಇದು ಅರ್ಥ ಇರುವ ಘಟಕ. ಧ್ವನಿಮಾಗಳ ಅರ್ಥಪೂರ್ಣ ಹೊಂದಾಣಿಕೆಯ ವ್ಯವಸ್ಥೆಯೇ ಆಕೃತಿಮಾ. ವರ್ಣಮಾಲೆಯಲ್ಲಿನ ವರ್ಣಗಳಿಂದ ಆದ ಪದಗಳನ್ನು ನೆನಪಿಸಿಕೊಳ್ಳಬಹುದು. ಹೀಗೆ ಭಾಷೆಯ ರಚನೆ ಎರಡು ಬಗೆಯದಾಗಿರುತ್ತದೆ.

೨. ಉತ್ಪಾದಕತೆ (Productivity). ಭಾಷೆಯ ರಚನಾಂಗಗಳನ್ನು ಸೇರಿಸಿ ಹೊಸ ಶಬ್ದರೂಪಗಳನ್ನು ಹೊರಡಿಸಲು ಸಾಧ್ಯ. ಈ ಶಬ್ದಗಳನ್ನು ಆಡುವವರಾಗಲಿ ಕೇಳುವವರಾಗಲಿ ಈ ಹಿಂದೆ ಹೇಳಿಲ್ಲದಿರಬಹುದು, ಕೇಳಿಲ್ಲದಿರಬಹುದು—ಈ ರೂಪ ದಲ್ಲಿ. ಆದರೂ ಈ ಹೊಸ ಶಬ್ದರೂಪವೂ ಕಷ್ಟವಿಲ್ಲದೆ ಅರ್ಥವಾಗುತ್ತದೆ. ಇಂಥವನ್ನು ಉತ್ಪಾದನೆಗಳೆನ್ನುತ್ತಾರೆ. ಉದಾಹರಣೆ ನಿಸಾರ್ ಅಹಮದ್ ಅವರ 'ದುಡ್ಡಸ್ತಿಕೆ' ಎಂಬ ಶಬ್ದರೂಪ.

೩. ಯಾದೃಚ್ಛಿಕತೆ (Arbitrariness). ಯಾವುದೇ ನಿರ್ದಿಷ್ಟ ಭಾಷೆಯ ನಿರ್ದೇಶಿತ ಶಬ್ದದ ಲಕ್ಷಣಕ್ಕೂ ಅದರಿಂದ ಸೂಚಿತವಾಗುವ ಅರ್ಥಕ್ಕೂ ಸಹಜವಾದ

---

* Seven characteristics of human language : Hockett.

ಅಂತರ್ಗತವಾದ ಸಂಬಂಧ ಇಲ್ಲದಿರುವುದು. ಉದಾಹರಣೆಗೆ ದುಂಬಿಯ ಸಂದೇಶ ಪ್ರಸಾರ ವಿಧಾನ ಗಮನಿಸಿ. ದುಂಬಿಗಳು ಕುಣಿಯುತ್ತಾ ಹಾರುವಾಗ ಅವುಗಳ ಚಲನೆಯ ವಿಧಾನ ಮಕರಂದವಿರುವ ದೂರ ಅಥವಾ ನೆಲೆಯನ್ನು ಸೂಚಿಸಬಹುದು. ನೇರವಾಗಿ ಸೂಚಿಸುವ ಈ ಬಗೆಯನ್ನು ಉಕ್ತಸಂಗತಿಗಳ ನೇರ ಸೂಚನೆ (iconic) ಎನ್ನುತ್ತಾರೆ. ಆದರೆ ಭಾಷೆಯಲ್ಲಿ ಧ್ವನಿಸಮೂಹಕ್ಕೂ ಉಕ್ತಸಂಗತಿ ಅಥವಾ ವಸ್ತುವಿಗೂ ಇಂತಹ ನೇರ ಅಂತರ್ಗತ ಸಂಬಂಧವಿಲ್ಲ. ಹಿಂದೆ ನೀರಿನ ಉದಾಹರಣೆಯಿಂದ ಇದನ್ನು ಹೇಳಿದೆ. ಆದ್ದರಿಂದಲೇ ಇವು ಯಾದೃಚ್ಛಿಕ ಸಂಕೇತಗಳು ಮಾತ್ರ.

೪. ಅಂತರ್‌ವಿನಿಮಯಕ್ಷಮತೆ (Interchangeability). ಒಂದು ಭಾಷೆಯನ್ನು ಬಳಸುವವರು ಆ ಭಾಷೆಯ ಚೌಕಟ್ಟಿನಲ್ಲಿಯೇ ಮಾತಿನ ಮೂಲಕ, ಹೇಳುವುದರಿಂದಾಗಲಿ ಕೇಳುವುದರಿಂದಾಗಲಿ, ಸಂದೇಶ ರವಾನಿಸಬಲ್ಲರು, ತಿಳಿಯಬಲ್ಲರು. ಆದ್ದರಿಂದಲೇ ಒಂದು ಭಾಷಾ ಸಮುದಾಯದಲ್ಲಿ ಒಡನಾಟ, ವ್ಯವಹಾರ ಭಾಷೆಯಿಂದ ಸಾಧ್ಯವಾಗುವುದು. ಇದರಿಂದ ಶ್ರಮದ ಹಂಚಿಕೆ ಮಾತ್ರವಲ್ಲ ಮಾನವ ಚಟುವಟಿಕೆಗಳ ವಿಕಾಸವೂ ಸಾಧ್ಯವಾಗಿದೆ. ಒಂದು ಭಾಷೆಯನ್ನು ಅರ್ಥಮಾಡಿಕೊಳ್ಳುವುದು ಎಂದಾಗ ಎರಡು ಬಗೆಯ ಜ್ಞಾನ ಅಗತ್ಯ. ಒಂದು, ಆಡುತ್ತಿರುವ ಅಥವಾ ಕೇಳುತ್ತಿರುವ ನಿರ್ದಿಷ್ಟ ಭಾಷೆಯ ಭಾಷಾಜ್ಞಾನವಿರಬೇಕು. ಎರಡನೆಯದಾಗಿ ಪ್ರಾಪಂಚಿಕ ಜ್ಞಾನವೂ ಇರಬೇಕು. ಆಗ ಮಾತ್ರ ಆ ಭಾಷೆಯ ಮೂಲಕ ಸೂಚಿತವಾಗುವ ಅರ್ಥವೂ ತಿಳಿಯುವುದು.

೫. ವಿಶಿಷ್ಟತೆ (Specialization). ಪ್ರತಿ ಭಾಷೆಯೂ ತನ್ನ ರಚನೆ ಮತ್ತು ಅರ್ಥಗಳ ಕಟ್ಟಿನಲ್ಲಿ ಸಂದೇಶಗಳನ್ನು ಅಭಿವ್ಯಕ್ತಗೊಳಿಸಲು ಸಮರ್ಥವಾದ ಒಂದು ವಿಶಿಷ್ಟ ಪದ್ಧತಿಯನ್ನು ಹೊಂದಿರುತ್ತದೆ. ಉಕ್ತವಾದ ಮಾತುಗಳಿಗೂ ಕ್ರಿಯೆಗಳಿಗೂ ಅರ್ಥಕ್ಕೂ ನೇರವಾದ ಭೌತಿಕ ಸಂಬಂಧವಿರುವುದಿಲ್ಲವಾದರೂ ರೂಢಿಯಿಂದ ಆ ವಿಶಿಷ್ಟ ಪದ್ಧತಿಯ ಅರಿವಾಗಿರುತ್ತದೆ. ಆದ್ದರಿಂದ ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತದೆ.

೬. ಪರ್ಯಾಯ ಬಳಕೆ (Displacement). ಉಲ್ಲೇಖಗೊಂಡ ವ್ಯಕ್ತಿ, ವಸ್ತು, ಸಂಗತಿ ನೇರವಾಗಿ ಎದುರಿಗಿದ್ದಾಗ ಮಾತ್ರವಲ್ಲದೆ ಪರ್ಯಾಯವಾಗಿಯೂ ಭಾಷೆಯನ್ನು ಅವುಗಳನ್ನು ಸೂಚಿಸಲು ಬಳಸಬಹುದು. ಹಿಮಪಾತ ಕಂಡಿಲ್ಲದಿರಬಹುದು. ವಿಜಯನಗರ ಸಾಮ್ರಾಜ್ಯದ ವಿಷಯ ಗತಕಾಲಕ್ಕೆ ಸಂಬಂಧಿಸಿದ್ದು. ಇಂತಹ ಸಂದರ್ಭಗಳಲ್ಲಿ ಕೇಳುವವರು ಆ ವ್ಯಕ್ತಿ, ವಸ್ತು, ಸಂಗತಿ ಎದುರಿಗಿಲ್ಲದಿದ್ದರೂ ಕ್ರಿಯೆ ಕಾಣದಿದ್ದರೂ ಮಾತಿನ ಮೂಲಕ ಅರ್ಥಮಾಡಿಕೊಳ್ಳಬಲ್ಲರು.

೭. ಸಾಂಸ್ಕೃತಿಕ ಪ್ರಸರಣ (Cultural transmission). ಭಾಷೆ ರಕ್ತಗತವಾಗಿ ಬರುವುದಿಲ್ಲ, ಆನುವಂಶೀಯತೆಯಿಂದ ಬರುವಂತಹುದಲ್ಲ, ಕಲಿಕೆಯಿಂದ

ಮಾತ್ರ ಬರುವಂತಹುದು ಎಂಬುದನ್ನು ಹಿಂದೆಯೇ ಹೇಳಿದೆ. ಹೀಗೆ ಅನುಕರಣೆಯಿಂದ ಭಾಷೆಯ ಮೂಲಕ ಕಲಿತ ಜ್ಞಾನವನ್ನು ಮಾತಿನ ಮೂಲಕ ಪ್ರಸರಿಸುತ್ತೇವೆ. ಜ್ಞಾನ ಸಂಚಿತವಾಗುವುದು ಈ ಬಗೆಯ ನಿರಂತರ ಪ್ರಸರಣದಿಂದ. ಜಗತ್ತಿನ ವಸ್ತು ಸಂಗತಿಗಳ ಜ್ಞಾನ, ಜೀವನಾನುಭವ ಬೆಳೆಯುವುದು ಈ ಬಗೆಯ ಸಂಚಿತವಾದ ಜ್ಞಾನ ಪ್ರಸರಣದಿಂದ. ಭಾಷೆ ಅದಕ್ಕೆ ಮೂಲವಾಗುತ್ತದೆ.

ಹೀಗೆ ಭಾಷೆ ಮನುಷ್ಯನ ಬದುಕಿನ ಅನಿವಾರ್ಯವಾದ ಅವಿಭಾಜ್ಯವಾದ ಭಾಗವಾಗಿದೆ. ಅದು ಸಮಾಜದ, ಸಂಸ್ಕೃತಿಯ ಹಾಗೂ ಮನುಷ್ಯನ ಸಕಲ ಚಿಂತನೆಗೂ, ವ್ಯವಹಾರಕ್ಕೂ ಅಗತ್ಯವಾದ ಭಾಗವಾಗಿದೆ.

# ೨. ಭಾಷೆಯ ಹುಟ್ಟು

ಭಾಷೆಯ ಹುಟ್ಟನ್ನು ಕುರಿತು ಎಷ್ಟೊಂದು ಚರ್ಚೆ, ವಾದ ವಿವಾದ ನಡೆದಿದೆ ಯೆಂದರೆ ಆ ವಿಷಯದ ಬಗ್ಗೆ ಚರ್ಚಿಸಬಾರದೆಂಬ ಅಭಿಪ್ರಾಯ ಭಾಷಾ ವಿಜ್ಞಾನಿಗಳಲ್ಲಿ ಉಂಟಾಯಿತು. ಭಾರತದಂತೆ ಇತರೆಡೆಗಳಲ್ಲೂ ಭಾಷೆಯನ್ನು ದೇವರು ಸೃಷ್ಟಿಸಿದನೆಂಬ ನಂಬಿಕೆ ಬೇರೂರಿತ್ತು. ಭಾಷೆಯ ಅರೆಕೊರೆಗಳು, ನಿರಂತರ ಬದಲಾಗುವ ಭಾಷೆಯ ಸ್ವಭಾವ ಇವುಗಳೆಲ್ಲ ಭಾಷೆ ಮನುಷ್ಯನಿಂದ ಸೃಷ್ಟಿಯಾದದ್ದು ಎಂಬುದನ್ನು ಸ್ಪಷ್ಟಪಡಿಸುತ್ತವೆ ಎನ್ನುತ್ತಾನೆ, ಯೆಸ್ಪರ್ಸನ್. ಸೃಷ್ಟಿಸಿಕೊಂಡುದು ಎಂದರೆ ಬುದ್ಧಿಪೂರ್ವಕವಾಗಿ ರೂಪಿಸಿದ್ದಲ್ಲ. ಮನುಷ್ಯನ ಅಗತ್ಯಗಳನ್ನು ಪೂರೈಸಲು ಕಾಲಕ್ರಮೇಣ ಹಲವಾರು ರೀತಿಯಿಂದ ರೂಪಿತವಾದುದು ಎಂದರ್ಥ. ಅವಶ್ಯಕತೆ ಭಾಷೆಯ ಉಗಮಕ್ಕೆ ಮೂಲಕಾರಣ. ಭಾಷೆಯ ಉಗಮಕ್ಕೆ ಸಂಬಂಧಿಸಿದಂತೆ ಹಲವು ವಾದಗಳನ್ನು ಮಂಡಿಸಲಾಗಿದೆ. ಯಾವುದೇ ಒಂದು ವಾದದಿಂದ ಭಾಷೆಯ ಹುಟ್ಟನ್ನು ಕುರಿತು ಇದು ಹೀಗೇ ಎಂದು ಹೇಳುವಂತಿಲ್ಲ. ಏಕೆಂದರೆ ಭಾಷೆಯ ಉಗಮದ ವಿಶ್ಲೇಷಣೆ ತುಂಬ ಜಟಿಲವಾದದ್ದು. ಕೆಲವು ವಾದಗಳನ್ನು ಸಂಕ್ಷಿಪ್ತವಾಗಿ ಮುಂದೆ ಸೂಚಿಸಿದೆ.

**೧. ಅನುಕರಣ ವಾದ :** ಲೀಬ್ನಿಜ್ ಎಂಬಾತ ಈ ವಾದದ ಪ್ರತಿಪಾದಕ. ನಿಸರ್ಗದ ನಡುವೆ ಬದುಕಬೇಕಿದ್ದ ಮನುಷ್ಯನಿಗೆ ನಿಸರ್ಗದ ಪ್ರಾಣಿ ಪಕ್ಷಿಗಳ ಸಂಪರ್ಕ, ಒಡನಾಟ ಸಹಜವಾದದ್ದೆ. ಅವುಗಳ ಚಲನವಲನ, ವರ್ತನೆಗಳನ್ನು ಗಮನಿಸಿ ಅನುಕರಿಸಿದುದರಿಂದಲೇ ಕಲೆಗಳೂ ಸೃಷ್ಟಿಯಾದುವು. ಅಂತೆಯೇ ಭಾಷೆ. ಪ್ರಾಣಿ ಪಕ್ಷಿಗಳ ಕೂಗನ್ನು ಗಮನಿಸಿದ ಮನುಷ್ಯ ಅನುಕರಿಸಿದ. ಕಾಲಕ್ರಮೇಣ ಅವುಗಳನ್ನು ಸೂಚಿಸಲು ಆ ಶಬ್ದಗಳೇ ರೂಢಿಗೆ ಬಂದುವು. ಕಾಕಾ–ಕಾಗೆ, ಗೂಗೂ–ಗೂಬೆ, ಕೊಕ್ಕೋ–ಕೋಳಿ, ಮೇಮೇ–ಮೇಕೆ ಇತ್ಯಾದಿ ಅನುಕರಣ ಶಬ್ದಗಳಿರುವುದು ನಿಜ. ಧ್ವನಿಗಳ ಅನುಕರಣೆ ಪ್ರಾಣಿ ಪಕ್ಷಿಗಳಿಗೆ ಆರೋಪಿತವಾದುವು. ಆದರೆ ಒಂದು ಭಾಷೆಯಲ್ಲಿ ಇಂತಹ ಎಷ್ಟು ಶಬ್ದಗಳಿರಲು ಸಾಧ್ಯ? ಇದಿಷ್ಟೇ ಭಾಷೆಯಲ್ಲ. ಭಾಷೆಯ ಈ ಅನುಕರಣವಾದವನ್ನು ಮ್ಯಾಕ್ಸ್ ಮುಲ್ಲರ್ ರಂತಹವರು ಬೌಬೌ ಥಿಯರಿ ಎಂದು ಹಾಸ್ಯಮಾಡಿದರು. ಅದು ಅಷ್ಟಕ್ಕೆ ನಿಂತಿತು.

**೨. ಉದ್ಗಾರ ವಾದ :** ಭಾವೋದ್ರೇಕ ಸಂದರ್ಭದಲ್ಲಿ ಪ್ರಾದಿಮ ಮಾನವ ಉದ್ಗರಿಸಿದ ಶಬ್ದಗಳೇ ಮುಂದೆ ಭಾಷೆಯಾಗಲು ಕಾರಣವಾಯಿತು ಎಂಬುದು ಈ ವಾದ. ಇಂತಹ ಕೆಲವು ಶಬ್ದಗಳೂ ಭಾಷೆಯಲ್ಲಿರುತ್ತವೆ. ಆಹಾ, ಥೂ, ಛೀ, ಓ, ಹೂಂ ಇತ್ಯಾದಿ. ಆದರೆ ಭಾವೋದ್ಗಾರಗಳು ಮನುಷ್ಯನಿಗೆ ಮಾತ್ರ ಸೀಮಿತ

ವಾದುವಲ್ಲ. ಪ್ರಾಣಿ ಪಕ್ಷಿಗಳ ಕಿರುಚಾಟದಲ್ಲೂ ಇವು ವ್ಯಕ್ತ. ಭಾಷೆ ಮನುಷ್ಯನಿಗೆ ವಿಶಿಷ್ಟವಾದದ್ದು, ಪ್ರಾಣಿಗಳ ಭಾವೋದ್ರೇಕ ಧ್ವನಿಗಳಿಗಿಂತ ಭಿನ್ನ, ಅಮೂರ್ತ ಅನಿಸಿಕೆಗಳನ್ನೂ ಸೂಚಿಸುವ ಶಕ್ತಿ ಉಳ್ಳದ್ದು ಎಂದಾಗ ಈ ವಾದದ ಮಿತಿ ಸ್ಪಷ್ಟ ವಾಗುತ್ತದೆ. ಇದನ್ನು ಪೂಹ್ ಪೂಹ್ ಥಿಯರಿ ಎಂದು ಹಾಸ್ಯಮಾಡಿದರು.

**೩. ಅನುರಣನ ವಾದ :** ಮ್ಯಾಕ್ಸ್ ಮುಲ್ಲರ್ ಮೊದಲು ಈ ವಾದವನ್ನು ಪ್ರತಿಪಾದಿಸಿ ಅನಂತರ ಸಮಾಧಾನವಾಗದೆ ಸ್ವತಃ ಕೈಬಿಟ್ಟರು. ಬೇರೆಯವರು ಡಿಂಗ್ ಡಾಂಗ್ ಥಿಯರಿ ಎಂದು ಇದನ್ನು ಹಾಸ್ಯಮಾಡಿದರು. ಪ್ರತಿಯೊಂದು ವಸ್ತುವಿಗೂ ಪ್ರಕೃತಿದತ್ತವಾದ ನಾದ ಹೊರಡಿಸುವ ಸಾಮರ್ಥ್ಯವಿರುತ್ತದೆ. ಅವುಗಳ ನಾದ ಭಿನ್ನವಾದುವು. ಹಾಗೇ ಅವುಗಳು ಮನುಷ್ಯನಲ್ಲಿ ಬೇರೆ ಬೇರೆ ಭಾವನೆಗಳನ್ನು ಮೂಡಿಸುತ್ತವೆ. ಆ ಧ್ವನಿಗಳ ಅನುರಣನವೇ ಭಾಷೆ. ಇದು ಈ ವಾದದ ಅರ್ಥ. ಗಾನ, ಗಂಟೆ, ದಿಡೀರ್, ಡಮರುಗ ಇತ್ಯಾದಿ ಆ ಬಗೆಯ ಶಬ್ದಗಳು.

**೪. ಶ್ರಮಪರಿಹಾರ ವಾದ :** ಮನುಷ್ಯ ಶ್ರಮದ ಕೆಲಸ ಮಾಡುವಾಗ ಅನೈಚ್ಛಿಕವಾಗಿ ಉಸಿರುಬಿಡುತ್ತಾ ಧ್ವನಿ ಹೊರಡಿಸುತ್ತಾನೆ. ಆದರಿಂದ ಅವನಿಗೆ ಒಂದು ಬಗೆಯ ಸಮಾಧಾನವಾಗುತ್ತದೆ, ಶ್ರಮ ಕಡಿಮೆಯಾದಂತೆ ಎನಿಸುತ್ತದೆ. ಈಗಲೂ ಕೆಲಸಗಾರರು ವಿದ್ಯುತ್‌ಕಂಬ ನೆಡುವಾಗಲೋ, ಭಾರವಾದುದನ್ನು ಸರಿಸು ವಾಗಲೋ ಲಯಬದ್ಧವಾಗಿ ಧ್ವನಿಮಾಡುವುದನ್ನು, ಕೆಲವು ಶಬ್ದಗಳನ್ನು ಉಚ್ಚರಿ ಸುವುದನ್ನು ಗಮನಿಸಬಹುದು. ಬಹುಶಃ ಪ್ರಾಥಮಿಕ ಮನುಷ್ಯನೂ ಕಷ್ಟದ ಕೆಲಸ ಮಾಡುವಾಗ ಹೀಗೆ ಶಬ್ದಗಳನ್ನು ಉಚ್ಚರಿಸುತ್ತಿದ್ದಿರಬಹುದು. ಅಂತಹ ಕೆಲವು ಶಬ್ದಗಳು ಭಾಷೆಯಲ್ಲಿ ಸೇರಿದ್ದರೆ ಆಶ್ಚರ್ಯವಿಲ್ಲ. ಹೊಯ್ಲು, ಐಸಾ, **heave, haul** ಇತ್ಯಾದಿ. ಈ ವಾದವನ್ನು ನೋರಿ (Noire) ಎಂಬಾತ ಪ್ರತಿಪಾದಿಸಿದ. ಇದೂ ಸಹ ಅಸಮರ್ಪಕ ವಿವರಣೆ ಎನಿಸಿಕೊಂಡಿತು. ಇದು ಯೋ–ಹೇ–ಹೋ ಸಿದ್ಧಾಂತ.

**೫. ಸಂಜ್ಞಾ ಭಾಷೆ :** ಆದಿ ಮಾನವರು ಮೊದಲು ಆಂಗಿಕ ಸಂಜ್ಞೆಗಳ ಮೂಲಕ ತಮ್ಮ ಇಚ್ಛೆಯನ್ನು ಸೂಚಿಸುತ್ತಿದ್ದಿರಬೇಕು. ನಾವು ಈಗಲೂ ಕೆಲವೊಮ್ಮೆ ಸಂಜ್ಞೆಗಳನ್ನು ಬಳಸುವುದುಂಟು. ಬುಡಕಟ್ಟಿನ ಜನಾಂಗದವರು ಈಗಲೂ ಸನ್ನೆ, ಭಾಷೆ ಎರಡನ್ನೂ ಬಳಸುತ್ತಾರೆ. ಮೂಕರಲ್ಲಿ ಸನ್ನೆಯೇ ಭಾಷೆಯಾಗಿದೆ. ಹೀಗೆ ಕಾಲಕ್ರಮೇಣ ಸಂಜ್ಞೆಯೇ ಭಾಷೆಯಾಯಿತು ಎಂಬುದು ಈ ವಾದ. ಸಂಜ್ಞಾ ಭಾಷೆ ಆಂಗಿಕ ಚಲನೆ ಸೂಚನೆಗಳಿಗೆ ಸಂಬಂಧಿಸಿದ್ದು. ಭಾಷೆ ಬೌದ್ಧಿಕವಾದದ್ದು. ಆಂಗಿಕ ಸನ್ನೆಗಳಿಂದ ಭಾಷೆ ವಿಕಾಸಗೊಂಡಿತು ಎನ್ನುವುದು ಸರಿಯಲ್ಲ ಎಂಬುದು ಈ ವಾದ ಕ್ಕಿರುವ ಮುಖ್ಯ ಆಕ್ಷೇಪಣೆ.

ಇವೇ ಅಲ್ಲದೆ ಸಂಪರ್ಕ ವಾದ (contact theory), ಟಾ–ಟಾ ಸಿದ್ಧಾಂತ, ಸಂಗೀತ ಸಿದ್ಧಾಂತ (sing-song theory) ಮುಂತಾದ ವಾದ–ಸಿದ್ಧಾಂತಗಳೂ ಪ್ರತಿಪಾದಿತವಾಗಿವೆ.

ಈ ಎಲ್ಲ ವಾದಗಳೂ ಭಾಷೆಯ ಯಾವುದಾದರೂ ಒಂದೊಂದು ಅಂಶವನ್ನು ವಿವರಿಸುತ್ತವೆಯೇ ಹೊರತು ಮುಖ್ಯ ಅಂಶಗಳನ್ನಲ್ಲ, ಅಲ್ಲದೆ ಇವು ಭಾಷೆಯ ಪ್ರಧಾನ ಲಕ್ಷಣದತ್ತ ಗಮನವನ್ನೇ ಹರಿಸುವುದಿಲ್ಲ ಎಂಬುದು ಯೆಸ್ಪರ್ಸನ್‌ನ ಅಭಿಪ್ರಾಯ. ಆತ ಭಾಷೆಯ ಪ್ರಾರಂಭದ ಅವಸ್ಥೆಯನ್ನು ತಿಳಿಯಲು ಮೂರು ಮಾರ್ಗಗಳನ್ನು ಸೂಚಿಸಿದ. ಒಂದು, ಮಕ್ಕಳ ಭಾಷೆ. ಎರಡು, ಆದಿವಾಸಿ ಜನಾಂಗಗಳ ಭಾಷೆ. ಮೂರು, ಭಾಷಾ ಚರಿತ್ರೆಯ ಅಧ್ಯಯನ. ಮಕ್ಕಳು ಮನೆಯ ಹಿರಿಯರನ್ನು, ಸುತ್ತಮುತ್ತಲ ಪರಿಸರವನ್ನು ಗಮನಿಸುತ್ತ ಭಾಷೆ ಕಲಿಯುತ್ತವೆ, ಅನುಕರಣದಿಂದ. ಆದರೆ ಅದಕ್ಕೂ ಮೊದಲು ಶಿಶು ಹೇಗೆ ಧ್ವನಿ ಹೊರಡಿಸುತ್ತದೆ, ತಾನು ಕೇಳಿರದ ಹೊಸ ಧ್ವನಿಗಳನ್ನು, ಧ್ವನಿಸಮುಚ್ಚಯಗಳನ್ನು ಉಚ್ಚರಿಸುತ್ತದೆಯೇ ಮುಂತಾದುವನ್ನು ಗಮನಿಸಬೇಕು. ಈಗಾಗಲೇ ಇರುವ, ಮನೆಯವರು ನೆರೆಹೊರೆಯವರು ಆಡುವ, ಭಾಷೆಯನ್ನು ಮಗು ಕಲಿಯುವುದು ಬೇರೆ, ಅದಕ್ಕೂ ಮೊದಲಿನ ಅದರ ಮಾತಿನ ಪ್ರಯತ್ನಗಳೇ ಬೇರೆ ಎಂಬುದು ಯೆಸ್ಪರ್ಸನ್‌ನ ಅಭಿಪ್ರಾಯ. ಭಾಷೆಯ ಉಗಮ ತಿಳಿಯಲು ಆ ಮೊದಲ ಪ್ರಯತ್ನಗಳನ್ನು ಗಮನಿಸಬೇಕು, ಅದು ಮುಖ್ಯ. ಆದಿವಾಸಿಗಳ ಭಾಷೆ ಹೆಚ್ಚು ಬದಲಾವಣೆಗೆ ಒಳಗಾಗುವುದಿಲ್ಲ. ಆದ್ದರಿಂದ ಮೂಲರೂಪಗಳನ್ನು ಉಳಿಸಿ ಕೊಂಡಿರುವ ಸಾಧ್ಯತೆ ಹೆಚ್ಚು. ಅವರಲ್ಲಿ ಪ್ರಾಚೀನಕಾಲದ ಭಾಷೆಯ ಲಕ್ಷಣ ಗಳನ್ನು ತಿಳಿಯುವುದು ಸಾಧ್ಯ. ಹಾಗೇ ಒಂದು ಭಾಷೆಯ ಚರಿತ್ರೆಯ ಅಧ್ಯಯನದ ಮೂಲಕ ಅದರ ಹಿಂದಿನ ಸ್ವರೂಪವನ್ನು ತಿಳಿಯಬಹುದು. ಒಂದು ಭಾಷೆ ಈಗ ನಾಗರಿಕ ಭಾಷೆ ಎನಿಸಿಕೊಂಡಿದ್ದರೂ ಅದರ ಹಿಂದಿನ, ಹಿಂದಿನ ರೂಪಗಳಿಗೆ ಹೋದಂತೆ ಅದು ಆದಿಮಾನವನ ಭಾಷೆಯ ಸ್ವರೂಪವನ್ನು ಹೋಲಬಹುದು. ಈ ಮೂರೂ ಮಾರ್ಗಗಳಿಂದ ಭಾಷೆಯ ಮೊದಮೊದಲ ಸ್ವರೂಪವನ್ನು ತಿಳಿಯಬಹುದು. ಮಕ್ಕಳು ಎರಡು ತುಟಿಗಳನ್ನು ಬಳಸಿ ಮಾಡುವ ಧ್ವನಿಗಳನ್ನು ಗಮನಿಸಬಹುದು. ಅಳುವುದನ್ನು ಬಿಟ್ಟರೆ ಇವೇ ಸುಲಭವಾಗಿ ಹೊರಡಿಸಬಹುದಾದ ಧ್ವನಿಗಳು. ಮಮ್ಮ, ಪಪ್ಪ ಮಕಾರ ಪಕಾರಯುಕ್ತವಾದುವು. ಪ್ರಪಂಚದ ಬಹುತೇಕ ಭಾಷೆ ಗಳಲ್ಲಿ ತಂದೆ ತಾಯಿಯನ್ನು ಸೂಚಿಸುವ ಧ್ವನಿಸಮುಚ್ಚಯಗಳು ಈ ಬಗೆಯವು. ಅನಂತರ ನಿರ್ದಿಷ್ಟವಸ್ತುವನ್ನು ಸೂಚಿಸುವ ಶಬ್ದಗಳು ಇಡೀ ವಾಕ್ಯಾರ್ಥದ ಇಂಗಿತವನ್ನು ಕೊಡುತ್ತವೆ. ಆದಿವಾಸಿ ಭಾಷೆಗಳನ್ನು ಗಮನಿಸಿದರೆ ಹೀಗೆಯೇ ಮೊದಮೊದಲು ವಸ್ತುವನ್ನು ಸೂಚಿಸುವ ಶಬ್ದಗಳು ಹುಟ್ಟಿರಬೇಕು ಎಂಬುದು ಸ್ಪಷ್ಟ. ಇಂದಿಗೂ ಪ್ರಾಚೀನ ಜನಾಂಗಗಳ ಭಾಷೆಗಳಲ್ಲಿ ಬಿಳಿ ಹಸು, ಕಂದು ಹಸು,

ಕಪ್ಪು ಹಸು, ಚುಕ್ಕೆ ಹಸುಗಳನ್ನು ಸೂಚಿಸಲು ಬೇರೆ ಬೇರೆ ಶಬ್ದಗಳಿವೆ. ಆದರೆ ಇಡೀ 'ವರ್ಗ'ವನ್ನು ಸೂಚಿಸುವ ಹಸು ಎಂಬ ಸಾಮಾನ್ಯ ಶಬ್ದವಿಲ್ಲ. ಇನ್ನೊಂದು ಭಾಷೆಯಲ್ಲಿ ಕೈ ತೊಳೆ, ಮುಖ ತೊಳೆ, ತಲೆ ತೊಳೆ, ಕಾಲು ತೊಳೆ ಎಂಬುವಕ್ಕೆ ಪ್ರತ್ಯೇಕ ಶಬ್ದಗಳಿವೆ. ಆದರೆ ಸಾಮಾನ್ಯ ಶಬ್ದ ತೊಳೆಯುವುದು ಇಲ್ಲ. ಅಂದರೆ ಸಾಮಾನ್ಯವಾದ ಅಮೂರ್ತ ಶಬ್ದಗಳು ಅನಂತರ ಬಂದುವು. ಅದು ಭಾಷೆಯ ಬೆಳವಣಿಗೆಯ ಬೇರೆ ಘಟ್ಟ. ಕನ್ನಡದಲ್ಲಿ ಅಣ್ಣ, ತಮ್ಮ ಶಬ್ದಗಳಿವೆ. ಅವು ಸಂಬಂಧವನ್ನೂ ವಯೋಭೇದವನ್ನೂ ಒಮ್ಮೆಗೇ ಸೂಚಿಸುತ್ತವೆ. ಆದರೆ ಸಾಮಾನ್ಯ ಶಬ್ದ ಸೋದರ ಎಂಬುದಿಲ್ಲ. ಆದ್ದರಿಂದ ಭಾಷೆಯ ಪ್ರಾರಂಭದ ಘಟ್ಟ ಇಂದ್ರಿಯ ಗ್ರಾಹ್ಯ ಶಬ್ದಗಳಿಂದ ಕೂಡಿರುತ್ತದೆ. ಅಮೂರ್ತ, ಪರಿಕಲ್ಪನೆಗೆ ಸಂಬಂಧಿಸಿದುವು ವಿಕಾಸ ಕ್ರಮದಲ್ಲಿ ತರುವಾಯದವು. ಇದರ ಬಗ್ಗೆ ಇನ್ನೊಂದು ದೃಷ್ಟಿಯಿಂದಲೂ ವಾದಿಸುವ ಸಾಧ್ಯತೆ ಇದೆ. ಸಂಸ್ಕೃತ, ಗ್ರೀಕ್, ಲ್ಯಾಟಿನ್, ಇಂಗ್ಲಿಷ್ ಮುಂತಾದ ಆರ್ಯಭಾಷೆಗಳಲ್ಲಿ ಅಣ್ಣ, ತಮ್ಮ, ಅಕ್ಕ, ತಂಗಿ ಎಂದು ವಯೋಭೇದವನ್ನು ಸೂಚಿಸುವ ಬೇರೆ ಬೇರೆ ಶಬ್ದಗಳಿಲ್ಲ. ಭ್ರಾತೃ, ಸೋದರಿ, **brother, sister** ಎಂಬ ಒಡಹುಟ್ಟಿದವರನ್ನು ಸೂಚಿಸುವ ಸಾಮಾನ್ಯ ಶಬ್ದಗಳಿವೆ. ಅಗ್ರಜ, ಅನುಜ ಎಂಬ ಸಂಸ್ಕರಿಸಿದ ರೂಪಗಳನ್ನು ಮುಂದೆ ಮಾಡಿಕೊಳ್ಳಲಾಯಿತು. ಅಗ್ರ+ಜ, ಅನು+ಜ ಇತ್ಯಾದಿ. ಆದ್ದರಿಂದ ಅಮೂರ್ತ ಶಬ್ದಗಳು ವಿಕಾಸ ಕ್ರಮದಲ್ಲಿ ಅನಂತರ ಬಂದುವು ಎಂದು ಹೇಗೆ ಹೇಳುವುದು? ಪ್ರಾರಂಭದ ಘಟ್ಟದಲ್ಲಿ ಆರ್ಯಭಾಷೆಗಳ ಸ್ವರೂಪ ಹೇಗಿತ್ತು ಎಂಬುದು ಈಗ ತಿಳಿಯುವುದಿಲ್ಲ. ಪ್ರತ್ಯೇಕ ಶಬ್ದಗಳಿದ್ದಿದ್ದರೆ ಒಂದಲ್ಲ ಒಂದು ಭಾಷೆಯಲ್ಲಿ ಉಳಿದುಬರಬೇಕಿತ್ತು. ಹಿರಿಯ, ಕಿರಿಯ ವಯೋಭೇದ ಪರಿಗಣಿಸದ ಸಾಮಾನ್ಯ ಶಬ್ದಗಳೇ ಮೊದಲು ಬಂದುವೇ ಎಂಬ ಸಂದೇಹವೂ ಬರುತ್ತದೆ. ಆದರೆ ಪ್ರಾದಿಮ ಜನಾಂಗಗಳ ಭಾಷಾ ಅಧ್ಯಯನ ಆಧಾರಿತ ವಿಚಾರಗಳನ್ನು ಸುಲಭವಾಗಿ ತಳ್ಳಿಹಾಕುವಂತಿಲ್ಲ ಎಂದು ಮಾತ್ರ ಹೇಳಬಹುದು. ಈ ಬಗೆಯ ಅಧ್ಯಯನಗಳಿಂದ ಒಂದು ಭಾಷೆಯ ಪ್ರಾರಂಭದ ಸ್ಥಿತಿಯನ್ನು ಮಾತ್ರ ಊಹಿಸಬಹುದು.

## ೩. ಭಾಷಾ ವಿಜ್ಞಾನ

ಭಾಷೆಯನ್ನು ಕುರಿತ ಅಧ್ಯಯನ ವೇದಗಳ ಕಾಲದಿಂದಲೇ ಪ್ರಾರಂಭವಾಗುತ್ತದೆ. ಯಾಸ್ಕ, ಪಾಣಿನಿ, ಪತಂಜಲಿ ಮೊದಲಾದವರು ವ್ಯಾಕರಣಗಳನ್ನು ಬರೆದರು. ಸಂಸ್ಕೃತ ವ್ಯವಹಾರದಲ್ಲಿದ್ದ ಕಾಲದಲ್ಲಿ ಅವರೆಲ್ಲ ಬರೆದದ್ದು. ಭಾಷೆಯನ್ನು ಅಧ್ಯಯನ ಮಾಡಿ ವಿವರಿಸಿ, ನಿಯಮಗಳನ್ನು ಹಾಕಿದ ಕಾರಣ ಭಾಷೆಯ ಸ್ವರೂಪ, ಬೆಳವಣಿಗೆಯ ವಿಧಾನ ಇತ್ಯಾದಿಗಳ ಕಡೆ ಅವರ ಗಮನ ಹರಿಯಲಿಲ್ಲ. ಅಲ್ಲದೆ ಸಂಸ್ಕೃತ ಮಾತ್ರವೇ ಅವರ ಅಧ್ಯಯನಕ್ಕೆ ಒಳಗಾದ ಭಾಷೆ. ಹಾಗೇ ಪ್ರತ್ಯೇಕವಾಗಿ ಗ್ರೀಕರಲ್ಲೂ ಭಾಷಾ ವಿಷಯಕ ವಿವೇಚನೆಗಳು ನಡೆದುವು. ಅವರಿಗೂ ತಮ್ಮ ಭಾಷೆಯೇ ಮುಖ್ಯವಾಯಿತು. ಅನಂತರ ರೋಮನ್ನರ ಆಸಕ್ತಿಯೂ ಲ್ಯಾಟಿನ್ ಕಡೆ ಮಾತ್ರವೇ ಹರಿಯಿತು. ಭಾರತದಲ್ಲಿ ಸಂಸ್ಕೃತ ಕಟ್ಟುಪಾಡುಗಳಿಗೆ ಒಳಗಾಗಿ, ಬೆಳವಣಿಗೆ ಕುಂಠಿತವಾಗಿ, ವ್ಯವಹಾರದಿಂದ ಮರೆಯಾಗಿ ವಿದ್ವಾಂಸರ ಭಾಷೆಯಾಗಿ ಉಳಿಯಿತು. ಬೇರೆ ಭಾಷೆಗಳು ಕಾಣಿಸಿಕೊಂಡಂತೆ ಆ ಭಾಷೆಯ ವೈಯಾಕರಣರೂ ಸಂಸ್ಕೃತ ಮಾದರಿಯನ್ನೇ ಅನುಸರಿಸಿದರು. ಕನ್ನಡದಲ್ಲಿ ನಾಗವರ್ಮ, ಕೇಶಿರಾಜ, ಭಟ್ಟಾಕಲಂಕರು ಪ್ರಖ್ಯಾತರಾಗಿದ್ದಾರೆ. ಕೇಶಿರಾಜನ 'ಶಬ್ದಮಣಿದರ್ಪಣ' ಅವನ ಕಾಲದ ಭಾಷಾಸ್ವರೂಪವನ್ನು, ಆಗುತ್ತಿದ್ದ ಬದಲಾವಣೆಗಳನ್ನು ತಿಳಿಸುವುದರಿಂದ ಆಧುನಿಕರೂ ಮೆಚ್ಚಿದ್ದಾರೆ. ಆದರೆ ಭಾಷೆಯನ್ನು ಕುರಿತ ಸಾಮಾನ್ಯವಾದ ಅಧ್ಯಯನ ಪ್ರಾರಂಭವಾದದ್ದು ಹತ್ತೊಂಬತ್ತನೇ ಶತಮಾನದಿಂದ ಈಚೆಗೆ ಎನ್ನಬಹುದು. ಹದಿನೆಂಟನೇ ಶತಮಾನದಲ್ಲಿಯೇ ಬೇರೆ ಬೇರೆ ಭಾಷೆಗಳ ತುಲನೆ ಪ್ರಾರಂಭವಾಯಿತು. ಲ್ಯಾಟಿನ್-ಸಂಸ್ಕೃತಗಳ ಸಾಮ್ಯವನ್ನು ಗುರುತಿಸಲಾಯಿತು. ಅನಂತರ ಯುರೋಪಿನ ಹಾಗೂ ಭಾರತೀಯ ಭಾಷೆಗಳ ಅಧ್ಯಯನವೂ ಪ್ರಾರಂಭವಾಯಿತು. ದ್ರಾವಿಡ ಭಾಷಾವರ್ಗವು ಪ್ರತ್ಯೇಕ ಭಾಷಾವರ್ಗವೆಂದು ಗುರುತಿಸಿದವರಲ್ಲಿ ರಾಸ್ಕ್ ಎಂಬಾತ ಮೊದಲಿಗ. ಜಾಕಬ್ ಗ್ರಿಮ್ ತೌಲನಿಕ ಭಾಷಾ ವಿಜ್ಞಾನಕ್ಕೆ ಸೂತ್ರಗಳನ್ನು ರೂಪಿಸಿದ. ಅವನ ಅನಂತರದ ಘಟ್ಟಗಳಲ್ಲಿ ಭಾಷಾ ವಿಜ್ಞಾನದ ಸ್ವರೂಪವೇ ಬದಲಾಯಿತು.

ಇಂದು ಭಾಷೆಯ ಹುಟ್ಟಿನಿಂದ ಆರಂಭಿಸಿ, ವಿವಿಧ ಭಾಷಾವರ್ಗಗಳ ವಿವೇಚನೆ, ಅವುಗಳ ಇತಿಹಾಸ, ಭಾಷೆಯ ವಿವಿಧ ರಚನಾವಿನ್ಯಾಸ ಇತ್ಯಾದಿ ಸಮಗ್ರ ಶಾಸ್ತ್ರೀಯ ವಿವೇಚನೆ ಭಾಷಾ ವಿಜ್ಞಾನದಲ್ಲಿ ಸೇರುತ್ತದೆ. ಸಾಮಾಜಿಕ, ಸಾಂಸ್ಕೃತಿಕ, ಮನೋವೈಜ್ಞಾನಿಕ ಮೊದಲಾದ ವಿಜ್ಞಾನ ವಿಭಾಗಗಳ ಸಂಬಂಧವನ್ನು ಹೊಂದಿ, ಹಲವು ಶಿಸ್ತುಗಳನ್ನು ಕೂಡಿಸಿಕೊಂಡು ಭಾಷಾ ವಿಜ್ಞಾನ ಬೆಳೆದಿದೆ. ಸ್ಥೂಲವಾಗಿ ಭಾಷಾ ವಿಜ್ಞಾನದ ಅಧ್ಯಯನವನ್ನು ಮೂರು ವಿಧವಾಗಿ ವಿಂಗಡಿಸಲಾಗುತ್ತದೆ.

೧. ವಿವರಣಾತ್ಮಕ ಭಾಷಾ ವಿಜ್ಞಾನ. ೨. ತೌಲನಿಕ ಭಾಷಾ ವಿಜ್ಞಾನ.
೩. ಐತಿಹಾಸಿಕ ಭಾಷಾ ವಿಜ್ಞಾನ.

**ವಿವರಣಾತ್ಮಕ ಭಾಷಾ ವಿಜ್ಞಾನ :** ಒಂದು ಭಾಷೆ ಈಗ ಯಾವ ಸ್ಥಿತಿಯಲ್ಲಿದೆಯೊ ಹಾಗೆಯೇ ಅದನ್ನು ಅಭ್ಯಾಸಮಾಡುವುದು. ಒಂದು ಭಾಷೆಯ ಧ್ವನಿಗಳು ಹುಟ್ಟುವ ಸ್ಥಾನ, ಧ್ವನಿಗಳ ವ್ಯವಸ್ಥೆ, ವರ್ಗೀಕರಣ, ಪದಕೋಶ, ಅಂತರ್‌ರಾಷ್ಟ್ರೀಯ ಧ್ವನಿಲಿಪಿಗಳ ನಕ್ಷೆ ಇತ್ಯಾದಿ ವಿವರಗಳ ಅಧ್ಯಯನ ವಿವರಣಾತ್ಮಕ ಅಥವಾ ವರ್ಣನಾತ್ಮಕ ಭಾಷಾ ವಿಜ್ಞಾನ. ಇದರಲ್ಲಿ ವಿವಿಧ ಶಾಖೆಗಳಿದ್ದು ಪ್ರತ್ಯೇಕ ಅಧ್ಯಯನ ಶಾಸ್ತ್ರವಾಗಿ ಬೆಳೆದಿವೆ. ಧ್ವನಿಮಾ ವಿಜ್ಞಾನ (Phonemics), ಧ್ವನಿವಿಜ್ಞಾನ (Phonetics), ಆಕೃತಿಮ ವಿಜ್ಞಾನ (Morphology), ವಾಕ್ಯ ವಿಜ್ಞಾನ (Syntax) ಇತ್ಯಾದಿ ಪ್ರತ್ಯೇಕ ಅಧ್ಯಯನ ವಿಷಯಗಳಾಗುತ್ತವೆ. ಮೇಲೆ ವಿವರಿಸಿದ ಧ್ವನಿ ಉತ್ಪತ್ತಿ ಸ್ಥಾನ, ವ್ಯವಸ್ಥೆ, ವರ್ಗೀಕರಣಗಳು ಧ್ವನಿವಿಜ್ಞಾನದಲ್ಲಿ ಬರುತ್ತವೆ. ಮನುಷ್ಯ ಉತ್ಪಾದಿಸಬಲ್ಲ, ಉಚ್ಚರಿಸಬಲ್ಲ ಧ್ವನಿಗಳೆಲ್ಲವೂ ಒಂದು ಭಾಷೆಯಲ್ಲಿರುವುದಿಲ್ಲ. ಒಂದು ಭಾಷೆಯಲ್ಲಿ ಧ್ವನಿಯ ಉಚ್ಚಾರಣೆಯ ವ್ಯತ್ಯಾಸದಿಂದ ಅರ್ಥವ್ಯತ್ಯಾಸವೂ ಆಗುವಂತಿದ್ದರೆ ಆಗ ಆ ಭಾಷೆಯಲ್ಲಿ ಆ ಧ್ವನಿ ಇದೆ ಎಂದು ಸ್ವೀಕರಿಸುತ್ತಾರೆ. ಹೀಗೆ ಅರ್ಥವ್ಯತ್ಯಾಸ ಉಂಟುಮಾಡುವ ಆ ಧ್ವನಿ ಆ ಭಾಷೆಯ ಧ್ವನಿಮಾ (Phoneme) ಆಗುತ್ತದೆ. ಇದನ್ನು ಜೋಡಿ ಶಬ್ದಗಳಿಂದ ಗುರುತಿಸಬಹುದು. ಕಡಿ–ಗಡಿ (kaḍi–gaḍi) ಎಂಬಲ್ಲಿ ಕ–ಗ ಉಚ್ಚಾರಣೆಯಲ್ಲಿ ವ್ಯತ್ಯಾಸವಿದೆ, ಉಳಿದಂತೆ ಪರಿಸರ ಒಂದೇ ಬಗೆಯದು. ಈ ಒಂದು ಧ್ವನಿ ವ್ಯತ್ಯಾಸದಿಂದ ಅರ್ಥ ಬದಲಾಯಿತು. pat–bat ಗಳಲ್ಲಿ p–b ಗಳ ವ್ಯತ್ಯಾಸದಿಂದ ಅರ್ಥ ಬೇರೆಯಾಯಿತು. ಹೀಗೆ ಕನ್ನಡದಲ್ಲಿ /ಕ/, /ಗ/ ಧ್ವನಿಮಾಗಳಿವೆ, ಇಂಗ್ಲಿಷಿನಲ್ಲಿ /p/, /b/ ಧ್ವನಿಮಾಗಳು ಪ್ರತ್ಯೇಕವಾಗಿ ಇವೆ ಎಂದಾಯಿತು. ಆದರೆ ಇನ್ನೊಂದು ಉದಾಹರಣೆ ನೋಡಿ. ಕನ್ನಡದಲ್ಲಿ ಮಲೆ–ಮಳೆ ಯಲ್ಲಿ ಲ–ಳ ವ್ಯತ್ಯಾಸದಿಂದ ಅರ್ಥವೂ ಬದಲಾಗುತ್ತದೆ. ಆದ್ದರಿಂದ ಕನ್ನಡದಲ್ಲಿ ಲ–ಳ ಎರಡೂ ಪ್ರತ್ಯೇಕ ಧ್ವನಿಮಾಗಳು. ಆದರೆ ಸಂಸ್ಕೃತದಲ್ಲಿ /ಲ/ ಮಾತ್ರ ಇದೆ. ವಲಯ–ವಳಯ ಎಂದು ಉಚ್ಚರಿಸಿದರೂ ಅರ್ಥವ್ಯತ್ಯಾಸವಿಲ್ಲ. ಆದ್ದರಿಂದ ಸಂಸ್ಕೃತದಲ್ಲಿ 'ಳ' ಕ್ಕೆ ಪ್ರತ್ಯೇಕ ಧ್ವನಿಮಾ ಸ್ಥಾನವಿಲ್ಲ. ಕೆಲವೊಮ್ಮೆ ಪರಿಸರದ ಕಾರಣ ಉಚ್ಚಾರಣೆ ಬದಲಾಗುತ್ತದೆ. ಇಂಗ್ಲಿಷ್‌ನಲ್ಲಿ pin ಮತ್ತು spin ಗಳ p ಉಚ್ಚಾರಣೆ : ಆರಂಭದಲ್ಲಿ p ಇದ್ದರೆ ಮಹಾಪ್ರಾಣವಾಗಿ ph ಎಂಬಂತೆ ಉಚ್ಚಾರಣೆಯಾಗುತ್ತದೆ ; spin ನಲ್ಲಿ s ಜೊತೆಗೆ ಇರುವುದರಿಂದ ಅಲ್ಪಪ್ರಾಣವಾಗಿ p ಎಂದೇ ಉಚ್ಚಾರವಾಗುತ್ತದೆ. ಇಂತಹ ಪರಿಸರದ ಮಹಿಮೆಯಿಂದ ನಿರ್ದಿಷ್ಟ ಉಚ್ಚಾರ ಪಡೆಯುವ ಧ್ವನಿಮಾಗಳು ಪೂರಕ ಪ್ರಸಾರದಲ್ಲಿವೆ (complementary distribution) ಎನ್ನುತ್ತಾರೆ. ಹೀಗೆ

ಧ್ವನಿಮಾ ವಿಜ್ಞಾನವು ಒಂದು ಭಾಷೆಯಲ್ಲಿರುವ ಧ್ವನಿಮಾಗಳನ್ನೂ ಉಪಧ್ವನಿಗಳನ್ನೂ ಗುರುತಿಸಿ ತಿಳಿಸುತ್ತದೆ. ಒಂದು ಭಾಷೆಯಲ್ಲಿನ ಅರ್ಥಪೂರ್ಣವಾದ ಚಿಕ್ಕ ಘಟಕವೆಂದರೆ ಆಕೃತಿಮ. ಸ್ವತಂತ್ರವಾಗಿ ಬಳಸಿದಾಗಲೂ ಅರ್ಥ ನೀಡುವ ಮನೆ, ಹುಡುಗ, ಬಂದನು ಇತ್ಯಾದಿ ಶಬ್ದಗಳೂ, ಹಾಗೇ ಪದಗಳ ಜೊತೆ ಸೇರಿ ಅರ್ಥ ನೀಡುವ ಪ್ರತ್ಯಯಗಳೂ ಆಕೃತಿಮಗಳು. ಇವುಗಳನ್ನು ಮುಕ್ತರೂಪ, ಬದ್ಧರೂಪ ಆಕೃತಿಮಗಳೆನ್ನುತ್ತಾರೆ. ಪ್ರಕೃತಿ, ಪ್ರತ್ಯಯ, ಸಮಾಸ ಪದಗಳ ಅಧ್ಯಯನ ಶಾಖೆ ಇದಾಗಿದೆ. 'ವಾಕ್ಯವಿಜ್ಞಾನ' ಪದಗಳು ಸೇರಿ ಆಗುವ ವಾಕ್ಯರಚನೆಯ ಅಧ್ಯಯನವಾಗಿದೆ. ಪ್ರತಿಯೊಂದು ಭಾಷೆಗೂ ಅದರದೇ ಆದ ವಾಕ್ಯರಚನೆಯ ಕ್ರಮವಿರುತ್ತದೆ. ಇಂಗ್ಲಿಷಿನಲ್ಲಿ Rama killed Ravana ಎಂಬುದರಲ್ಲಿ ಕ್ರಮವ್ಯತ್ಯಾಸ ಮಾಡಿದರೆ ಅರ್ಥದಲ್ಲೂ ವ್ಯತ್ಯಾಸವಾಗುತ್ತದೆ. Ravana killed Rama ಎಂದಾಗ ಕ್ರಮದ ಜೊತೆಗೆ ಅರ್ಥವೂ ಬೇರೆಯಾಗುತ್ತದೆ. ಆದರೆ ಕನ್ನಡ ರಚನೆಯಲ್ಲಿ ವ್ಯತ್ಯಾಸವಾಗುವುದಿಲ್ಲ. ಕರ್ತೃ ಕರ್ಮ ಕ್ರಿಯಾಪದಗಳು ಯಾವ ಕ್ರಮದಲ್ಲಿದ್ದರೂ ಅರ್ಥ ವ್ಯತ್ಯಾಸವಾಗುವುದಿಲ್ಲ. ರಾಮ ರಾವಣನನ್ನು ಕೊಂದನು ; ರಾವಣನನ್ನು ರಾಮ ಕೊಂದನು ; ಕೊಂದನು ರಾವಣನನ್ನು ರಾಮ. ಹೀಗೆ ವಿಭಕ್ತಿ ಪ್ರತ್ಯಯಗಳಿಂದ ಕೂಡಿರುವ ಕನ್ನಡ ಭಾಷೆಯಲ್ಲಿ ಪದಗಳ ಅನುಕ್ರಮ ಮುಖ್ಯವಾಗುವುದಿಲ್ಲ. ಹೀಗೆ ವಾಕ್ಯರಚನೆಯ ಅಧ್ಯಯನ ವಾಕ್ಯವಿಜ್ಞಾನದ ಶಾಖೆಯುದಾಗಿದೆ.

**ತೌಲನಿಕ ಭಾಷಾ ವಿಜ್ಞಾನ:** ಬೇರೆ ಬೇರೆ ಭಾಷೆಗಳನ್ನು ಅಧ್ಯಯನ ಮಾಡಿ ಅವುಗಳಲ್ಲಿ ಪರಸ್ಪರ ಸಾಮ್ಯಗಳನ್ನೋ ವ್ಯತ್ಯಾಸಗಳನ್ನೋ ಗುರುತಿಸಬಹುದು. ಪರಸ್ಪರ ಹೋಲುವ ಭಾಷೆಗಳನ್ನು ವರ್ಗಗಳಾಗಿ ವಿಂಗಡಿಸಬಹುದು. ಅಂತಹ ವರ್ಗ ಅಥವಾ ಗುಂಪುಗಳ ಪರಸ್ಪರ ತುಲನೆಯಿಂದ ಅವುಗಳ ಮೂಲಭಾಷೆಯನ್ನೋ, ಕವಲೊಡೆದ ಬಗೆಗಳನ್ನೋ, ಆಗ ಆದ ಬದಲಾವಣೆಗಳನ್ನೋ ಗುರುತಿಸಬಹುದು. ಒಂದು ವರ್ಗದ ಭಾಷೆಯ ಮೂಲಭಾಷೆಯನ್ನು (Proto-language) ತಿಳಿಯಲು ಇದು ಸಹಾಯಕವಾಗುತ್ತದೆ. ಜ್ಞಾತಿ ಭಾಷೆಗಳ ಬಗ್ಗೆ ಅರಿವೂ ಮೂಡುತ್ತದೆ. ಇದನ್ನು ಐತಿಹಾಸಿಕ ಭಾಷಾ ವಿಜ್ಞಾನದ ಅಂಗವೆಂದೂ ಹೇಳುತ್ತಾರೆ. ಆದರೆ ತೌಲನಿಕ ಭಾಷಾ ವಿಜ್ಞಾನಕ್ಕೆ ಐತಿಹಾಸಿಕ ಹಾಗೂ ವಿವರಣಾತ್ಮಕ ಭಾಷಾ ವಿಜ್ಞಾನಗಳೆರಡರ ನೆರವೂ ಅಗತ್ಯ. ಏಕೆಂದರೆ ವೈಜ್ಞಾನಿಕವಾಗಿ ತರ್ಕಬದ್ಧವಾಗಿ ಊಹೆ ಮಾಡಲು ಭಾಷೆಯ ರಚನಾ ವಿವರ, ಇತಿಹಾಸಜ್ಞಾನ ಎರಡೂ ಅಗತ್ಯ. ಇಂಡೋ ಆರ್ಯನ್, ಇಂಡೋ ಯೂರೋಪಿಯನ್, ದ್ರಾವಿಡ ಭಾಷಾ ವರ್ಗಗಳೆಂದು ಗುರುತಿಸಲು ಸಾಧ್ಯವಾದುದು ಈ ವಿಧಾನದಿಂದ. ಭಾಷೆ ಬದಲಾಗುತ್ತಿರುತ್ತದೆ. ಪ್ರದೇಶ ವಿಸ್ತಾರವಾಗಿದ್ದರೆ ಭಾಷೆಯ ವ್ಯತ್ಯಾಸಗಳು ಕಾಲಕ್ರಮೇಣ ಹೆಚ್ಚುತ್ತಾ ಪ್ರತ್ಯೇಕ ಉಪಭಾಷೆಗಳಾಗುತ್ತವೆ. ಉಪಭಾಷೆಗಳು ಕ್ರಮೇಣ ಸ್ವತಂತ್ರಭಾಷೆ

ಗಳಾಗಬಹುದು. ಈಗಿರುವ ಭಾಷೆಗಳಿಂದ ಧ್ವನಿ, ಪದಗಳ ಅರ್ಥ ಇತ್ಯಾದಿ ಗಮನಿಸಿ ಮೂಲ ಪಿತೃಭಾಷೆಯನ್ನು ಪುನರ್ ರಚಿಸಬಹುದು. ಈಗ ತಮಿಳು, ಕನ್ನಡ, ತೆಲುಗು, ಮಲೆಯಾಳಂ ಮುಂತಾದ ಭಾಷೆಗಳ ಆಧಾರದಿಂದ ಹಿಂದೆ ಇದ್ದ ಮೂಲ ದ್ರಾವಿಡ ಭಾಷೆಯ ಸ್ವರೂಪವನ್ನು ಪುನರ್ ರಚಿಸಬಹುದು.

**ಐತಿಹಾಸಿಕ ಭಾಷಾ ವಿಜ್ಞಾನ:** ಭಾಷೆ ನಿಂತ ನೀರಿನಂತಲ್ಲ, ಹರಿಯುವ ನದಿಯಂತೆ ನಿತ್ಯ ಪರಿವರ್ತನಶೀಲ. ಭಾಷೆಯೊಂದನ್ನು ಆಡುವ ಜನಾಂಗಕ್ಕೆ ಇತಿಹಾಸವಿರುವಂತೆ ಆ ಭಾಷೆಗೂ ಒಂದು ಇತಿಹಾಸವಿರುತ್ತದೆ. ಏಕೆಂದರೆ ನೂರಾರು ಅಥವಾ ಸಾವಿರ ವರ್ಷದಷ್ಟು ಹಳೆಯದಾದ ಭಾಷೆ ಧ್ವನಿವ್ಯತ್ಯಾಸ, ಅರ್ಥವ್ಯತ್ಯಾಸ, ಅನ್ಯಭಾಷಾ ಸ್ವೀಕರಣ, ಸಾಮ್ಯಮೂಲ ವ್ಯತ್ಯಾಸ, ಶಬ್ದನಷ್ಟ ಮೊದಲಾದ ಬಗೆಬಗೆಯ ಬದಲಾವಣೆಗೆ ಒಳಗಾಗಿ ನಿರಂತರ ಬೆಳೆಯುತ್ತಿರುತ್ತದೆ. ಹೊಸ ಕಾಲದ ಅಗತ್ಯಗಳನ್ನು ಪೂರೈಸಿಕೊಳ್ಳಲು ನವಶಬ್ದಸೃಷ್ಟಿ ಅಥವಾ ಇರುವ ಶಬ್ದಕ್ಕೆ ಹೊಸ ಅರ್ಥ ಕಲ್ಪನೆಗಳನ್ನು ಮಾಡುತ್ತ ಹೋಗುತ್ತದೆ. ಲಿಖಿತ ಭಾಷೆಗಳಲ್ಲಿ ದಾಖಲೆ ಇರುತ್ತದೆ. ಅಂದರೆ ಲಿಪಿಯುಳ್ಳ ಭಾಷೆ ಗ್ರಂಥಸ್ಥವಾಗಿರುತ್ತದೆ. ಆದ್ದರಿಂದ ಅದರ ಬೇರೆ ಬೇರೆ ಕಾಲದ ಬದಲಾವಣೆಗಳನ್ನು, ಬೇರೆ ಅವಸ್ಥೆಗಳನ್ನು ಗುರುತಿಸಿ ಅದರ ಚರಿತ್ರೆ ತಿಳಿಯಬಹುದು. ಲಿಪಿಯಿಲ್ಲದ ಕ್ಷುಲ್ಲಕ ಅಥವಾ ನಿರ್ಲಿಪಿ ಭಾಷೆಗಳಿಗೆ ದಾಖಲೆ, ಗ್ರಂಥಗಳ ಆಧಾರವಿರುವುದಿಲ್ಲವಾದ್ದರಿಂದ ಬೇರೆ ಬೇರೆ ಕಾಲದ ಮಾರ್ಪಾಡು ತಿಳಿಯಲಾಗುವುದಿಲ್ಲ. ಆದ್ದರಿಂದ ಅವುಗಳ ಇತಿಹಾಸ ತಿಳಿಯುವುದಿಲ್ಲ. ಐತಿಹಾಸಿಕ ಭಾಷಾ ವಿಜ್ಞಾನ ಭಾಷೆಯ ಹಲವಾರು ಅವಸ್ಥೆಗಳನ್ನು ಹೋಲಿಸಿ ಗುರುತಿಸುತ್ತದೆ. ಕನ್ನಡದಲ್ಲಿ ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ, ಹೊಸಗನ್ನಡ ಅವಸ್ಥೆಗಳನ್ನು ಶಾಸನ, ಗ್ರಂಥಗಳ ಆಧಾರದಿಂದ ಗುರುತಿಸಲು ಸಾಧ್ಯವಾಗಿದೆ. ಪಕಾರ ಎಂದಿನಿಂದ ಹಕಾರವಾಗಿ ಮಾರ್ಪಡತೊಡಗಿತು, ೞ ದಿಂದ ಕೂಡಿದ ಶಬ್ದಗಳು 'ೞ' ಉಚ್ಚಾರಣೆ ತಪ್ಪಿಹೋದ ನಂತರ ಹೇಗೆ ಳಯುಕ್ತವಾದುವು ಅಥವಾ ಬೇರೆ ಉಚ್ಚಾರಣೆ ಪಡೆದುವು, ಸಬಿಂದುಕ ಶಬ್ದಗಳು ಎಂದಿನಿಂದ ಅಬಿಂದುಕಗಳಾದುವು, ಅನ್ಯಭಾಷೆಯ ಧ್ವನಿಗಳು (ಫ಼, ಜ಼) ಬಂದು ಸೇರಿದ ಬಗೆ ಇತ್ಯಾದಿ ಭಾಷೆಯ ಹಲವು ಐತಿಹಾಸಿಕ ಸಂಗತಿಗಳು ಐತಿಹಾಸಿಕ ಭಾಷಾ ವಿಜ್ಞಾನದಿಂದ ತಿಳಿಯುತ್ತವೆ.

## ೪. ಭಾಷಾ ವರ್ಗಗಳು

ಪ್ರಪಂಚದಲ್ಲಿ ಸುಮಾರು ೭೦೦೦ ಭಾಷೆಗಳಿದ್ದುವೆಂದೂ ಈಗ ಸುಮಾರು ೩೦೦೦ ಭಾಷೆಗಳಿವೆಯೆಂದೂ ಹೇಳಲಾಗಿದೆ. ಈ ಭಾಷೆಗಳೆಲ್ಲ ಸ್ವತಂತ್ರವಾಗಿ ಜನ್ಮ ತಳೆದುವಲ್ಲ. ಭಾಷೆಗಳ ಜೊತೆಗೆ ಉಪಭಾಷೆಗಳೂ ಇವೆ. ಹಿಂದೆ ಇದ್ದವು ಕೆಲವು ಈಗ ಕಣ್ಮರೆಯಾಗಿವೆ. ಕೆಲವಕ್ಕೆ ಲಿಪಿ, ಗ್ರಂಥಗಳಿವೆ. ಎಷ್ಟೋ ಭಾಷೆಗಳಿಗೆ ಲಿಪಿಯಿಲ್ಲದ ಕಾರಣ ಆಧಾರ ಸಾಮಗ್ರಿಗಳು ದೊರೆಯುವುದಿಲ್ಲ. ಭಾಷೆಗಳನ್ನು ವರ್ಗೀಕರಿಸುವಾಗ ಈ ಎಲ್ಲವನ್ನೂ ಗಮನಿಸಬೇಕಾಗುತ್ತದೆ. ಅಲ್ಲದೆ ವರ್ಗೀಕರಣದ ವಿಧಾನಗಳ ಬಗೆಗೇ ಚರ್ಚೆ ಇದೆ. ಯಾವ ವಿಧಾನ ಹೆಚ್ಚು ಸಮಂಜಸ, ಉಪಯುಕ್ತ ಎಂಬ ಪ್ರಶ್ನೆಯೂ ಬರುತ್ತದೆ. ಭಾಷೆಗಳನ್ನು ಭೌಗೋಳಿಕ, ಜಾನಾಂಗಿಕ, ರಾಚನಿಕ, ವಾಂಶಿಕ ಎಂಬುದಾಗಿ ವರ್ಗೀಕರಿಸುವುದುಂಟು.

೧. **ಭೌಗೋಳಿಕ :** ಪ್ರಪಂಚದ ಭಾಷೆಗಳನ್ನು ಆಯಾ ಭೌಗೋಳಿಕ ಖಂಡಗಳ ಆಧಾರದ ಮೇಲೆ ವಿಂಗಡಿಸುವ ಕ್ರಮ ಇದಾಗಿದೆ. ಇದು ಬಹಳ ಸರಳ, ಸುಲಭ ಎಂದು ತೋರಿಕೆಗೆ ಅನಿಸುತ್ತದೆ. ಯೂರೋಪಿನ ಭಾಷೆಗಳು, ಭಾರತದ ಭಾಷೆಗಳು, ಉತ್ತರ ಅಮೆರಿಕದ ಭಾಷೆಗಳು, ಆಫ್ರಿಕದ ಭಾಷೆಗಳು ಇತ್ಯಾದಿ. ಈ ವಿಂಗಡನಾಕ್ರಮದಿಂದ ಒಂದು ಭಾಷೆಯನ್ನು ಎಲ್ಲಿ ಆಡುತ್ತಾರೆ ಎಂದು ತಿಳಿಯುತ್ತದೆಯೇ ಹೊರತು ಆ ಭಾಷೆಯ ಸ್ವರೂಪ ಲಕ್ಷಣ ತಿಳಿಯುವುದಿಲ್ಲ. ಒಂದೇ ಭೂಖಂಡದಲ್ಲಿ ವಿವಿಧ ವರ್ಗದ ಭಾಷೆಯಾಡಬಹುದು. ಭಾರತದಲ್ಲಿ ಉತ್ತರದ ಭಾಷೆಗಳಿಗೂ ದಕ್ಷಿಣದ ಭಾಷೆಗಳಿಗೂ ಸಂಬಂಧವಿಲ್ಲ. ಹಾಗೇ ಬಂಗಾಳಿ ಮತ್ತು ಕನ್ನಡ ಎರಡೂ ಒಂದೇ ಗುಂಪಿಗೆ ಸೇರುತ್ತವೆ ಎನ್ನುವಂತಿಲ್ಲ. ಹೀಗಾಗಿ ಈ ವಿಧಾನ ತರ್ಕಬದ್ಧವಲ್ಲ, ವೈಜ್ಞಾನಿಕವಲ್ಲ.

೨. **ಜಾನಾಂಗಿಕ :** ಜನಾಂಗದ ಆಧಾರದ ಮೇಲೆ ಹಿಂದಿನ ಭಾಷಾ ಶಾಸ್ತ್ರಜ್ಞರು ಭಾಷೆಗಳನ್ನು ವರ್ಗೀಕರಿಸಿದರು. ಇದೂ ಸಹ ಸಮರ್ಪಕವಲ್ಲ. ಪ್ರಪಂಚದ ಭಾಷೆಗಳನ್ನೆಲ್ಲ ಮೂರು ಜಾನಾಂಗಿಕ ವರ್ಗಗಳಾಗಿ ವಿಂಗಡಿಸಿದರು. ಆರ್ಯನ್, ತುರೇನಿಯನ್, ಸೆಮೆಟಿಕ್ ಎಂದು ಜನಾಂಗ ಆಧರಿಸಿ ವಿಂಗಡಿಸಿದಾಗ ಆಫ್ರಿಕಾ ಕೈಬಿಟ್ಟುಹೋಯಿತು. ಈ ಬಗೆಯ ವಿಂಗಡನೆಯ ಹಿಂದಿರುವ ತತ್ತ್ವವೆಂದರೆ, ಪ್ರಪಂಚದ ಜನರೆಲ್ಲ ಮೂರು ನಾಲ್ಕು ಮೂಲ ಜನಾಂಗ ಇಲ್ಲವೆ ಪಂಗಡಕ್ಕೆ ಸೇರಿದವರು ; ಅವರೇ ವಲಸೆ ಹೋಗಿ ಇತರ ಪ್ರದೇಶಗಳಲ್ಲಿ ಹರಡಿಕೊಂಡು ನೆಲಸಿದರು ಎಂಬುದು. ಆದರೆ ಒಂದು ಜನಾಂಗದವರು ಒಂದೇ ಭಾಷೆಯಾಡುತ್ತಿದ್ದರು ಎಂದು ಹೇಗೆ ಹೇಳುವುದು? ಆರ್ಯವರ್ಗದ ಜನ ದಕ್ಷಿಣ ಭಾರತದಲ್ಲಿ ದ್ರಾವಿಡ ಭಾಷೆಗಳನ್ನು ಆಡುತ್ತಿಲ್ಲವೆ, ಕನ್ನಡ ಆರ್ಯಭಾಷೆಯಾಗಲು ಸಾಧ್ಯವೆ? ಭಾಷೆ ಸಾಮಾಜಿಕ

ಸಂಬಂಧವನ್ನು ಸೂಚಿಸುತ್ತದೆ, ಜಾನಾಂಗಿಕ ಸಂಬಂಧವನ್ನಲ್ಲ. ಮೂರು ಜನಾಂಗಗಳಾಗಿ ವಿಂಗಡಿಸಿದಾಗ ಆಫ್ರಿಕಾ ಮತ್ತು ಚೀನಾ ಜನಾಂಗಗಳ ಗತಿಯೇನು? ಪ್ರಾಚೀನ ಜನಾಂಗಗಳು ವಲಸೆ ಹೋದಂತೆ ಇಂದಿಗೂ ವಲಸೆ ಹೋಗುವ ಮನುಷ್ಯ ಪ್ರವೃತ್ತಿ ನಿಂತಿಲ್ಲ. ನೀಗ್ರೊ ಜನಾಂಗದವರು ಅಮೆರಿಕಕ್ಕೆ ಹೋದಮೇಲೆ ಇಂಗ್ಲಿಷನ್ನೇ ಆಡುತ್ತಾರೆ. ಭಾರತಕ್ಕೆ ಬಂದ ಇತರ ಜನಾಂಗದವರು ಇಲ್ಲಿಯ ಭಾಷೆಗಳನ್ನೇ ಮಾತೃಭಾಷೆಯಾಗಿ ಸ್ವೀಕರಿಸಿದ್ದಾರೆ. ಕೇರಳದ ಮುಸ್ಲಿಮರಾಗಲಿ, ಕ್ರೈಸ್ತರಾಗಲಿ ಮಲೆಯಾಳಂ ಮಾತೃಭಾಷೆಯೆನ್ನುತ್ತಾರೆ. ಅರಬ್ಬಿ ಅಥವಾ ಉರ್ದು ಅಥವಾ ಇಂಗ್ಲಿಷ್ ಎನ್ನುವುದಿಲ್ಲ. ಜಾನಾಂಗಿಕ ವಿಂಗಡಣಾ ವಿಧಾನದಿಂದ ಈ ಸಮಸ್ಯೆಗಳಿಗೆ ಉತ್ತರ ದೊರೆಯುವುದಿಲ್ಲ. ಆದ್ದರಿಂದ ಭಾಷೆಯನ್ನು ಭಾಷೆಯ ರಚನೆಯ ಆಧಾರದ ಮೇಲೆ ವಿಂಗಡಿಸಬೇಕೆಂಬುದು ಗಮನಾರ್ಹವಾದವಾಗುತ್ತದೆ.

**೩. ರಾಚನಿಕ :** ಭಾಷೆಯನ್ನು ಅದರ ರಚನೆಯ ಅಂಶಗಳಾದ ಪದರಚನೆ, ವಾಕ್ಯರಚನೆಗಳ ಆಧಾರದಮೇಲೆ ವಿಂಗಡಿಸಬೇಕೆಂಬುದು ಆಧುನಿಕ ಭಾಷಾ ವಿಜ್ಞಾನಿಗಳ ಅಭಿಪ್ರಾಯ. ಆಗ ಎರಡು ಬಗೆಯ ವರ್ಗೀಕರಣ ಸಾಧ್ಯವಾಗುತ್ತದೆ. ಒಂದು, ರಾಚನಿಕ (Typological) ; ಎರಡು, ವಾಂಶಿಕ (Geneological). ಭಾಷೆಯನ್ನು ನಿತ್ಯ ಪರಿವರ್ತನಶೀಲ ಎಂದು ಕರೆದರೂ ಆ ಪರಿವರ್ತನೆ ಪದಕೋಶದಲ್ಲಾಗುವುದೇ ಹೆಚ್ಚು. ಅದರ ವ್ಯಾಕರಣದಲ್ಲಿ ವ್ಯತ್ಯಾಸವಾಗುವುದಿಲ್ಲ. ಅಂದರೆ ಅದರ ಪದರಚನೆ, ವಾಕ್ಯರಚನಾ ಕ್ರಮಗಳು ಮಾರ್ಪಡುವುದು ಅಪರೂಪ. ಬೇರೆ ಭಾಷೆಯ ಪ್ರಭಾವವೂ ರಚನಾಕ್ರಮದಮೇಲೆ ಕಡಮೆ. ಇದರಿಂದ ಭಾಷೆಯ ಸ್ವರೂಪವೂ ತಿಳಿಯುತ್ತದೆ. ಈ ಸೂತ್ರದನ್ವಯ ಪ್ರಪಂಚದ ಭಾಷೆಗಳನ್ನು ಐದು ಗುಂಪುಗಳನ್ನಾಗಿ ವಿಂಗಡಿಸಿದ್ದಾರೆ.

ಅ. ವಿವಿಕ್ತ ಭಾಷಾವರ್ಗ (Isolative) : ಇದನ್ನು ಪ್ರತ್ಯೇಕ ಪದ ಭಾಷಾವರ್ಗ ಎಂದು ಹೇಳುತ್ತಾರೆ. ಇದು ಕೇವಲ ಶಬ್ದಗಳಿಂದ ಕೂಡಿದ್ದು. ಈ ವರ್ಗದ ಭಾಷೆಯಲ್ಲಿ ಏಕಾಕ್ಷರ ಶಬ್ದಗಳೇ ಹೆಚ್ಚು. ಇಲ್ಲಿ ಪ್ರತಿ ಶಬ್ದಕ್ಕೂ ಅದು ಇರುವ ಸ್ಥಾನದಿಂದ ಬೇರೆ ಬೇರೆ ಅರ್ಥ ಬರುತ್ತದೆ. ಅಂದರೆ ವಾಕ್ಯ ಅರ್ಥವಾಗಲು ಪದಗಳಿಗೆ ಪ್ರತ್ಯಯಗಳ ಅಗತ್ಯವಿಲ್ಲ. ಸ್ಥಾನವೇ ಅರ್ಥವನ್ನು ಸೂಚಿಸುತ್ತದೆ. ಅಲ್ಲದೆ, ಆ ಕಾರಣದಿಂದಲೆ, ನಾಮಪದ, ಕ್ರಿಯಾಪದ, ಗುಣವಾಚಕಗಳಿಗೆ ವ್ಯತ್ಯಾಸವಿರುವುದಿಲ್ಲ. ಒಂದು ಪದ ಒಂದು ಸ್ಥಾನದಲ್ಲಿ ನಾಮಪದವಾಗಿದ್ದದ್ದು ಇನ್ನೊಂದು ಸ್ಥಾನದಲ್ಲಿದ್ದಾಗ ಕ್ರಿಯಾಪದವಾಗುತ್ತದೆ. ಉದಾಹರಣೆ ಚೀನೀ ಭಾಷೆ ; ಅಲ್ಲಿ ಏಕಾಕ್ಷರ ಶಬ್ದಗಳೇ ಇರುವುದು. ಅಲ್ಲದೆ ಒಂದು ಪದವನ್ನು ಒಂದು ರೀತಿ ಸ್ವರಾಘಾತ (accent) ಕೊಟ್ಟು ಉಚ್ಚರಿಸಿದರೆ ಒಂದು ಅರ್ಥ, ಇನ್ನೊಂದು ರೀತಿ ಘಾತ ಕೊಟ್ಟು ಉಚ್ಚರಿಸಿದರೆ ಬೇರೆ ಅರ್ಥ ಬರುತ್ತದೆ. ಉದಾ : sheu ಎಂಬುದನ್ನು

ಒಂದು ರೀತಿ ಉಚ್ಚರಿಸಿದರೆ ದೊರಕಿಸು ಎಂದರ್ಥ, ಇನ್ನೊಂದು ರೀತಿ ಉಚ್ಚರಿಸಿದರೆ ಕೊಡು ಎಂದರ್ಥ. mai ಎನ್ನುವಾಗ ಒಂದು ಉಚ್ಚಾರಣೆಗೆ ಕೊಳ್ಳು ಎಂದರ್ಥ, ಇನ್ನೊಂದು ಉಚ್ಚಾರಣೆಗೆ ಮಾರು ಎಂದರ್ಥ. twang ಎಂದರೆ ರಾಜ ಎಂದರ್ಥ. ದೀರ್ಘ ಉಚ್ಚಾರಣೆಯಿಂದ twang ಎಂದರೆ ಪ್ರಜೆಗಳು ಎಂದಾಗುತ್ತದೆ. ಹಾಗೇ ಸ್ಥಾನಬಲದಿಂದ ಬೇರೆ ಬೇರೆ ಅರ್ಥಗಳು. ta kuok ಎಂದರೆ ದೊಡ್ಡ ರಾಷ್ಟ್ರ, kuok ta ಎಂದರೆ ರಾಷ್ಟ್ರವು ದೊಡ್ಡದಾಗಿದೆ ಎಂಬ ವಾಕ್ಯವಾಗುತ್ತದೆ. ಅಂದರೆ ಅಲ್ಲಿ ವಿಶೇಷಣವಾಗಿದ್ದುದು ಇಲ್ಲಿ ಕ್ರಿಯಾಪದ. ಹೀಗೆ ವಿವಿಕ್ತ ಭಾಷೆಯಲ್ಲಿ ಧ್ವನಿಯ ಘಾತ ಮತ್ತು ಶಬ್ದದ ಸ್ಥಾನ ಎರಡೂ ಮುಖ್ಯವಾಗುತ್ತವೆ. ಸೂಡಾನಿಕ್, ಮಲೆಯನ್ ಭಾಷೆಗಳೂ ಈ ವರ್ಗಕ್ಕೇ ಸೇರುತ್ತವೆ.

ಆ. ಅಂಟು ಭಾಷಾವರ್ಗ (Agglutinative): ಈ ವರ್ಗದ ಭಾಷೆಗಳಲ್ಲಿ ಪ್ರಕೃತಿ ಮತ್ತು ಪ್ರತ್ಯಯ ಕೂಡಿ ಪದವಾಗುತ್ತದೆ. ಹಾಗೆ ಕೂಡಿದ ಅಥವಾ ಅಂಟಿದ (glue) ಎರಡನ್ನೂ ಗುರುತಿಸಬಹುದು, ಬಿಡಿಸಿ ತೋರಬಹುದು. ಇಲ್ಲಿ ಪ್ರತ್ಯಯಗಳ ಮೂಲಕವೇ ವಾಕ್ಯದಲ್ಲಿನ ಪದಗಳ ಸಂಬಂಧ ಅರ್ಥ ಸ್ಪಷ್ಟವಾಗುವುದು. ಈ ಪ್ರತ್ಯಯಗಳು ಒಂದು ಕಾಲಕ್ಕೆ ಸ್ವತಂತ್ರಶಬ್ದಗಳಾಗಿದ್ದಿರಬಹುದು. ಆದ್ದರಿಂದ ಇಲ್ಲಿ ಪ್ರಕೃತಿ ಪ್ರತ್ಯಯಗಳೆರಡೂ ತಮ್ಮ ವಿಶಿಷ್ಟತೆಯನ್ನು ಉಳಿಸಿಕೊಂಡು ಪ್ರಧಾನವಾಗುತ್ತವೆ. ದ್ರಾವಿಡ ಭಾಷೆಗಳು ಇದಕ್ಕೆ ಉದಾಹರಣೆ. ಮನೆ, ಮನೆಗೆ, ಮನೆಯೊಳಗೆ ಇತ್ಯಾದಿ. ಟರ್ಕಿಷ್ ಭಾಷೆಯೂ ಈ ಗುಂಪಿಗೆ ಸೇರುತ್ತದೆ: ev–ಮನೆ, ev–den ಮನೆಯಿಂದ, ev–im ನನ್ನ ಮನೆ, ev-im–den ನನ್ನ ಮನೆಯಿಂದ ಇತ್ಯಾದಿ. ಕನ್ನಡದ ಗೆ < ಕೆಯ್, ಒಳ್ < ಒಳಗೆ ಇತ್ಯಾದಿ ಪ್ರತ್ಯಯಗಳು ಹಿಂದೆ ಪ್ರತ್ಯೇಕ ಪದಗಳಾಗಿದ್ದುವು ಎಂಬುದು ಸ್ಪಷ್ಟ.

ಇ. ಪ್ರಾತ್ಯಯಿಕ ಭಾಷಾವರ್ಗ (Inflectional): ಇಲ್ಲೂ ಸಹ ಪ್ರಕೃತಿ ಪ್ರತ್ಯಯಗಳು ಸೇರಿ ಪದವಾದರೂ ಅವೆರಡನ್ನೂ ಬಿಡಿಸಿ ತೋರುವುದು ಕಷ್ಟ, ಹಾಗೆ ಕೂಡಿರುತ್ತವೆ. ಪ್ರತ್ಯಯಗಳು ತಮ್ಮ ಮೂಲಸ್ವರೂಪವನ್ನು ಕಳೆದುಕೊಂಡಿರುತ್ತವೆ, ಗುರುತಿಸಲಾಗದ ಹಾಗಾಗಿರುತ್ತವೆ. ಇದನ್ನು ರಾಸಾಯನಿಕ ಮಿಶ್ರಣ ಎಂದೂ ಕರೆದಿದ್ದಾರೆ. ಈ ವರ್ಗಕ್ಕೆ ಇಂಡೋಯೂರೋಪಿಯನ್ ಭಾಷೆಗಳು, ಸೆಮೆಟಿಕ್ ಭಾಷೆಗಳು ಉದಾಹರಣೆಯಾಗುತ್ತವೆ. ಸಂಸ್ಕೃತ ಸಹ ಇದೇ ವರ್ಗದ್ದು. ರಾಮಃ, ರಾಮೇಣ, ರಾಮಸ್ಯ ಮುಂತಾದುವಲ್ಲಿನ ಏಣ, ಅಸ್ಯಗಳಿಗೆ ವಿವರಣೆ ಕಷ್ಟ. ಸೆಮೆಟಿಕ್ ವರ್ಗದ ಅರಬ್ಬಿ ಭಾಷೆಯಲ್ಲಿ—Qtl ಮೂರು ವ್ಯಂಜನ ಕೂಡಿದ ಧಾತು. ಅದರಿಂದ ಆಗುವ ರೂಪಗಳನ್ನು ನೋಡಿ: Quatala ಅವನು ಕೊಂದನು, Quatila ಅವನು ಕೊಲ್ಲಲ್ಪಟ್ಟನು, Quatil ಕೊಲೆ, Quitl ಶತ್ರು. ಇವುಗಳಲ್ಲಿ ಪ್ರಕೃತಿ ಪ್ರತ್ಯಯಗಳನ್ನು ಬಿಡಿಸಿ ತೋರುವುದು ಕಷ್ಟ.

ಈ. ಬಹುಪದಯುಕ್ತ ಭಾಷಾವರ್ಗ (Poly-Synthetic): ಇಲ್ಲಿ ವಾಕ್ಯ ಒಂದು ಉದ್ದನೆಯ ಪದದಂತೆ ಇರುತ್ತದೆ. ಅಂದರೆ ವಾಕ್ಯದ ಕೆಲವು ಪದಗಳನ್ನು (ಪ್ರತ್ಯಯಗಳನ್ನು) ತೆಗೆದು ಉಳಿದವನ್ನು ಒಟ್ಟಿಗೆ ಕೂಡಿಸಿ ಒಂದು ಪದದಂತೆ ಹೇಳುವುದು. ಇಂತಹ ರಚನೆಗಳಲ್ಲಿ ಪದ ಹಾಗೂ ವಾಕ್ಯಗಳಿಗೆ ವ್ಯತ್ಯಾಸವೇ ಕಂಡು ಬರುವುದಿಲ್ಲ. ಪ್ರಾತ್ಯಯಿಕ ವರ್ಗದ ಭಾಷೆಯಲ್ಲಿ ಪ್ರಕೃತಿ ಮಾತ್ರ ತನ್ನ ಸ್ವರೂಪ ಕಳೆದುಕೊಂಡು ಗುರುತಿಸಲಾಗದಂತೆ ಆಗುತ್ತದೆ. ಇಲ್ಲಾದರೊ ಪದಗಳು ಕೂಡಿದಾಗ ತಮ್ಮ ಮೂಲಸ್ವರೂಪ ಕಳೆದುಕೊಳ್ಳುತ್ತವೆ. ಉತ್ತರ ಅಮೆರಿಕದ ಮೂಲನಿವಾಸಿ ಭಾಷೆಗಳು ಈ ವರ್ಗಕ್ಕೆ ಸೇರುತ್ತವೆ.

ಉ. ಅಂತರ್ಗಮಕ ಭಾಷಾವರ್ಗ (Incorporating): ವಾಕ್ಯಗಳಲ್ಲಿ ಮಾರ್ಪಾಟಿಗೆ ಒಳಗಾಗದ ಸರ್ವನಾಮ ಅಥವಾ ಕ್ರಿಯಾಪದಗಳಿಗೆ ಉಳಿದ ಪದ ಗಳನ್ನು ಶಿಥಿಲವಾಗಿ ಜೋಡಿಸಿ ವಾಕ್ಯಮಾಡುವುದು. ಅಂದರೆ ಸರ್ವನಾಮ/ ಕ್ರಿಯಾಪದವೆ ವಾಕ್ಯದ ಕೇಂದ್ರ, ಅದನ್ನೇ ಪೂರ್ಣವಾಕ್ಯವನ್ನಾಗಿಸುವ ಕ್ರಮ. ಬಾಸ್ಕ್ ಭಾಷೆ ಇದಕ್ಕೆ ಉದಾಹರಣೆ.

ಭಾಷಾರಚನೆಯನ್ನು ಗಮನಿಸಿ ಮಾಡುವ ವೈಜ್ಞಾನಿಕ ಎನ್ನಬಹುದಾದ ಈ ವಿಂಗಡಣಾಕ್ರಮದಲ್ಲೂ ಕೊರತೆಗಳಿವೆ. ಸಂಬಂಧವೇ ಇಲ್ಲದ ಎರಡು ದೂರದ ಪ್ರದೇಶಗಳ ಭಾಷೆಗಳ ರಚನೆಯ ವಿನ್ಯಾಸ ಒಂದೇ ಬಗೆಯದಾಗಿದೆ ಎಂದಾಕ್ಷಣ ಆ ಎರಡನ್ನೂ ಒಂದೇ ವರ್ಗಕ್ಕೆ ಸೇರಿಸುವುದು ಎಷ್ಟು ಉಚಿತ? ಚೀನೀ ಭಾಷೆಯ ಒಂದೆರಡು ಲಕ್ಷಣಗಳು ಇಂಗ್ಲಿಷಿನಲ್ಲೂ ಕಾಣಸಿಗುತ್ತವೆ. Rama killed Ravana, Ravana killed Rama. ಇಲ್ಲಿ ಸ್ಥಾನಪಲ್ಲಟದಿಂದ ಅರ್ಥವೂ ಬದಲಾಗುತ್ತದೆ. ಚೀನೀ ಮತ್ತು ಇಂಗ್ಲಿಷ್ ಒಂದೇ ಗುಂಪಿನವಲ್ಲದಿದ್ದರೂ ರಾಚನಿಕ ದೃಷ್ಟಿಯಿಂದ ಒಂದೇ ವರ್ಗಕ್ಕೆ ಸೇರುತ್ತವೆ; ಅವೆರಡೂ ಭಿನ್ನವಂಶಕ್ಕೆ ಸೇರಿದ ಭಾಷೆಗಳು. ಈ ತೊಡಕುಗಳನ್ನು ಗಮನಿಸಿ ವಾಂಶಿಕ ವರ್ಗೀಕರಣವೇ ಉತ್ತಮವೆನ್ನುತ್ತಾರೆ.

**೪. ವಾಂಶಿಕ ವರ್ಗೀಕರಣ**: ಇದನ್ನು geneological classification ಎನ್ನುತ್ತಾರೆ. ಅನೇಕ ಭಾಷೆಗಳು ಒಂದೇ ಮೂಲದಿಂದ ಕವಲಾಗಿ ಪ್ರತ್ಯೇಕ ಭಾಷೆ ಗಳಾಗಿರುತ್ತವೆ. ಒಂದು ಭಾಷಾಪ್ರದೇಶ ವಿಸ್ತಾರವಾಗಿದ್ದಾಗ ಬಾಹ್ಯ ಹಾಗೂ ಆಂತರಿಕ ಕಾರಣಗಳಿಂದ ಭಾಷಾಪ್ರಭೇದಗಳು ಉಂಟಾಗಿ ಕಾಲಕ್ರಮೇಣ ಅವು ಪ್ರತ್ಯೇಕ ಭಾಷೆಗಳಾಗಬಹುದು. ಹೀಗೆ ಪ್ರತ್ಯೇಕಗೊಂಡ ಭಾಷೆ ಮತ್ತೆ ಕಾಲ ಕಳೆದಂತೆ ಉಪಭಾಷೆಗಳಿಗೆ ಅವಕಾಶಕೊಡಬಹುದು. ಅಥವಾ ಒಂದು ಭಾಷೆ ಯನ್ನಾಡುವ ಜನ ಇನ್ನೊಂದು ಪ್ರದೇಶಕ್ಕೆ ಹೋಗಿ ನೆಲಸಿದಾಗ ಭಾಷಾವ್ಯತ್ಯಾಸ, ಮಾರ್ಪಾಟುಗಳು ಆಗಿ ಅದು ಪ್ರತ್ಯೇಕ ಭಾಷೆಯಾಗಬಹುದು. ಹೀಗೆ ಒಂದು ಮೂಲಭಾಷೆ ಎಷ್ಟೇ ಭಾಷೆಗಳಾಗಿ ಕವಲೊಡೆದರೂ ಕೆಲವೊಂದು ಸೂತ್ರಗಳನ್ನು

ಅನುಸರಿಸಿ ಭಾಷೆಗಳ ಸೋದರ ಸಂಬಂಧವನ್ನು, ಹಾಗೇ ಮೂಲಭಾಷೆಯನ್ನು ಗುರುತಿಸಬಹುದು, ಮನೆತನದ ವಂಶಾವಳಿಯನ್ನು ಗುರುತಿಸುವಂತೆ. ಒಂದು ಕಾಲಕ್ಕೆ ಕನ್ನಡ ಭಾಷೆ ಸಂಸ್ಕೃತದಿಂದ ಹುಟ್ಟಿದೆ ಎಂದು ವಿದ್ವಾಂಸರು ಹೇಳುತ್ತಿದ್ದರು. ಆದರೆ ಈಗ ಅದು ದ್ರಾವಿಡಭಾಷಾವರ್ಗಕ್ಕೆ ಸೇರಿದೆ ಎಂದು ಗುರುತಿಸಿದ್ದಾರೆ. ಮೂಲದ್ರಾವಿಡ (Proto-Dravidian) ಇಂದು ಇಲ್ಲದಿದ್ದರೂ ಈಗ ಇರುವ ಸೋದರಭಾಷೆಗಳಾದ ತಮಿಳು, ಕನ್ನಡ, ಮಲೆಯಾಳಂ, ತೆಲುಗು ಮೊದಲಾದುವು ಗಳಿಂದ ಮೂಲಭಾಷೆಯನ್ನು ಕಲ್ಪಿಸಿಕೊಳ್ಳಬಹುದು, ಪುನರ್‌ಸೃಷ್ಟಿಸಬಹುದು.

ಭಾಷೆಗಳನ್ನು ವಂಶದೃಷ್ಟಿಯಿಂದ ಗುರುತಿಸಲು ಕೆಲವು ಕ್ರಮಗಳಿವೆ. ಬೇರೆ ಭಾಷೆಗಳ ಪ್ರಭಾವ ಎಷ್ಟೇ ಇದ್ದರೂ ಒಂದು ಭಾಷೆಯ ಮೂಲಭೂತ ಆವಶ್ಯಕ ಶಬ್ದಗಳು ಆ ಭಾಷೆಯವೇ ಆಗಿದ್ದು ಉಳಿದುಬರುತ್ತವೆ. ಸಾಮಾನ್ಯವಾಗಿ ದೇಹದ ಅಂಗಗಳನ್ನು ಸೂಚಿಸುವ ಶಬ್ದಗಳು, ಸಂಖ್ಯಾವಾಚಕಗಳು, ಸಂಬಂಧಸೂಚಕ ಶಬ್ದಗಳು, ಸರ್ವನಾಮಗಳು, ಕ್ರಿಯಾಪದಗಳು, ಆಹಾರವನ್ನು ಸೂಚಿಸುವ ಪದಗಳು ಉಳಿದುಬರುತ್ತವೆ. ಹಾಗೇ ಸಾಂಸ್ಕೃತಿಕ ಮಹತ್ವದ ವಿಧಿಯಾಚರಣೆಯ ಶಬ್ದಗಳೂ ಉಳಿದುಬರುತ್ತವೆ. ಬೇರೆ ಬೇರೆ ಭಾಷೆಗಳ ಇಂತಹ ಶಬ್ದಗಳನ್ನು ಹೋಲಿಸಿ ಸಾಮ್ಯವಿರುವ, ಒಂದೇ ಬಗೆಯಾಗಿರುವ, ಅಲ್ಪಸ್ವಲ್ಪ ವ್ಯತ್ಯಾಸವಿರುವ ಶಬ್ದಗಳುಳ್ಳ ಭಾಷೆಗಳನ್ನು ಒಂದೇ ವಂಶದವೆಂದು ಗುರುತಿಸಬಹುದು. ಇವುಗಳ ಜೊತೆಗೆ ಇನ್ನೂ ಖಚಿತಪಡಿಸಿಕೊಳ್ಳಲು ಧ್ವನಿಯ ಅನುರೂಪತೆ, ಬದಲಾಗಿದ್ದರೆ ಯಾವ ಕ್ರಮದಲ್ಲಿ ಬದಲಾಗುತ್ತದೆ, ಕಾರಣ ಇತ್ಯಾದಿ ಗುರುತಿಸಬಹುದು. ಏಕೆಂದರೆ ನಿತ್ಯಬಳಕೆಯ ಶಬ್ದಗಳನ್ನೂ ಒಮ್ಮೊಮ್ಮೆ ಬೇರೆ ಭಾಷೆಯ ಪ್ರಭಾವದಿಂದ ಸ್ವೀಕರಿಸಿರಬಹುದು. ಸಾಂಸ್ಕೃತಿಕ, ಆಧ್ಯಾತ್ಮಿಕ, ವಿವಿಧ ಜ್ಞಾನ ಶಾಸ್ತ್ರಗಳಿಗೆ ಸಂಬಂಧಿಸಿದ ಶಬ್ದಗಳು ಸೇರುವುದಂತೂ ಸಾಮಾನ್ಯ. ಆಗ ಧ್ವನಿಗಳ ಪರಿಶೀಲನೆಯಿಂದ ಮತ್ತೂ ಖಚಿತ ನಿರ್ಣಯ ಸಾಧ್ಯವಾಗುತ್ತದೆ. ಕನ್ನಡದಲ್ಲಿ ಕಕಾರದಿಂದ ಆರಂಭವಾಗುವ ಶಬ್ದ ಗಳಲ್ಲಿ 'ಕ' ಮುಂದೆ 'ಎ' ಸ್ವರವಿದ್ದರೆ ತಮಿಳು ತೆಲುಗುಗಳಲ್ಲಿ 'ಚಿ' ಆಗುತ್ತದೆ. ಕನ್ನಡದಲ್ಲಿ ಕಕಾರವೇ ಉಳಿದಿರುತ್ತದೆ. ವಂಶ ನಿರ್ಧಾರದಲ್ಲಿ ಈ ಧ್ವನಿ ನಿಯಮ ಗಳೂ ಸಹಾಯಕವಾಗುತ್ತವೆ.

ಈ ಸೂತ್ರಗಳ ಪ್ರಕಾರ ಪ್ರಪಂಚದ ಭಾಷೆಗಳನ್ನು ಹಲವು ವಂಶಗಳಾಗಿ ಭಾಷಾವಿಜ್ಞಾನಿಗಳು ವರ್ಗೀಕರಿಸಿದ್ದಾರೆ. ಒಂದೊಂದು ಭಾಷಾವಂಶದಲ್ಲೂ ಮೂಲಭಾಷೆ, ಅದರಿಂದ ಜನ್ಯವಾದ ಭಾಷೆಗಳು, ಮತ್ತೆ ಕವಲಾದ ಭಾಷೆಗಳು ಹೀಗೆ ಗುಂಪುಗಳಾಗುತ್ತವೆ. ಮೂಲಭಾಷೆ ಇಂದು ಇರದಿದ್ದರೆ ಅದರಿಂದ ಹುಟ್ಟಿದ ಭಾಷೆಗಳು ಆ ಗುಂಪಿನಲ್ಲಿರುತ್ತವೆ:

ಅ. ಇಂಡೋ ಯುರೋಪಿಯನ್ ಭಾಷಾವರ್ಗ: ಪ್ರಪಂಚದ ಭಾಷಾವಂಶ ಗಳಲ್ಲಿ ಪ್ರಮುಖವಾದುದು. ಈ ಮೂಲವಂಶದಲ್ಲಿ ಹಲವು ಒಳಪಂಗಡಗಳಿವೆ.

ಅವೆಲ್ಲಾ ಒಂದೇ ವಂಶಕ್ಕೆ ಸೇರುತ್ತವೆ. ಇಂಗ್ಲಿಷ್, ಜರ್ಮನ್, ಡಚ್, ಸ್ವೀಡಿಶ್, ಡೇನಿಷ್ ಇತ್ಯಾದಿ ಜರ್ಮಾನಿಕ್ ಭಾಷೆಗಳು ಈ ವಂಶದವೇ ಆಗಿವೆ. ಅಲ್ಲದೆ, ರೊಮಾನ್ಸ್ ಭಾಷೆಗಳಾದ ಫ್ರೆಂಚ್, ಇಟಾಲಿಯನ್, ಸ್ಪಾನಿಷ್, ಪೋರ್ಚುಗೀಸ್ ಭಾಷೆಗಳೂ; ಸ್ಲಾವಿಕ್ ಭಾಷೆಗಳಾದ ರಷಿಯನ್, ಪೋಲಿಷ್, ಜೆಕ್, ಬಲ್ಗೇರಿಯನ್ ಭಾಷೆಗಳೂ; ಕೆಲ್ಟಿಕ್ ಭಾಷೆಗಳಾದ ಸ್ಕಾಟಿಷ್, ವೆಲ್ಷ್, ಐರಿಷ್ ಭಾಷೆಗಳೂ; ಇರಾನಿಯನ್ ಭಾಷೆಗಳಾದ ಪರ್ಶಿಯನ್, ಆಫ್ಘನ್ ಮುಂತಾದುವೂ; ಇಂಡೋ ಆರ್ಯನ್ ಭಾಷೆಗಳಾದ ಸಂಸ್ಕೃತ, ಹಿಂದಿ, ಬಂಗಾಳಿ, ಮರಾಠಿ, ಗುಜರಾತಿ, ಒರಿಯಾ, ಸಿಂಹಳಿ, ಉರ್ದು (ಶೌರಸೇನಿ ಪ್ರಾಕೃತ ಅಥವಾ ಅರ್ಧಮಾಗಧಿ ಅಪಭ್ರಂಶದಿಂದ ಹುಟ್ಟಿತೆಂದು ಊಹೆ) ಮುಂತಾದ ಭಾಷೆಗಳೂ ಸೇರುತ್ತವೆ.

ಆ. ಫಿನ್ನೋ-ಉಗ್ರಿಕ್ ಭಾಷಾವರ್ಗ : ಫಿನ್ನಿಷ್, ಹಂಗೇರಿಯನ್ ಭಾಷೆಗಳು.

ಇ. ಆಲ್ಟೇಯಿಕ್ ಭಾಷಾವರ್ಗ : ಟರ್ಕಿಷ್, ಮಂಗೋಲಿಯನ್ ಮುಂತಾದ ಭಾಷೆಗಳು.

ಈ. ಬಾಸ್ಕ್ ಭಾಷಾವರ್ಗ : ಯೂರೋಪಿನ ಪಶ್ಚಿಮ ಕರಾವಳಿಯ ಪ್ರದೇಶದ ಕೆಲವರ ಭಾಷೆಗಳು. ಮುಖ್ಯವಾಗಿ ಫ್ರಾನ್ಸ್, ಸ್ಪೇನ್ ದೇಶಗಳಲ್ಲಿ.

ಉ. ನೈಜರ್-ಕಾಂಗೊ ಭಾಷಾವರ್ಗ : ದಕ್ಷಿಣ ಆಫ್ರಿಕದ ಸ್ವಹಿಲಿ, ಕೊಂಗೊ, ಲುಬ ಮುಂತಾದ ಬಂಟು ಭಾಷೆಗಳೂ; ಗೋಲ್ಡ್‌ಕೋಸ್ಟ್, ಐವರಿಕೋಸ್ಟ್, ನೈಜಿರಿಯಾಗಳ 'ಕ್ವ' ಗುಂಪಿನ ಭಾಷೆಗಳೂ ಈ ವರ್ಗದಲ್ಲಿ ಸೇರುತ್ತವೆ.

ಊ. ಆಫ್ರೋ-ಏಷಿಯಾಟಿಕ್ ಭಾಷಾವರ್ಗ : ಹೀಬ್ರೂ, ಅರೇಬಿಕ್ ಮುಂತಾದ ಸೆಮೆಟಿಕ್ ಭಾಷೆಗಳೂ; ಈಜಿಪ್ಷಿಯನ್, ಬರ್ಬರ್ ಮುಂತಾದ ಹ್ಯಮೆಟಿಕ್ ಭಾಷೆಗಳೂ ಈ ಗುಂಪಿಗೆ ಸೇರುತ್ತವೆ.

ಎ. ಸೈನೊ-ಟಿಬೆಟನ್ ಭಾಷಾವರ್ಗ : ಟಿಬೆಟೊ-ಬರ್ಮನ್ ಭಾಷೆಗಳು ಮತ್ತು ಚೀನಾ ಭಾಷೆ ಈ ವರ್ಗದಲ್ಲಿ ಬರುತ್ತವೆ. ಏಷಿಯಾದ ಆಗ್ನೇಯ ಭಾಗದಲ್ಲಿರುವ ಚೀನಾ, ಇತ್ತ ಟಿಬೆಟ್, ಆ ಕಡೆಯ ಜಪಾನ್, ಕೊರಿಯಾ, ಬರ್ಮಾ ದೇಶಗಳಲ್ಲಿ ಬಳಕೆಯಲ್ಲಿರುವ ಭಾಷೆಗಳು. ಭಾರತದ ಅಸ್ಸಾಂ, ನಾಗಾಲ್ಯಾಂಡ್, ತ್ರಿಪುರಗಳಲ್ಲಿನ ಗಾರೋ, ಬೊಡೋ, ನಾಗಾ ಇತ್ಯಾದಿ ಭಾಷೆಗಳು. ಇವೆಲ್ಲ ಏಕಾಕ್ಷರೀ ಭಾಷೆಗಳು, ರಾಚನಿಕ ದೃಷ್ಟಿಯಿಂದ ವಿವಿಕ್ತ ಭಾಷಾವರ್ಗದವು.

ಏ. ದ್ರಾವಿಡ ಭಾಷಾವರ್ಗ : ಈ ವಂಶ ಜಗತ್ತಿನ ಹಿರಿಯ ಭಾಷಾವಂಶಗಳಲ್ಲಿ ಆರನೆಯ ಸ್ಥಾನ ಪಡೆದಿದೆ. ಸುಮಾರು ೧೫೩ ಉಪಭಾಷೆಗಳಿವೆ. ಅವುಗಳಲ್ಲಿ ಗ್ರಂಥಸ್ಥ ಭಾಷೆಗಳು ದಕ್ಷಿಣ ಭಾರತದಲ್ಲಿವೆ. ಕನ್ನಡ, ತಮಿಳು, ತೆಲುಗು,

ಮಲೆಯಾಳಂ, ತೊದ, ಕೋತ, ಬಡಗ, ಕೊಡಗು, ತುಳು. ಮಧ್ಯದ್ರಾವಿಡ ಭಾಷೆಗಳಲ್ಲಿ ಕುಈ, ಕುವಿ, ಪೆಂಗು, ಖೊಂಡ್, ಕೊಲಾಮಿ, ಕೊಂಡ, ನಾಯ್ಕಿ, ಪರ್ಜಿ, ಕೊಯ, ಒಲ್ಲಾರಿ, ಗೋಂಡೀ ಮುಂತಾದುವು ಇವೆ. ಉತ್ತರದ್ರಾವಿಡ ಭಾಷೆಗಳಲ್ಲಿ ಕುರುಖ್, ಮಾಲ್ತೋ, ಬ್ರಾಹೂಈ ಸೇರುತ್ತವೆ.

ಏ. ಮಲಯೊ-ಪಾಲಿನೇಷಿಯನ್ ಭಾಷಾವರ್ಗ: ಮಲಯ, ಇಂಡೊನೇಷಿಯಾ, ಜಾವಾನೀಸ್, ಪಾಲಿನೇಷಿಯನ್ ಭಾಷೆಗಳು ಈ ವಂಶಕ್ಕೆ ಸೇರುತ್ತವೆ.

ಒ. ಆಸ್ಟ್ರೊ-ಏಷಿಯಾಟಿಕ್ ಭಾಷಾವರ್ಗ: ಮಧ್ಯಭಾರತದ ಗಿರಿಜನರ ಭಾಷೆಗಳು; ಅಸ್ಸಾಮಿನ ಸಂತಾಲಿ, ಖಸಿ; ನಿಕೋಬಾರ್ ದ್ವೀಪದ ನಿಕೋಬಾರಿಸ್ ಭಾಷೆಗಳೂ ಈ ವರ್ಗದಲ್ಲಿ ಬರುತ್ತವೆ.

ಇವುಗಳಲ್ಲದೆ ಆಸ್ಟ್ರೇಲಿಯನ್ ಭಾಷಾವರ್ಗ, ಎಸ್ಕಿಮೊ-ಆಲೆಂಟ್ ಭಾಷಾವರ್ಗ, ಮುಂಡಾ ಭಾಷಾವರ್ಗ ಮುಂತಾದ ಇನ್ನೂ ಹಲವು ಭಾಷಾವಂಶಗಳಿವೆ. ಪೂರ್ವ ಆಸ್ಟ್ರೇಲಿಯನರು ಬಹುಶಃ ಪ್ಯಾಲೆಸ್ಟೀನ್ ಮೂಲಕ ನವಶಿಲಾಯುಗದ ಕಾಲಕ್ಕೆ ಭಾರತಕ್ಕೆ ವಲಸೆ ಬಂದಿರಬೇಕು. ಒಂದು ದೃಷ್ಟಿಯಿಂದ ಈ ಪೂರ್ವ ಅಥವಾ ಪ್ರಾಚೀನ ಆಸ್ಟ್ರೇಲಿಯನರೇ ಭಾರತದ ಮೂಲನಿವಾಸಿಗಳೆನ್ನಬಹುದು. ಇವರು ಆಡುತ್ತಿದ್ದ ಭಾಷೆ 'ಮುಂಡಾ' ಅಥವಾ 'ಮಾಂಖ್ಮೆರ್'. ಕದಳೀ, ಕಾರ್ಪಾಸ, ತಾಂಬೂಲ, ಮಾತಂಗ, ಶೃಂಗವೇರ, ಸರ್ಷಪ ಮೊದಲಾದ ಶಬ್ದಗಳು ಈ ಭಾಷೆಯವು, ಸಂಸ್ಕೃತಕ್ಕೆ ಸೇರಿಹೋಗಿವೆ.

ವಾಂಶಿಕ ವರ್ಗೀಕರಣ ಭಾಷೆಗಳ ಸೋದರಸಂಬಂಧ ಹಾಗೂ ಮೂಲವನ್ನೂ ತಿಳಿಸುವುದಲ್ಲದೆ, ಒಂದು ಭಾಷೆ ಆ ಜನರು ವಲಸೆ ಬಂದ ಕಾರಣ ದೂರಪ್ರದೇಶದಲ್ಲಿ ಬಳಕೆಯಲ್ಲಿದ್ದರೂ ಅವರು ವಲಸೆ ಹೊರಟ ಹೆಜ್ಜೆದಾರಿಗಳನ್ನೂ ತಿಳಿಸುತ್ತದೆ. ದಕ್ಷಿಣ ಭಾರತದಲ್ಲಿ ದ್ರಾವಿಡ ಭಾಷೆಗಳು ಈಗ ಪ್ರಚಲಿತವಿದ್ದರೂ ಬಲೂಚಿಸ್ತಾನದಲ್ಲಿರುವ ಬ್ರಾಹೂಈ ಭಾಷೆ ಹಿಂದೆ ದ್ರಾವಿಡರು ಉತ್ತರದಲ್ಲೆಲ್ಲಾ ನೆಲಸಿದ್ದುದನ್ನು ಸೂಚಿಸುತ್ತದೆ. ದ್ರಾವಿಡ ಭಾಷಾವರ್ಗವನ್ನು ಉತ್ತರದ್ರಾವಿಡ, ಮಧ್ಯದ್ರಾವಿಡ, ದಕ್ಷಿಣ ದ್ರಾವಿಡ ಎಂದು ವಿಂಗಡಿಸಿದೆ. ಇದು ಪ್ರದೇಶದ ಕಾರಣದಿಂದಲ್ಲ ಭಾಷೆಯ ಪರಸ್ಪರ ಹೋಲಿಕೆ-ಸಂಬಂಧದ ದೃಷ್ಟಿಯಿಂದ. ಈ ಕಾರಣಗಳಿಂದ ವಾಂಶಿಕ ವರ್ಗೀಕರಣಕ್ಕೆ ಹೆಚ್ಚು ಮಾನ್ಯತೆ ದೊರೆತಿದೆ.*

* ಡಾ॥ ಕೆ. ಕೆಂಪೇಗೌಡ ಅವರು ರಾಚನಿಕ ಹಾಗೂ ವಾಂಶಿಕ ವರ್ಗೀಕರಣಗಳ ಬಗ್ಗೆ ಒಳಪ್ರಭೇದಗಳನ್ನೂ ಒಳಗೊಂಡಂತೆ ಸೋದಾಹರಣವಾಗಿ, ವಿವರವಾಗಿ ತಮ್ಮ 'ಭಾಷಾವರ್ಗೀಕರಣ' ಮತ್ತು 'ಭಾಷೆ ಮತ್ತು ಭಾಷಾವಿಜ್ಞಾನ' ಗ್ರಂಥಗಳಲ್ಲಿ ಚರ್ಚಿಸಿರುವುದನ್ನು ಓದಬಹುದು. ಈ ಅಧ್ಯಾಯದಲ್ಲಿ ಹೆಚ್ಚು ರೂಢಿಯಿರುವ ಪಾರಿಭಾಷಿಕಗಳನ್ನು ಮಾತ್ರ ಬಳಸಿದೆ.

## ೫. ದ್ರಾವಿಡ ಭಾಷೆಗಳು

ದಕ್ಷಿಣ ಭಾರತದಲ್ಲಿ ದ್ರಾವಿಡ ಭಾಷೆಗಳು ಸಹಸ್ರಾರು ವರ್ಷಗಳಿಂದ ಪ್ರಚಲಿತವಾಗಿದ್ದು, ಇದು ದ್ರಾವಿಡ ಭಾಷಾ ಪ್ರದೇಶ ಎಂಬ ಅಭಿಪ್ರಾಯ ಮೂಡುವಂತಿದ್ದರೂ ಈ ಭಾಷಾವರ್ಗ ದಕ್ಷಿಣಕ್ಕೆ ಮಾತ್ರ ಸೀಮಿತವಾಗಿಲ್ಲ ಎಂಬುದನ್ನು ಹಿಂದೆ ಹೇಳಿದೆ. ಒಂದು ಕಾಲಕ್ಕೆ ಈ ಭಾಷಾವರ್ಗ ಇಡೀ ಭಾರತದಲ್ಲಿ ವ್ಯಾಪಿಸಿತ್ತು ಎಂಬುದಕ್ಕೆ ಈಗ ಅಲ್ಲಲ್ಲಿ ಇನ್ನೂ ಉಳಿದು ಬಂದಿರುವ ಗ್ರಂಥಸ್ಥವಲ್ಲದ ದ್ರಾವಿಡ ಭಾಷೆಗಳು ಸಮರ್ಥನೆ ನೀಡುತ್ತವೆ. ಅಂದರೆ ಒಂದು ಕಾಲಕ್ಕೆ ದ್ರಾವಿಡ ಭಾಷೆಗಳನ್ನು ಆಡುತ್ತಿದ್ದ ಜನಾಂಗ ಭಾರತಾದ್ಯಂತ ವ್ಯಾಪಿಸಿತ್ತು ಎನ್ನಬಹುದು. ಅಲ್ಲದೆ, ದ್ರಾವಿಡ ಭಾಷೆಗಳನ್ನಾಡುವ ಜನಾಂಗ ಭಾರತದ ಹೊರಗೆ ಪ್ರಪಂಚದಲ್ಲಿ ಮತ್ತಾವ ಪ್ರದೇಶದಲ್ಲೂ ಕಂಡುಬರುವುದಿಲ್ಲ. ಈ ದ್ರಾವಿಡ ಜನಾಂಗ ಯಾವುದು? ಇವರು ಭಾರತದ ಮೂಲ ನಿವಾಸಿಗಳೇ, ಹೊರಗಿನಿಂದ ಆರ್ಯರಂತೆ ಬಂದವರೇ ಎಂಬ ಬಗ್ಗೆ ಸಾಕಷ್ಟು ಚರ್ಚೆ ನಡೆದಿದೆ. ಆದರೂ ಅಂತಿಮವಾದ ಒಮ್ಮತದ ಅಭಿಪ್ರಾಯ ಕಾಣಬರುವುದಿಲ್ಲ.

ಬುದ್ಧನಿಗೂ ಹಿಂದಿನ ಭಾರತದ ಇತಿಹಾಸ ಮಬ್ಬಾಗಿದೆ. ಕ್ರಿ.ಪೂ. ಎರಡು ಸಾವಿರದಿಂದ ಮೂರು ಸಾವಿರ ವರ್ಷದಷ್ಟು ಹಿಂದಿನ ಸಿಂಧೂ ನಾಗರಿಕತೆಯ ವಿವರಗಳು ಉತ್ಖನನದಿಂದ ತಿಳಿದುಬರುತ್ತವೆ. ಆದರೆ ಈ ನಡುವಿನ ಕಾಲದ ಇತಿಹಾಸ ಅಸ್ಪಷ್ಟ; ಊಹೆ ಮಾತ್ರವಾಗಿದೆ. ಸಿಂಧೂ ನಾಗರಿಕತೆಯ ಜನಾಂಗ, ಅಚ್ಚುಕಟ್ಟಾದ ಸುವ್ಯವಸ್ಥಿತ ನಗರ ಜೀವನ ನಡೆಸುತ್ತಿದ್ದ ಜನಾಂಗ ಯಾವುದು ಎಂಬುದೂ ತಿಳಿಯಲು ಸಾಧ್ಯವಾಗಿಲ್ಲ. ಹರಪ್ಪಾ ಮತ್ತು ಮೊಹೆಂಜದಾರೊಗಳಲ್ಲಿ ದೊರೆತ ಮುದ್ರಿಕೆಗಳ ಲಿಪಿ ಇನ್ನೂ ಗೂಢವಾಗಿಯೇ ಇದೆ. ಇವರನ್ನು ದ್ರಾವಿಡರೆಂದೂ, ಆರ್ಯರ ದಾಳಿಯಿಂದಾಗಿ ದಕ್ಷಿಣಕ್ಕೆ ಸರಿದರೆಂದೂ ವಿದ್ವಾಂಸರು ಹೇಳುತ್ತಾರೆ. ಗುಜರಾಥಿನ ಲೊಥಾಲ್‌ನಲ್ಲಿ ನಡೆದ ಅಗೆತಗಳಿಂದ ಅಲ್ಲೂ ಹರಪ್ಪಾನಂತರ ಕಾಲದ ಸಿಂಧೂ ನಾಗರಿಕತೆ ಇದ್ದುದು ಬೆಳಕಿಗೆ ಬಂದಿದೆ. ಸಿಂಧೂ ನಾಗರಿಕತೆಯಲ್ಲಿ ಪಶುಪತಿ ಹಾಗೂ ಲಿಂಗಗಳನ್ನು ಪೂಜಿಸುತ್ತಿದ್ದಿರಬೇಕೆಂಬುದಕ್ಕೆ ಆಧಾರ ದೊರೆತಿವೆ. ಶಿವ ದ್ರಾವಿಡರ ದೈವ. ಹೀಗೆ ಒಂದು ವಾದವಾದರೆ, ಇತ್ತೀಚೆಗೆ ಅವರು ಆರ್ಯರೇ ಎಂದೂ, ಲಿಪಿ ಸೂಚಿಸುವ ಭಾಷೆ ವೇದಕಾಲದ ಸಂಸ್ಕೃತವೆಂದೂ ಪ್ರತಿಪಾದಿಸುವ ಪ್ರಯತ್ನ ನಡೆದಿದೆ. ಭಾರತಕ್ಕೆ ಆರ್ಯರಿಗೂ ಮೊದಲು ಆದಿವಾಸಿ ಜನಾಂಗಗಳು ಬಂದು ನೆಲಸಿದವೆಂದು ಕೆಲವು ವಿದ್ವಾಂಸರು ಹೇಳುತ್ತಾರೆ. ನೀಗ್ರೊ ಜನಾಂಗ, ಆಸ್ಟ್ರಿಕ್ ಜನಾಂಗ, ದ್ರಾವಿಡರು, ಆರ್ಯರು, ಮಂಗೋಲಿಯನ್ ಜನಾಂಗದವರೂ ಕಾಲಕ್ರಮೇಣ ವಲಸೆ ಬಂದರು ಎನ್ನಲಾಗಿದೆ. ನೀಗ್ರೊ ಜನಾಂಗದ ಲಕ್ಷಣವುಳ್ಳ ಬುಡಕಟ್ಟಿನವರು ಅಂಡಮಾನ್ ಮೊದಲಾದ ದ್ವೀಪಗಳಲ್ಲಿ ಇದ್ದಾರೆ. ಹಾಗೇ ಆಸ್ಟ್ರಿಕ್ ಬುಡಕಟ್ಟನವರಾದ ಮುಂಡಾ ಜನಾಂಗದವರು ಈಗಲೂ ಮಧ್ಯ ಮತ್ತು

ಪೂರ್ವ ಭಾರತದ ಗುಡ್ಡಗಾಡಿನಲ್ಲಿ ನೆಲೆಸಿದ್ದಾರೆ. ಮುಂಡಾ ಭಾಷಾವರ್ಗಕ್ಕೆ ಸೇರಿದ ಸಂತಾಲಿ, ಮುಂಡಾರಿ, ನಿಕೋಬಾರಿ ಭಾಷೆಗಳನ್ನು ಸಂತಾಲರೇ ಮೊದಲಾದ ಆದಿವಾಸಿ ಜನಾಂಗಗಳವರು ಆಡುತ್ತಾರೆ. ಇವರಂತೆ ದ್ರಾವಿಡರೂ ಬಂದರೆ ಎಂಬುದು ಸ್ಪಷ್ಟವಿಲ್ಲ. ಆರ್ಯರೇ ಭಾರತದ ಮೂಲನಿವಾಸಿಗಳೆಂದು ಸಂಪ್ರದಾಯವಾದಿಗಳ ಮತ. ಡಾ. ಎಸ್. ಶ್ರೀಕಂಠಶಾಸ್ತ್ರಿಗಳು ಭಾರತ ಆರ್ಯರ ಮೂಲ ನಿವಾಸಸ್ಥಳ, ಇಲ್ಲಿಂದ ಅವರು ವಾಯುವ್ಯದ ಮೂಲಕ ವಲಸೆ ಹೊರಟು ಮಧ್ಯ ಏಷಿಯಾ, ಯೂರೋಪ್, ಪ್ರಾಚೀನ ಈಜಿಪ್ಟ್‌ಗಳವರೆಗೂ ವ್ಯಾಪಿಸಿ ತಮ್ಮ ಸಂಸ್ಕೃತಿ ಹರಡಿದರು ಎನ್ನುತ್ತಾರೆ. ಪಾಶ್ಚಾತ್ಯ ವಿದ್ವಾಂಸರ, ಅವರನ್ನನುಸರಿಸಿ ಭಾರತೀಯ ವಿದ್ವಾಂಸರನೇಕರ ಮತ ಆರ್ಯರು ಹೊರಗಿನಿಂದ ಬಂದರೆಂಬುದು. ಆರ್ಯರು ದ್ರಾವಿಡರ ಮೇಲೆ ದಾಳಿ ಮಾಡಿ ಒತ್ತರಿಸಿದರೂ, ಸಾಂಸ್ಕೃತಿಕವಾಗಿ ದ್ರಾವಿಡರ ಸಂಸ್ಕೃತಿಯ ಪ್ರಭಾವ ಆರ್ಯರ ಮೇಲೆ ಆಗದಿರಲಿಲ್ಲ. ಯಜ್ಞ ಯಾಗ ಮಾಡುತ್ತಿದ್ದ ಆರ್ಯರಿಗಿಂತ ಭಿನ್ನವಾದದ್ದು ದ್ರಾವಿಡರ ಆರಾಧನಾ ವಿಧಾನ. ಶಿವಪೂಜೆ, ವೃಕ್ಷಪೂಜೆ, ಭಕ್ತಿಮಾರ್ಗ ದ್ರಾವಿಡರ ಪ್ರಭಾವದಿಂದ ಆರ್ಯರಲ್ಲಿ ಸೇರಿಹೋಯಿತು. 'ಪೂಜೆ' ಎನ್ನುವ ಶಬ್ದವೇ ದ್ರಾವಿಡಮೂಲದ್ದು ಎನ್ನಲಾಗಿದೆ. ಪೂ–ಹೂ, ಜೆ–ಚೆಯ್ ಹೂವಿನಿಂದ ಮಾಡುವ ಕ್ರಿಯೆ, ಆರಾಧನೆ. 'ಪೂಜೆ'ಗೆ ಪೂಸು (to smear) ಹಚ್ಚು ಎಂಬರ್ಥವೂ ಇರಬಹುದೆಂದು ಕೆಲವರು ಊಹಿಸಿದ್ದಾರೆ. ಆದ್ದರಿಂದ ಮೂರ್ತಿಪೂಜಾ ಪದ್ಧತಿಯೇ ದ್ರಾವಿಡ ಪರಂಪರೆಯದಾಗಿದೆ. ಹೀಬ್ರೂ ಬೈಬಲ್‌ನಲ್ಲಿ 'ತೂಕಿ' ಶಬ್ದವಿದೆ. ಅದು ದ್ರಾವಿಡ 'ತೋಕೈ' ಶಬ್ದದ ಹೀಬ್ರೂ ರೂಪಾಂತರ. ನವಿಲು ಎಂದರ್ಥ. ಕ್ರಿ.ಪೂ.೧೦೦೦ ಸುಮಾರಿನಲ್ಲಿ ಸಾಲೋಮನ್‌ನ ಹಡಗುಗಳಲ್ಲಿ ಸರಕುಗಳ ಜೊತೆಗೆ ನವಿಲೂ ಇತ್ತೆಂಬ ಉಲ್ಲೇಖವಿದೆ. ಅಂದರೆ ಆ ವೇಳೆಗಾಗಲೇ ದ್ರಾವಿಡರು ವ್ಯಾಪಾರ ವ್ಯವಹಾರ ನಿಪುಣರಾಗಿದ್ದ ಪ್ರಬಲ ಜನಾಂಗದವರಾಗಿದ್ದರೆಂದು ಸ್ಪಷ್ಟ. ದ್ರಾವಿಡ ಭಾಷೆಯೂ ಆ ಕಾಲಕ್ಕೆ ಪ್ರಭಾವಶಾಲಿ ಭಾಷೆಯಾಗಿದ್ದಿರಬೇಕು. ದ್ರಾವಿಡ ಭಾಷೆಗಳ ಮೇಲೆ ಆರ್ಯರ ಸಂಸ್ಕೃತದ ಪ್ರಭಾವವಾದಂತೆ ಸಂಸ್ಕೃತದ ಮೇಲೂ ದ್ರಾವಿಡ ಭಾಷೆಯ ಪ್ರಭಾವವಾಗಿದೆ. ಹೀಗೆ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕವಾಗಿ ಆರ್ಯ–ದ್ರಾವಿಡರ ನಡುವೆ ಪರಸ್ಪರ ಕೊಳುಕೊಡುಗೆಗಳು ಕ್ರಿ.ಪೂ.ದಲ್ಲಿ ಬಹು ಹಿಂದೆಯೇ ನಡೆದಿತ್ತು. ಕಾಲಕ್ರಮೇಣ ಆರ್ಯ–ದ್ರಾವಿಡ ಮಿಲನದಿಂದ ವ್ಯತ್ಯಾಸ ಕಾಣದಷ್ಟು ಜೀವನ ವಿಧಾನ ಬದಲಾಯಿತು. ಧಾರ್ಮಿಕ, ಸಾಂಸ್ಕೃತಿಕ, ಸಾಮಾಜಿಕ ವಿಷಯಗಳಲ್ಲಿ ಭಿನ್ನತೆ ಮರೆಯಾಗಿದೆ. ಆದರೂ ಬುಡಕಟ್ಟಿನ ಜನಾಂಗ ಅಥವಾ ಆದಿವಾಸಿಗಳಲ್ಲಿ ಪ್ರಾಚೀನ ವಿಧಿಯಾಚರಣೆಯ, ಆರಾಧನೆಯ ಸಂಪ್ರದಾಯಗಳು ಉಳಿದಿವೆ.

ದ್ರಾವಿಡ ಭಾಷೆಗಳು ಆರ್ಯಭಾಷೆಗಳಿಗಿಂತ ಭಿನ್ನವಂಶಕ್ಕೆ ಸೇರಿದುವು ಎಂಬುದನ್ನು ವಾಂಶಿಕ ವರ್ಗೀಕರಣ ಭಾಗದಲ್ಲಿ ವಿವರಿಸಲಾಗಿದೆ. ಸಂಸ್ಕೃತ ಮತ್ತು

ಇಂಗ್ಲಿಷ್ ಒಂದೇ ಮೂಲವಂಶಕ್ಕೆ, ವಿಸ್ತಾರವಾದ ಪ್ರದೇಶದಲ್ಲಿ ಹರಡಿರುವ ಹಲವು ಕವಲುಗಳುಳ್ಳ ಇಂಡೋ ಯೂರೋಪಿಯನ್ ಭಾಷಾ ವರ್ಗಕ್ಕೆ ಸೇರಿದುವು. ವಂಶಮೂಲವನ್ನೂ, ಜ್ಞಾತಿ ಭಾಷೆಗಳನ್ನೂ ಗುರುತಿಸಲು ಕೆಲವು ಸೂತ್ರಗಳಿವೆ ಎಂದೂ ಹಿಂದೆ ಹೇಳಿದೆ. ದೇಹದ ಅಂಗ ಸೂಚಕ ಶಬ್ದಗಳು, ಸಂಖ್ಯಾವಾಚಕಗಳು, ಸರ್ವನಾಮಗಳು, ಸಂಬಂಧವಾಚಕಗಳು, ಕ್ರಿಯಾಪದಗಳು ಇತರ ಭಾಷಾ ಪ್ರಭಾವಕ್ಕೆ ಒಳಗಾಗದೆ ಆಯಾ ಭಾಷೆಯವೇ ಉಳಿದುಬಂದಿರುತ್ತವೆ. ಆರ್ಯಭಾಷೆಗಳಾದ ಇಂಗ್ಲಿಷ್ ಸಂಸ್ಕೃತಗಳಿಂದ ದ್ರಾವಿಡ ಭಾಷೆಗಳು ಭಿನ್ನ ಎಂಬುದನ್ನು ಕೆಳಗಿನ ಪಟ್ಟಿಯಿಂದ ಸ್ಪಷ್ಟವಾಗಿ ತಿಳಿಯಬಹುದು :

| ಇಂಗ್ಲಿಷ್ | ಸಂಸ್ಕೃತ | ಕನ್ನಡ | ತಮಿಳು | ತೆಲುಗು | ಮಲಯಾಳಂ | ತುಳು |
|---|---|---|---|---|---|---|
| One | ಏಕ | ಒಂದು | ಒನ್ರು | ಒಕಟಿ | ಒನ್ನು | ಒಞ್ |
| Three | ತ್ರಯಂ | ಮೂರು | ಮೂನ್ರು | ಮೂಡು | ಮೂನ್ನು | ಮೂಜಿ |
| Mother | ಮಾತೃ | ತಾಯಿ | ತಾಯ್ | ತಲ್ಲಿ | ಅಮ್ಮ | ಅಬ್ಬೆ |
| Eye | ಅಕ್ಷಿ | ಕಣ್ಣು | ಕಣ್ | ಕನ್ನು | ಕಣ್ಣು | ಕಣ್ |
| Ear | ಕರ್ಣ | ಕಿವಿ | ಶೆವಿ | ಚೆವಿ | ಚೆವಿ | |
| I | ಅಹಂ | ನಾನು | ಯಾನ್ | ನೇನು | ಞಾನ್ | |
| Eat | ಅದ್ | ತಿನ್ನು | ತಿನ್ | ತಿನು | ತಿನ್ನ | |

ಮೇಲಿನ ಪಟ್ಟಿಯಿಂದ ಇಂಗ್ಲಿಷ್ ಮತ್ತು ಸಂಸ್ಕೃತಗಳಿಗಿರುವ ಹೋಲಿಕೆಯನ್ನೂ ಇತರ ಭಾಷೆಗಳಿಂದ ಭಿನ್ನವೆಂಬುದನ್ನೂ ಗಮನಿಸಬಹುದು. ಹಾಗೇ ಕನ್ನಡ ತಮಿಳು ತೆಲುಗು ಮೊದಲಾದ ಭಾಷೆಗಳಿಗೆ ಒಂದೇ ಮೂಲವಿರಬೇಕು ಎಂಬುದೂ ಸ್ಪಷ್ಟವಾಗುತ್ತದೆ.

ದ್ರಾವಿಡ ಭಾಷೆಗಳನ್ನು ಭೌಗೋಳಿಕ ದೃಷ್ಟಿಗಿಂತ ಹೆಚ್ಚಾಗಿ ಭಾಷಾ ಸಾಮ್ಯದ ದೃಷ್ಟಿಯಿಂದ ಉತ್ತರ ದ್ರಾವಿಡ, ಮಧ್ಯ ದ್ರಾವಿಡ ಮತ್ತು ದಕ್ಷಿಣ ದ್ರಾವಿಡ ಭಾಷೆಗಳೆಂದು ವಿಂಗಡಿಸಲಾಗಿದೆ. ಪ್ರಧಾನ ಗ್ರಂಥಸ್ಥಭಾಷೆಗಳಲ್ಲಿ ಭೌಗೋಲಿಕವಾಗಿ ದಕ್ಷಿಣದಲ್ಲಿ ಇದ್ದರೂ ತೆಲುಗು ಮತ್ತು ತುಳು ಮಧ್ಯದ್ರಾವಿಡಕ್ಕೆ ಸೇರುತ್ತವೆ.

**ದಕ್ಷಿಣ ದ್ರಾವಿಡ ಭಾಷೆಗಳು :** ಲಿಪಿಯ ದೃಷ್ಟಿಯಿಂದ ತೆಲುಗು ಕನ್ನಡಗಳು ಹತ್ತಿರದವಂತೆ ಕಂಡರೂ ವಾಸ್ತವವಾಗಿ ತಮಿಳು ಕನ್ನಡ ಬಾಂಧವ್ಯ ನಿಕಟವಾದದ್ದು. ಮೂಲದ್ರಾವಿಡದಿಂದ ಮೊದಲು ಕವಲಾದ ಭಾಷೆ ತೆಲುಗು ಎನ್ನುತ್ತಾರೆ. ಆದ್ದರಿಂದ ತಮಿಳು ಕನ್ನಡ ಒಟ್ಟಿಗೆ ಕಂದಮಿಳಾಗಿದ್ದ ಕಾಲವಿತ್ತು. ತಮಿಳು ಭಾಷೆ ತುಂಬ ವಿಸ್ತಾರ ಪ್ರದೇಶಗಳಲ್ಲಿ ಹರಡಿದೆ, ಭಾರತವನ್ನೂ ದಾಟಿ. ಶ್ರೀಲಂಕಾ, ಮಲೇಷಿಯಾ, ಇಂಡೊನೇಷಿಯಾ, ಬರ್ಮಾ, ದಕ್ಷಿಣ ಆಫ್ರಿಕಾ, ಮಡಗಾಸ್ಕರ್, ಟ್ರನಿಡಾಡ್, ಮಾರಿಷಸ್‌ಗಳಲ್ಲೆಲ್ಲಾ ತಮಿಳು ಭಾಷೆಯನ್ನಾಡುವ ಜನ ವಲಸೆಹೋಗಿ ನೆಲಸಿದ್ದಾರೆ.

ಮೂಲದ್ರಾವಿಡದ ಕೆಲವು ರೂಪಗಳನ್ನು ತಮಿಳು ಹಾಗೂ ಕನ್ನಡಗಳು ಪ್ರತ್ಯೇಕವಾಗಿ ಉಳಿಸಿಕೊಂಡು ಬಂದಿವೆ. ಕನ್ನಡದಂತೆ ತಮಿಳಿನಲ್ಲೂ ಭಾಷೆಯ ಒಳಪ್ರಭೇದಗಳಿವೆ. ಕೈಕಡಿ, ಬುರಗಂಡಿಗಳು ತಮಿಳಿನ ಉಪಭಾಷೆಗಳಾಗಿವೆ.

ನೀಲಗಿರಿಯ ಆದಿವಾಸಿಗಳಲ್ಲಿ ಬಳಕೆಯಲ್ಲಿರುವ ಕೋತ, ತೊದ ಹಾಗೂ ಕೊಡಗಿನ ಕುರುಬ ಇವು ದಕ್ಷಿಣ ದ್ರಾವಿಡ ಭಾಷೆಗಳಾಗಿವೆ. ಬಡಗ ಮತ್ತು ಇರುಳ ಭಾಷೆಗಳೂ ಈ ವರ್ಗಕ್ಕೇ ಸೇರುತ್ತವೆ. ಗ್ರಂಥಸ್ಥ ತೆಲುಗು, ತುಳು ಮತ್ತು ಪಶ್ಚಿಮ ಕರಾವಳಿಯ ಕೊರಗ ಭಾಷೆಗಳು ಭೌಗೋಳಿಕವಾಗಿ ದಕ್ಷಿಣದಲ್ಲಿದ್ದರೂ ಮಧ್ಯದ್ರಾವಿಡಕ್ಕೆ ಸೇರುತ್ತವೆ. ತಮಿಳಿನಂತೆ ಕನ್ನಡ ಮತ್ತು ಮಲೆಯಾಳಂಗಳೂ ದಕ್ಷಿಣದ ಪ್ರಮುಖ ಗ್ರಂಥಸ್ಥ ಭಾಷೆಗಳು. ಕಂದಮಿಳಿನಿಂದ ಮೊದಲು ಕನ್ನಡ ಬೇರೆಯಾಯಿತು, ಅನಂತರ ಮಲೆಯಾಳಂ ಕವಲೊಡೆಯಿತು ಎನ್ನಲಾಗಿದೆ. ಮಲೆಯಾಳಂ ಎಂದರೆ ತಪ್ಪಲು ಪ್ರದೇಶ ಎಂದು ಅರ್ಥ ಹೇಳುತ್ತಾರೆ. ಪಶ್ಚಿಮ ಕರಾವಳಿಯುದ್ದಕ್ಕೂ ದಕ್ಷಿಣಕ್ಕೆ ಈ ಭಾಷಾಪ್ರದೇಶ ಹರಡಿದೆ. ದ್ರಾವಿಡ ಭಾಷೆಗಳಲ್ಲೆಲ್ಲ ಅತ್ಯಂತ ಹೆಚ್ಚು ಸಂಸ್ಕೃತ ಪದಗಳು ಮಲೆಯಾಳಂನಲ್ಲಿ ಸೇರಿವೆ. ಮಣಿಪ್ರವಾಳ ಎಂಬುದು ಸಂಸ್ಕೃತಮಯವೆ. ಕೊಡಗಿನಲ್ಲಿ ಕೊಡಗು ಭಾಷೆ ಪ್ರಚಲಿತವಾಗಿದೆ. ಇದಕ್ಕೆ ಲಿಪಿಯಿಲ್ಲ. ಕನ್ನಡ ಲಿಪಿಯನ್ನೇ ಬಹುವಾಗಿ ಬಳಸಲಾಗುತ್ತಿವೆ. ಹನ್ನೆರಡನೆಯ ಶತಮಾನದ ಶಾಸನವೊಂದರಲ್ಲಿ ಕೊಡಗಿನ ಪ್ರಾಚೀನ ಉಲ್ಲೇಖ ದೊರೆಯುತ್ತದೆ. ಡಾ. ಕಾಲ್ಡ್‌ವೆಲ್ ಪ್ರಕಾರ ಕೊಡಗು ಮತ್ತು ಬಡಗಗಳು ಕನ್ನಡದ ಉಪಭಾಷೆಗಳು. ಕೋತ ನೀಲಗಿರಿಯ ಆದಿವಾಸಿ ಒಕ್ಕಲಿಗರು ಆಡುವ ಭಾಷೆ. ಇದರಲ್ಲಿ ಐ, ಔ ಸ್ವರಗಳಿಲ್ಲ. ವ್ಯಂಜನಾಂತ ಪದಗಳೂ, ಏಕಾಕ್ಷರೀ ಧಾತುಗಳೂ ಹೆಚ್ಚು. ಭೂತಕಾಲದ ಪ್ರತ್ಯಯಗಳೇ ಉಳಿದೆರಡು ಕಾಲಕ್ಕೂ ಪ್ರಯೋಗವಾಗುತ್ತವೆ. ತೊದ ಸಹ ನೀಲಗಿರಿ ಆದಿವಾಸಿಗಳ ಭಾಷೆ. ಇಲ್ಲೂ ಸಹ ಭೂತಕಾಲವೇ ವರ್ತಮಾನ ಭವಿಷ್ಯತ್ ಕಾಲಗಳಿಗೆ ಪ್ರಯೋಗವಾಗುತ್ತದೆ. ಧ್ವನಿ ಪಲ್ಲಟ, ಧ್ವನಿಮಾ ವಿಚ್ಛೇದನ, ಲಿಂಗವ್ಯವಸ್ಥೆಯ ಲೋಪಗಳು ಕಂಡುಬರುತ್ತವೆಂದು ಡಾ. ಹಂಪನಾ ಹೇಳುತ್ತಾರೆ. ಹವ್ಯಕ ಹಾಗೂ ಬಡಗ ಭಾಷೆಗಳಲ್ಲಿ ಕನ್ನಡದ ಪ್ರಾಚೀನ ರೂಪಗಳು ಉಳಿದಿವೆಯೆಂದು ಹೇಳಲಾಗಿದೆ.

**ಮಧ್ಯದ್ರಾವಿಡ ಭಾಷೆಗಳು** : ಗ್ರಂಥಸ್ಥವಾದ ತೆಲುಗು ಪ್ರಮುಖವಾದ ಭಾಷೆ. ಆಂಧ್ರ ಎಂಬ ಹೆಸರೂ ಪ್ರದೇಶವಾಚಕವಾಗಿ ರಾಮಾಯಣ ಭಾರತಗಳಲ್ಲೂ ಬ್ರಾಹ್ಮಣಗಳಲ್ಲೂ ಉಲ್ಲೇಖಗೊಂಡಿದೆ. ಕ್ರಿ.ಪೂ. ದ ಪ್ಲಿನಿ ಆಂಧ್ರವನ್ನು ಉಲ್ಲೇಖಿಸಿದ್ದಾನೆ. ಜೇನು ಎಂಬರ್ಥದ ತೇನೆಯಿಂದ ತೆಲುಗು ಬಂದಿತೆನ್ನುತ್ತಾರೆ. ಲಿಪಿಯ ದೃಷ್ಟಿಯಿಂದ ಮಾತ್ರ ಕನ್ನಡಕ್ಕೆ ತೆಲುಗು ಸಮೀಪ. ಆದರೆ ಭಾಷೆಯ ದೃಷ್ಟಿಯಿಂದ ಮೂಲದ್ರಾವಿಡದಿಂದ ತುಳು ಮತ್ತು ತೆಲುಗುಗಳು ಮೊದಲು ಕವಲೊಡೆದವಾಗಿವೆ.

ದಕ್ಷಿಣ ಕನ್ನಡದ ತುಳು ಕನ್ನಡದ ಉಪಭಾಷೆಯಲ್ಲ, ಸ್ವತಂತ್ರ, ಆದರೆ ಲಿಪಿಯಿಲ್ಲದ ಭಾಷೆ. ಹಿಂದೆ ಮಲಿಯಾಳಂ ಲಿಪಿ ಬಳಸುತ್ತಿದ್ದರು. ಈಗ ಕನ್ನಡ ಲಿಪಿಯನ್ನೇ ಬಳಸಲಾಗುತ್ತಿದೆ. ತಮಿಳು ಸಂಘಂ ಸಾಹಿತ್ಯದಲ್ಲಿ ತುಳು ಉಲ್ಲೇಖಗೊಂಡಿದೆ ಯೆಂದರೂ ಹನ್ನೆರಡನೆಯ ಶತಮಾನದ ಶಾಸನದಲ್ಲಿನ ಉಲ್ಲೇಖ ಪ್ರಾಚೀನ. ತುಳುವಿನಲ್ಲಿ ಸಾಹಿತ್ಯವಿದೆ. ಕನ್ನಡ, ತುಳುವಿನಲ್ಲಿ ದ್ರಾವಿಡದ ಕೆಲವು ಪ್ರಾಚೀನ ರೂಪಗಳು ಉಳಿದು ಬಂದಿವೆ, ಪದಸಾಮ್ಯವೂ ಕಂಡುಬರುತ್ತದೆ. ತುಳುವಿನಲ್ಲೂ ಪಕಾರ ಹಕಾರವಾಗಿರುವುದನ್ನು ಕಾಣಬಹುದಾಗಿದೆ. ತುಳುವಿನಲ್ಲಿ ಬ್ರಾಹ್ಮಣ, ಬ್ರಾಹ್ಮಣೇತರ ತುಳು ಎಂದು ಎರಡು ರೂಪಗಳಿವೆ. ಇತ್ತೀಚೆಗೆ, ಆಕ್ಸಿರಿಂಕಸ್ ಪ್ಯಾಪಿರಿಯ ಗ್ರೀಕ್ ಪ್ರಹಸನದಲ್ಲಿ ಕಂಡುಬರುವ ಕರಾವಳಿ ಪ್ರದೇಶದ ಭಾಷೆಯ ಶಬ್ದಗಳು ಕನ್ನಡಕ್ಕಿಂತ ತುಳುವಾಗಿರಬಹುದು ಎಂಬ ವಾದವೂ ಕೇಳಿಬರುತ್ತಿದೆ.

ಮಧ್ಯಪ್ರದೇಶದ ವಿಂಧ್ಯಪರ್ವತ ಪ್ರದೇಶ ಮತ್ತು ನರ್ಮದಾ ತೀರಪ್ರದೇಶದ ಆದಿವಾಸಿಗಳ ಭಾಷೆ ಗೋಂಡಿ. ಮಹಾರಾಷ್ಟ್ರ, ಒರಿಸ್ಸಾಗಳ ಬುಡಕಟ್ಟಿನ ಜನಾಂಗ ಗಳಲ್ಲೂ ಪ್ರಚಲಿತವಾಗಿದೆ. ಗೋಂಡ ಜನಾಂಗದ ಬಗ್ಗೆ ಐತಿಹ್ಯಗಳಿವೆ, ರಾಜ್ಯವಾಳು ತ್ತಿದ್ದರೆಂದು ಹೇಳಲಾಗಿದೆ. ಗೋಂಡಿಯಲ್ಲಿ ಒಳಪ್ರಭೇದಗಳು ಇವೆ. ಬಾಲಾಘಾಟ ಗೋಂಡಿ, ಮುಡಿಯಾ ಮೊದಲಾದುವು ಉಪಭಾಷೆಗಳು. ಗೋಂಡಿ ಅಲ್ಲದೆ ಹ್ರಸ್ವಸ್ವರಯುಕ್ತ ಗೊಂಡಿ ಇನ್ನೊಂದು ಮಧ್ಯದ್ರಾವಿಡ ಭಾಷೆ. ಸಾಕಷ್ಟು ವ್ಯಾಪಕವಾದ ಪ್ರದೇಶಗಳಲ್ಲಿ ಈ ಭಾಷೆ ಪ್ರಚಲಿತವಾಗಿದೆ. ಮಧ್ಯಪ್ರದೇಶ, ಬಿಹಾರ, ಒರಿಸ್ಸಾ, ಮಹಾರಾಷ್ಟ್ರಗಳಲ್ಲಿ ಗಾಯ್ಕಿ, ಕಲರಿ, ಕಂದ್ರ, ದೊರ್ಲಿ, ಕೊಕಡಿ, ಮಾಡಿಯಾ ಮೊದಲಾದ ಉಪಭಾಷೆಗಳು ಬಳಕೆಯಲ್ಲಿವೆ. ಕನ್ನಡಕ್ಕೆ ಹತ್ತಿರದ ಶಬ್ದಗಳು ಹಲವು ಈ ಭಾಷೆಯಲ್ಲಿವೆ. ವಿಶೇಷಣಗಳು ಸಂಸ್ಕೃತ ಪ್ರಭಾವದಿಂದ ಬಂದು ರೂಢಿಯಾಗಿರುವುದು ಒಂದು ವೈಶಿಷ್ಟ್ಯ. ಮಹಾರಾಷ್ಟ್ರದಲ್ಲಿ ಪ್ರಚಲಿತವಾದ ಭಾಷೆ ಕೋಲಾಮಿ. ಕೋಲಾಮಿ ಭಾಷೆಯನ್ನು ನಾಯ್ಕಿ, ಪಾರ್ಜಿ, ಗದಬಗಳೊಂದಿಗೆ ಸೇರಿಸಿ ದ್ರಾವಿಡ ಭಾಷಾ ಗುಂಪುಗಳಲ್ಲಿ ಒಂದು ಉಪಪರಿವಾರವೆಂದು ಪರಿಗಣಿಸ ಲಾಗಿದೆ. ಅದನ್ನು ಕೋಲಾಮಿ–ಪಾರ್ಜಿ ಎಂದು ಕರೆಯಲಾಗಿದೆ. ಕೋಲಾಮಿ ಮರಾಠಿ ಮತ್ತು ತೆಲುಗು ಭಾಷೆಗಳಿಂದ ಅನೇಕ ಶಬ್ದಗಳನ್ನು ಸ್ವೀಕರಿಸಿದೆ. ಸ್ವಾರಸ್ಯ ವೆಂದರೆ ಒಂದರಿಂದ ಐದರವರೆಗೆ ದ್ರಾವಿಡಸಂಖ್ಯೆಗಳಿದ್ದರೂ ಮುಂದಕ್ಕೆ ಮರಾಠಿ ಸಂಖ್ಯಾವಾಚಕಗಳಿವೆ. ಮಧ್ಯಪ್ರದೇಶದ ಬಸ್ತಾರ ಜಿಲ್ಲೆಯ ದಕ್ಷಿಣದಲ್ಲಿ ಪಾರ್ಜಿ ಪ್ರಚಲಿತವಾಗಿದೆ. ಇದರಲ್ಲಿ ಐ, ಔ ಸ್ವರಗಳಿಲ್ಲ. ವರ್ಗೀಯ ವ್ಯಂಜನಗಳಲ್ಲಿ ದ್ವಿತೀಯ ಮತ್ತು ಚತುರ್ಥಾಕ್ಷರ ಮಹಾಪ್ರಾಣಗಳು ಇಲ್ಲ. ಇದರಲ್ಲಿ ಶಕಟರೇಫ ಈಗಲೂ ಇದೆ. ಮಹಾರಾಷ್ಟ್ರದ ಚಾಂದಾ ಜಿಲ್ಲೆಯ ಪ್ರದೇಶದಲ್ಲಿ ನಾಯ್ಕಿ ಪ್ರಚಲಿತವಿದೆ. ಚಾಂದಾ ಸುತ್ತಲ ಭಾಷೆಗೆ ಚಾಂದಾನಾಯ್ಕಿ ಎಂಬ ಹೆಸರೂ ರೂಢಿಯಲ್ಲಿದೆ. ಒರಿಸ್ಸಾದ ಕೋರಾಪಟ್ ಜಿಲ್ಲೆಯಲ್ಲಿ ಗದಬ ಭಾಷೆ ಬಳಕೆಯಲ್ಲಿದೆ.

ಇದರ ಉಪಭಾಷೆಗಳು ಬಲ್ಲಾರಿ, ಸಲೂರ, ಪೊತ್ತೊಂಗಿ. ಕೊಂಡ ಇನ್ನೊಂದು ಮಧ್ಯದ್ರಾವಿಡ ಭಾಷೆ. ಕೂಬಿ ಇದರ ಉಪಭಾಷೆ. ಆಂಧ್ರದ ವಿಶಾಖಪಟ್ಟಣದ ಬಳಿಯ ಅರಕು ಕಣಿವೆಯ ಪ್ರದೇಶದಲ್ಲಿ ಪ್ರಚಲಿತ. ಈ ಭಾಷೆಯಾಡುವ ಜನರನ್ನು ಕೊಂಡದೊರಲು, ಕೊಂಡಕಾಪುಲು, ಪಾಂಡವರ್ರೈತುಲು ಎಂದು ಕರೆಯುತ್ತಾರೆ. ಈ ಭಾಷೆಯಲ್ಲಿ ಐ, ಔ ಸ್ವರಗಳಿಲ್ಲ. ಸಂಖ್ಯಾವಾಚಕಗಳಲ್ಲಿ ಉನಿ, ರುಂಡಿ, ಮೂನಿ, ನಾಲ್ಗಿ ಬಿಟ್ಟು ಉಳಿದವು ತೆಲುಗಿನವೇ ಆಗಿವೆ. ಕುವಿ, ಕುಈ ಸಹ ದಕ್ಷಿಣ ದ್ರಾವಿಡ ಭಾಷೆಗಳೇ ಆಗಿವೆ. ಇವುಗಳಿಗೆ ಕುಯಿೀ, ಕುಯಿಂಗ್, ಕುವಿಂಗ್, ಕಂಧಿ, ಕೊಂಧ್ ಮುಂತಾದ ಹೆಸರುಗಳೂ ಇವೆ. ಆಂಧ್ರ, ಮಧ್ಯಪ್ರದೇಶ, ಅಸ್ಸಾಂವರೆಗೂ ಈ ಭಾಷೆಯ ವ್ಯಾಪ್ತಿ ಇದೆ. ಮುಖ್ಯವಾಗಿ ಆಂಧ್ರದ ವಿಶಾಖಪಟ್ಟಣ, ಒರಿಸ್ಸದ ಫಲ್ಬನಿ, ಕಾಲಹಂದಿ, ಕೊರಪುತ್, ಗಂಜಾಂ ಜಿಲ್ಲೆಗಳಲ್ಲಿ ಈ ಭಾಷೆಯ ಬೇರೆ ಬೇರೆ ರೂಪ ಆಡುವ ಜನರಿದ್ದಾರೆ. ಕುಈ ಮತ್ತು ಕುವಿ ಭಿನ್ನಭಾಷೆಗಳೆಂದೂ, ಒಂದೇ ಎಂದೂ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ಮಹಾಪ್ರಾಣಾಕ್ಷರಗಳಿಲ್ಲ; ಕೆಲವರು ತೆಲುಗು, ರೋಮನ್ ಹಾಗೂ ಒರಿಯಾ ಲಿಪಿಗಳನ್ನು ಬರೆಯುಲು ಬಳಸುತ್ತಾರೆ.

**ಉತ್ತರ ದ್ರಾವಿಡ ಭಾಷೆಗಳು** : ಪಶ್ಚಿಮ ಕರಾವಳಿ ಪ್ರದೇಶದಲ್ಲಿ ಪ್ರಚಲಿತ ವಿರುವ ಕೊರಗ ಭಾಷೆಯನ್ನು, ಅದು ದಕ್ಷಿಣದಲ್ಲಿದ್ದರೂ, ಉತ್ತರ ದ್ರಾವಿಡಕ್ಕೆ ಸೇರಿಸು ತ್ತಾರೆ. ಬ್ರಾಹುಈ ಬಲೂಚಿಸ್ತಾನದಲ್ಲಿ ಪ್ರಚಲಿತ. ಈಗ ಭಾರತದಿಂದ ಹೊರಗೆ ಪಾಕಿಸ್ತಾನಕ್ಕೆ ಸೇರಿದ ಪ್ರದೇಶವಾಗಿದೆ. ಪಾಕಿಸ್ತಾನದ ಕಲತ್, ಹರಿಪುರ, ಹೈದರಾಬಾದ್‌ಗಳಲ್ಲೂ ಅಲ್ಲಲ್ಲಿ ಬಳಕೆಯುಲ್ಲಿದೆ. ಈ ಭಾಷೆಯಲ್ಲಿ ದ್ರಾವಿಡ ಭಾಷೆ ಗಳೊಡನೆ ಸಂಪರ್ಕ ಎಂದೋ ಕಡಿದುಹೋದಕಾರಣ, ಸಾಕಷ್ಟು ಬದಲಾವಣೆ ಗಳಾಗಿವೆ. ಎ, ಒ ಹ್ರಸ್ವಸ್ವರಗಳಿಲ್ಲ, ದ್ರಾವಿಡ ರೀತಿಯ ಲಿಂಗವಿವಕ್ಷೆ ಇಲ್ಲ. ಸಂಖ್ಯಾವಾಚಕಗಳೂ ಬೇರೆ ಭಾಷೆಗಳಿಂದ ಸ್ವೀಕೃತವಾದುವುಗಳಾಗಿವೆ, ಅಂದರೆ ದ್ರಾವಿಡ ಮೂಲದವು ಬಳಕೆಯಿಂದ ತಪ್ಪಿಹೋಗಿವೆ. ಮಾಲ್ತೊ ಭಾಷೆ ಬಿಹಾರ ಮತ್ತು ಪಶ್ಚಿಮ ಬಂಗಾಲದ ಕೆಲವು ಪ್ರದೇಶಗಳಲ್ಲಿ ಪ್ರಚಲಿತವಾಗಿದೆ. ಆದ್ದರಿಂದ ಅಲ್ಲಿನ ಪರಿಸರದ ಭಾಷೆಗಳ ಪ್ರಭಾವ ಇದರ ಮೇಲಾಗಿದೆ. ಬಿಹಾರ ಮತ್ತು ಒರಿಸ್ಸಾಗಳ ಆದಿವಾಸಿಗಳಲ್ಲಿ ಕುರುಖ್ ಬಳಕೆಯಲ್ಲಿದೆ. ಈ ಭಾಷೆಗೆ 'ಓರಾವೊ' ಎಂಬ ಇನ್ನೊಂದು ಹೆಸರೂ ಇದೆ. ಕುರುಖ್ ಭಾಷೆಯನ್ನಾಡುವ ಜನ ಬ್ರಾಹೂಈ ಪ್ರಚಲಿತವಿದ್ದ ಬಲೂಚಿಸ್ತಾನದಿಂದ ದಕ್ಷಿಣಕ್ಕೆ ಬಂದು, ಕರ್ನಾಟಕದ ಉತ್ತರ ಭಾಗ ಮತ್ತು ಅಲ್ಲಿಂದ ಛೋಟಾನಾಗಪುರ, ರಾಜಮಹಲ್ ಗುಡ್ಡಗಾಡಿನ ಪ್ರದೇಶಕ್ಕೆ ವಲಸೆ ಹೋಗಿರಬೇಕೆಂದೂ ಊಹಿಸಲಾಗಿದೆ. ಕನ್ನಡದ ಕಕಾರಗಳು ಖ ಆಗಿರು ವುದು ವೈಶಿಷ್ಟ್ಯ.

ಮೂಲದ್ರಾವಿಡದ ಮುಖ್ಯಕವಲುಗಳನ್ನು ಡಾ. ಎಂ. ಚಿದಾನಂದಮೂರ್ತಿಯವರು ಹೀಗೆ ಗುರುತಿಸಿದ್ದಾರೆ :




ದ್ರಾವಿಡ ಭಾಷೆಗಳಲ್ಲಿ ಕೆಲವು ಹೋಲಿಕೆ ಮತ್ತು ವ್ಯತ್ಯಾಸಗಳು ಇರುವುದರಿಂದಲೇ ಅವು ಜ್ಞಾತಿ ಭಾಷೆಗಳೂ ಹಾಗೇ ಭಿನ್ನ ಸ್ವತಂತ್ರ ಭಾಷೆಗಳೂ ಆಗಿರುವುದು. ತಮಿಳಿನಲ್ಲಿ ಮೂಲದ್ರಾವಿಡದ ಱ, ೞ ಗಳು ಈಗಲೂ ಇವೆ. ಇವು ಹಳಗನ್ನಡದಲ್ಲಿದ್ದುವು, ಈಗ ಬಳಕೆ ತಪ್ಪಿವೆ. ಸ್ವರ ವ್ಯತ್ಯಾಸಗಳನ್ನು ಗಮನಿಸಿ :

| ತಮಿಳು | ಕನ್ನಡ | ತೆಲುಗು | | ಉದಾ : | | |
|---|---|---|---|---|---|---|
| 'ಇಕಾರ' | ಎ | ಎ | ಆಗಿದೆ | ವಿಳಂಗು | ಬೆಳಗು | ವೆಲುಗು |
| ಐ (ಪದಾಂತ್ಯ) | ಎ | ಅ | | ತಲೈ | ತಲೆ | ತಲ |
| | | | | ತಂಗೈ | ತಂಗೆ (ತಂಗಿ) | ತಂಗ |
| ಉ | ಒ | ಒ | | ಉರಲ್ | ಒರಲು | ರೋಲು |
| ಅ | ಎ | | | ನಡ | ನಡೆ | |
| ಆ | ಏ | ಏ | | ನಾಙ್ | ನೇಙ್ | ನೇಙ್ |
| ವ್ಯಂಜನ ವ್ಯತ್ಯಾಸಗಳು | | | | | | |
| ಕ | ಗ | ಗ | | ಪಕೈ | ಪಗೆ | ಪಗ |
| ಶ | ಸ | ಚ | | ಶೆಂಡು | ಸೆಂಡು | ಚೆಂಡು |
| | | | | ಶೊಲ್ | ಸೊಲ್ | ಚೊಲ್ |

**ದ್ರಾವಿಡ ಭಾಷೆಗಳ ವೈಶಿಷ್ಟ್ಯಗಳು :**

ಕೇಶಿರಾಜ ತನ್ನ 'ಶಬ್ದಮಣಿದರ್ಪಣ'ದಲ್ಲಿ ಕನ್ನಡದ ಅಸಾಧಾರಣ ಲಕ್ಷಣಗಳೆಂದು ಕೆಲವು ಅಂಶಗಳನ್ನು ಹೇಳುತ್ತಾನೆ. ಅವನು ಮತ್ತು ಅವನಂತೆ ಇತರ ವೈಯಾಕರಣರು ಸಂಸ್ಕೃತವನ್ನು ಆಧಾರವಾಗಿಟ್ಟುಕೊಂಡು ಅದಕ್ಕಿಂತ ಭಿನ್ನವಾದ

ಈ ಅಧ್ಯಯನಗಳ ಫಲವಾಗಿ ಭಾಷೆಯ ರಾಚನಿಕ ದೃಷ್ಟಿಯಿಂದ ಅನೇಕ ವಿಶೇಷಾಂಶಗಳನ್ನು ಗುರುತಿಸಲು ಸಾಧ್ಯವಿದೆ.

**ಸಂಸ್ಕೃತ-ಪ್ರಾಕೃತ-ದ್ರಾವಿಡ**

ಎರಡು ವಿಭಿನ್ನ ಜನಾಂಗಗಳ ಸಂಪರ್ಕವಾದಾಗ, ಆ ಸಂಪರ್ಕ ಶಾಶ್ವತರೂಪ ತಳೆದಾಗ ಎರಡು ವಿಭಿನ್ನ ಸಂಸ್ಕೃತಿಗಳು ಮುಖಾಮುಖಿಯಾದಂತೆಯೇ ಆಗುತ್ತದೆ. ಪ್ರಬಲ ಜನಾಂಗದ ಪ್ರಭಾವ ಹೆಚ್ಚಿನದಾಗಬಹುದು. ಆದರೆ ಇಂತಹ ಪ್ರಭಾವಗಳು ಎಂದೂ ಏಕಮುಖಿಯಾಗುವುದಿಲ್ಲ. ಧಾರ್ಮಿಕವಾಗಿ ದ್ರಾವಿಡ ದೇವತೆಗಳು ಆರ್ಯರ ದೇವತೆಗಳೂ ಆದಂತೆ, ಪೂಜೆ ಆರಾಧನೆ ಆಚರಣೆಗಳೂ ಪ್ರಭಾವ ಬೀರಿದಂತೆ, ಸಾಂಸ್ಕೃತಿಕವಾಗಿ ಕಲೆಗಳ ಪ್ರಭಾವವೂ ಆಯಿತೆಂಬುದಕ್ಕೆ ಹೇರಳ ಆಧಾರಗಳು ದೊರೆಯುತ್ತವೆ. ಹಾಗೇ ಭಾಷಾ ವಿಷಯದಲ್ಲೂ ಆರ್ಯಭಾಷೆಗಳ ಪ್ರಭಾವ ದ್ರಾವಿಡ ಭಾಷೆಗಳ ಮೇಲೂ, ದ್ರಾವಿಡ ಭಾಷೆಗಳ ಪ್ರಭಾವ ಸಂಸ್ಕೃತ, ಪ್ರಾಕೃತಗಳ ಮೇಲೂ ಆಗಿದೆ. ಭಾಷಾ ಪ್ರಭಾವ ಎರಡು ಬಗೆಯದು. ಒಂದು, ವ್ಯಾಕರಣಕ್ಕೆ ಸಂಬಂಧಿಸಿದಂತೆ, ಎರಡನೆಯದು ಶಬ್ದಕೋಶಕ್ಕೆ ಸಂಬಂಧಿಸಿದಂತೆ. ಭಾರತದ ಭೌಗೋಳಿಕ ಹೆಸರುಗಳು ಇಂದು ಸಂಸ್ಕೃತೀಕರಣಗೊಂಡಿದ್ದರೂ ಅವುಗಳ ಮೂಲವು ದ್ರಾವಿಡವೇ ಆಗಿದೆ. ಇಂದು ಇಂಗ್ಲಿಷಿನ ಪ್ರಭಾವ ಆರ್ಯ, ದ್ರಾವಿಡ ಭಾಷೆಗಳ ಮೇಲೆ ಹೆಚ್ಚಾಗಿ ಆಗಿದೆ. ಹಾಗೆಯೇ ಇಂಗ್ಲಿಷಿನಲ್ಲೂ ಅನೇಕ ಭಾರತೀಯ ಮೂಲದ ಶಬ್ದಗಳೂ ಸೇರಿವೆ. ಕನ್ನಡದ ಅಕ್ಕಿ (<ಅರ್ಕಿ, ತಮಿಳು 'ಅರಿಶಿ') ಗ್ರೀಕ್‌ನಲ್ಲಿ ಒರಿಜಾ ಆಗಿ, ಇಂಗ್ಲಿಷ್‌ನಲ್ಲಿ ರೈಸ್ ಆಗಿದೆ. ಕನ್ನಡದ 'ಅಚ್ಚುಕಟ್ಟು' ಅಚ್‌ಕಟ್ ಆಗಿ ಇಂಗ್ಲಿಷ್ ಕೋಶ ಸೇರಿದೆ. Mango ಶಬ್ದದ ಮೂಲ, ದ್ರಾವಿಡ ಭಾಷೆಗಳ ಮಾಂಗಾಯ್, ಮಾವಿನಕಾಯಿ. ಇದು ಪೋರ್ಚುಗೀಸ್ ಮೂಲಕ ಇಂಗ್ಲಿಷ್ ಸೇರಿದೆ. ಸಂಸ್ಕೃತ-ಪ್ರಾಕೃತಗಳ ವಿಷಯದಲ್ಲೂ ಪ್ರಭಾವವನ್ನು ಗುರುತಿಸಬಹುದಾಗಿದೆ. ಡಾ. ಕಾಲ್ಡ್‌ವೆಲ್ ಅವರು ಸಂಸ್ಕೃತ, ಪ್ರಾಕೃತಕ್ಕೆ ಸೇರಿರುವ ದ್ರಾವಿಡ ಶಬ್ದಗಳನ್ನು ಗುರುತಿಸಿ, ನಿರ್ಣಯಿಸಲು ಕೆಲವು ಸೂತ್ರಗಳನ್ನು ಹೇಳಿದ್ದಾರೆ.

೧. ಸಂಸ್ಕೃತದಲ್ಲಿ ಯಾವುದೇ ಒಂದು ಶಬ್ದದ ವ್ಯುತ್ಪತ್ತಿಯನ್ನು ಹೇಳಲಾಗದಿದ್ದರೆ, ಆದರೆ ಆ ಶಬ್ದದ ಮೂಲವನ್ನು ದ್ರಾವಿಡ ಭಾಷೆಗಳ ಮೂಲಕ ಸ್ಪಷ್ಟಪಡಿಸಬಹುದಿದ್ದರೆ; ಹಾಗೇ ದ್ರಾವಿಡ ಭಾಷೆಗಳಲ್ಲಿ ಆ ಶಬ್ದದ ಇತರ ಸಾಧಿತರೂಪಗಳಿದ್ದರೆ ಆಗ ಅದು ಸಂಸ್ಕೃತ ಮೂಲದ್ದಲ್ಲ; ದ್ರಾವಿಡದಿಂದ ಸ್ವೀಕೃತ ಎನ್ನಬಹುದು.

೨. ಆ ಶಬ್ದದ ಅರ್ಥವನ್ನು ಸೂಚಿಸುವ ಬೇರೆ ಶಬ್ದಗಳು ಸಂಸ್ಕೃತದಲ್ಲಿ ಇದ್ದು, ದ್ರಾವಿಡ ಭಾಷೆಯಲ್ಲಿ ಆ ಅರ್ಥದ ಅದೊಂದೇ ಶಬ್ದವಿದ್ದು ಪರ್ಯಾಯ ಶಬ್ದಗಳಿಲ್ಲದಿದ್ದರೆ ಆಗಲೂ ದ್ರಾವಿಡ ಮೂಲಶಬ್ದವೆಂಬುದು ಸ್ಪಷ್ಟ.

೩. ಸಂಸ್ಕೃತದ ಜ್ಞಾತಿಭಾಷೆಗಳಲ್ಲಿ (ಆರ್ಯ) ಆ ಶಬ್ದದ ರೂಪಾಂತರಗಳಿಲ್ಲದೆ ದ್ರಾವಿಡ ಭಾಷೆಗಳಲ್ಲಿ ಅದರ ರೂಪಾಂತರಗಳಿದ್ದರೆ ಆಗಲೂ ಸಹ ಅದು ಸಂಸ್ಕೃತ ಮೂಲದ್ದಲ್ಲ ದ್ರಾವಿಡ ಮೂಲದ್ದು ಎನ್ನಬಹುದು.

೪. ಆ ಶಬ್ದದ ಬಗ್ಗೆ ಸಂಸ್ಕೃತ ವಿದ್ವಾಂಸರು ಕಾಲ್ಪನಿಕ ವ್ಯುತ್ಪತ್ತಿ ಹೇಳಿ ಸಮರ್ಥಿಸಿಕೊಳ್ಳುವ ಸ್ಥಿತಿಯಿದ್ದು, ದ್ರಾವಿಡದಲ್ಲಿ ಅದರಿಂದ ಭಾಷಾದೃಷ್ಟಿಯ ವಿವರಣೆ ಸಾಧ್ಯವಿದ್ದರೆ ; ಹಾಗೂ ಅದರಂತೆ ವಿವಿಧ ರೂಪಗಳನ್ನು ಸಾಧಿಸಬಹುದಾದರೆ ಆ ಶಬ್ದ ದ್ರಾವಿಡ ಭಾಷೆಯದೆನ್ನಬಹುದು.

ಈ ಸೂತ್ರದನ್ವಯ ಅನೇಕ ಶಬ್ದಗಳು ಸಂಸ್ಕೃತಕ್ಕೆ ದ್ರಾವಿಡ ಭಾಷಾ ಮೂಲದಿಂದ ಹೋಗಿ ಸೇರಿವೆ ಎಂಬುದು ತಿಳಿಯಬರುತ್ತದೆ. ಉದಾ : ನೀರು. ಇದು ದ್ರಾವಿಡ ಭಾಷೆಗಳಲ್ಲಿ ಮೂಲಭೂತ ಶಬ್ದ. ಸಂಸ್ಕೃತದಲ್ಲಿ ಪಯ, ವಾರಿ, ಉದಕ, ಜಲ, ತೋಯ ಶಬ್ದಗಳಿವೆ. ನೀರು ಶಬ್ದದಿಂದ ಬೆನ್ನೀರ್, ತಣ್ಣೀರ್, ಕಣ್ಣೀರ್, ನೀರುಳ್ಳಿ ಇತ್ಯಾದಿ ಸಾಧಿತ ಶಬ್ದಗಳನ್ನು ಕನ್ನಡದಲ್ಲಿ ಕಾಣಬಹುದು. ಸಂಸ್ಕೃತದಲ್ಲಿ ಹಾಗಿಲ್ಲ. ಹೀಗೆ ಭಾಷಾತಜ್ಞರು ದ್ರಾವಿಡ ಭಾಷೆಯಿಂದ ಹೋಗಿ ಸಂಸ್ಕೃತದಲ್ಲಿ ಸೇರಿರುವ ಅನೇಕ ಶಬ್ದಗಳನ್ನು ಗುರುತಿಸಿದ್ದಾರೆ. ಇಲ್ಲಿ ಕೆಲವನ್ನು ದೃಷ್ಟಾಂತಕ್ಕಾಗಿ ನೀಡಿದೆ.

ನೀರು, ಮೀನ (ಮೀನ್, ಮಿಂಚು, ಮಿಣುಕು, ಮಿನುಗು ಇತ್ಯಾದಿ ದ್ರಾವಿಡದಲ್ಲಿವೆ. ಸಂಸ್ಕೃತದಲ್ಲಿ ಪರ್ಯಾಯ 'ಮತ್ಸ್ಯ' ಶಬ್ದವಿದೆ), ಕುಟಿ (ಮನೆ, ಗುಡಿ, ಗುಡಿಸಲು ಶಬ್ದಗಳನ್ನು ಗಮನಿಸಿ), ಪಲ್ಲಿ (ಹಳ್ಳಿ), ಹೇರಂಬ (<ಎರುಮೈ, ಎಮ್ಮೆ), ಏಡ (<ಆಡು, ಕುರಿ), ಮರುತ್ತ (=ವೈದ್ಯ. ಮರುಂದು, ಮದ್ದು), ಅಟ್ಟ (ಬೇಯಿಸಿದ ಅನ್ನ, <ಅಡು), ವಲ್ಲಿ (ಬಳ್ಳಿ, ವಲ್ಲಿ), ಮುಕುಳ (<ಮುಗುಳ್, ಮುಗಿಳ್), ಪಾಲಿ (<ಪಾಲೆ, ಹಾಲೆ, ಕಿವಿಯ ಕೆಳತುದಿ), ಮುಂಡ (<ಮುಂಡೆ, ತಲೆ), ಮಾಚಲ (ಮೊಸಳೆ), ಮೇಕ (<ಮೇಕೆ), ಕುಂತಲ (ಕೂಂದಲ್, ಕೂದಲು), ಉಲ್ಕ (=ಉಲ್ಕಾಪಾತ, ಉಳುಕುವಿನಿಂದ ಆದದ್ದು), ಶೀರಾ (ಶೇರೈ, ಕೇರೆಹಾವು), ತಾಲ (ತಾಳೆಗಿಡ), ತಟಿತ್-ತಡಿತ್ (ತೆಡಿಲ್ [ತುಳು], ಸೆಡಿಲ್, ಸಿಡಿಲು), ಮಲಯ (ಮಲೈ, ಮಲೆ), ಗಂಡ (=ವೀರ), ಶುಂಡಿ (<ಸೊಂಡಿ, ಕುಂಟಣಗಿತ್ತಿ), ಖಲೀನ (<ಕಡಿವಾಣ), ತಲ್ಪ (ತೆಪ್ಪ), ಕಲ್ಯ (ಕಳ್, ಹೆಂಡ), ಖರ್ಜು (<ಕಜ್ಜಿ), ಪ್ಸಾ (ಪಸಿ, ಹಸಿವು), ಮಟಚಿ (ಮಿಡಿ='ಹಾರು'ವಿನಿಂದ ಮಿಡತೆ, ಮಿಡುಥ [ತೆ], ವೆಟ್ಟಲ್), ಕುಂಡ, ಪುಷ್ಪ (<ಹೂ, ಪೂ), ಪೂಜನ-ಪೂಜಾ (ಪೂ+ಚೆಯ್), ನೀಲ, ಫಲ (ಪಟಂ, ಪಣ್), ಕಲಾ (<ಕಲಿ ಧಾತು), ಶವ (<ಸಾ, ಸಾಯ್ ಧಾತುವಿನಿಂದ ಸತ್ತದ್ದು, ಹೆಣ ಎಂಬರ್ಥ), ವಲಯ (<ವಳೈ, ಬಳೆ, ಬಳಸು=ಸುತ್ತು), ಅಟವಿ (ಅಡವಿ, ಅಡ=ದಟ್ಟ, ಅಡಕಲು), ಕಾಲ (ಕಾಳ, ಕಪ್ಪು <ಕರ್),

ನಾರಿಕೇಳ (ಕೇಲ್ ಎಂದು ಮಲಯಾಳಂನಲ್ಲಿ, ನಲ್-ನಾಟ್ ಎಂದರೆ ಒಳ್ಳೆಯ, ನಾಲ್‌ಕೇಲ್ >ನಾರಿಕೇಳ> ನಾರಿಯಲ್), ಘೋಟಕ> ಘೋಡಾ[ಹಿಂದೂಸ್ತಾನಿ] (ಈ ಶಬ್ದ ದ್ರಾವಿಡದ ಕುದುರೈ>ಗುರ್ರಮು>ಗುತ್ರಮು>ಘೋಟ> ಘೋಟಕ ಎಂದಾಗಿದೆ), ವ್ಯಜನ-ವೀಜನ (ಬೀಸು, ಬೀಸಣಿಗೆ, ವೀಚು [ತೆ] ಗಳಿಂದ ಆದದ್ದು), ಮುಖ (ಸಂಸ್ಕೃತದಲ್ಲಿ 'ಆಸ್ಯ' ಶಬ್ದವೂ ಇದೆ. 'ಮೂ' ದ್ರಾವಿಡ ಮೂಲದಿಂದ ಆದದ್ದು. ಮೂಗು, ಮುಂದೆ, ಮುಂಚೆ, ಮುದಲು), ಗಾರ್ದಭ (ಗಾಡಿದೆ [ತೆ] ಕಲುದೈ [ತ], ಕಟ್ಚಿತ್ತೆ>ಕರ್ತೆ> ಕತ್ತೆ [ಕ]), ಗೋಧೂಮಾ: (<ಗೋದಿ [ಕ]. ಸಂಸ್ಕೃತದ ವಿವರಣೆಯಾದ ಗೋ+ಧೂಮಾ: ಸರಿಯಲ್ಲ).

ಶಬ್ದಕೋಶದ ಮೇಲೆ ಪ್ರಭಾವವಾದಂತೆ ಸಂಸ್ಕೃತ ವ್ಯಾಕರಣದ ಮೇಲೂ ದ್ರಾವಿಡ ಭಾಷೆಗಳ ಪ್ರಭಾವವಾಗಿದೆಯೆಂದು ಭಾಷಾತಜ್ಞರು ಹೇಳುತ್ತಾರೆ. ಮೂರ್ಧನ್ಯಗಳ (ಟವರ್ಗ) ಆಧಿಕ್ಯ; ಇದು ದ್ರಾವಿಡ ಪ್ರಭಾವದಿಂದಾದದ್ದು, ಏಕೆಂದರೆ ಸಂಸ್ಕೃತ ಹೊರತು ಇತರ ಯಾವ ಆರ್ಯಭಾಷೆಗಳಲ್ಲೂ ಈ ವ್ಯಂಜನೋಚ್ಚಾರಣೆ ಇಲ್ಲ. ಸಂಸ್ಕೃತಸಮಾಸಗಳಲ್ಲಿ ಕ, ಚ, ಟ, ತ, ಪ ಗಳು ಗ, ಜ, ಡ, ದ, ಬ ಗಳಾಗುತ್ತವೆ. ಇದು ದ್ರಾವಿಡ ಭಾಷೆಗಳಲ್ಲಿ ಪದಮಧ್ಯ ಪರುಷವ್ಯಂಜನಗಳು ಮೃದುವ್ಯಂಜನಗಳಾಗುವುದರ ಪ್ರಭಾವ ಎನ್ನುತ್ತಾರೆ. ಸಂಸ್ಕೃತದಲ್ಲಿ ಪೃಥ್ವೀ-ಪೃಥವೀ, ಸ್ವರ್ಣ-ಸುವರ್ಣ ಇತ್ಯಾದಿ ಸಂಯುಕ್ತ ವ್ಯಂಜನಗಳು ಸ್ವರ ಸೇರಿ ಬಿಡಿಯಾಗುವುದು ವಿರಳವಾಗುವುದು ದ್ರಾವಿಡ ಪ್ರಭಾವದಿಂದಲೇ. ದ್ರಾವಿಡ ಭಾಷೆಗಳಲ್ಲಿ ಇದು ಸಾಮಾನ್ಯ. ಇಂಡೋಯುರೋಪಿಯನ್ ಭಾಷೆಗಳಲ್ಲಿ 'ರ' ಇರುವೆಡೆ ಸಂಸ್ಕೃತದಲ್ಲಿ ಕೆಲವೆಡೆ 'ಲ' ಕಂಡುಬರುತ್ತದೆ. ಇದು ದ್ರಾವಿಡ ಭಾಷೆಗಳಲ್ಲಿನ ರ>ಲ ವ್ಯತ್ಯಯದ ಪರಿಣಾಮ ಎನ್ನಲಾಗಿದೆ. ಚ>ಸ ಆಗುವುದು, ಸ>ಹ ಆಗುವುದೂ ಸಹ ದ್ರಾವಿಡ ಪ್ರಭಾವದಿಂದ ಎಂದು ಹೇಳಲಾಗಿದೆ. ಗುಣವಾಚಕಗಳ ರೀತಿಯಲ್ಲಿ ಕ್ರಿಯಾಪದವನ್ನು ಬಳಸುವುದು ದ್ರಾವಿಡ ಭಾಷಾ ವೈಶಿಷ್ಟ್ಯ. ವೇದಕಾಲದಲ್ಲಿ ಪೂರ್ಣಕ್ರಿಯಾರೂಪಗಳೇ ಇದ್ದುವು. ಅನಂತರ ಬದಲಾಗಲು ದ್ರಾವಿಡಸಂಪರ್ಕ ಕಾರಣ. ಕೃತವಾನ್ ಮೊದಲಾದ ರೂಪಗಳೂ ಸೆಯ್ದವನ್, ಗೆಯ್ದವನ್ ಮುಂತಾದ ದ್ರಾವಿಡ ರೂಪಗಳ ಪರಿಣಾಮದವಾಗಿವೆ.

ಸಂಸ್ಕೃತದಿಂದ ಬೇರೆ ಬೇರೆ ಪ್ರಾಕೃತ ಭಾಷೆಗಳು ಹುಟ್ಟಲು ದ್ರಾವಿಡ ಭಾಷೆಗಳು ಪ್ರಭಾವ ಬೀರಿದುವು ಎಂದು ವಿದ್ವಾಂಸರ ಮತ. ಸಂಸ್ಕೃತವನ್ನು ದ್ರಾವಿಡರು ಉಚ್ಚರಿಸುವುದು ಕಷ್ಟವಾಗಿದ್ದಿರಬೇಕು. ಆಗ ತಮ್ಮ ಭಾಷೆಯಂತೆಯೇ ಸಂಸ್ಕೃತವನ್ನೂ ಉಚ್ಚರಿಸತೊಡಗಿದಾಗ ಉಚ್ಚಾರಣೆಯಲ್ಲಿ ಶೈಥಿಲ್ಯ ಕಾಣಿಸಿಕೊಂಡಿತು. ಅದರ ಪರಿಣಾಮವಾಗಿ ಬೇರೆ ಬೇರೆ ಪ್ರಾಂತ್ಯಗಳಲ್ಲಿ ಬೇರೆ ಬೇರೆ ಪ್ರಾಕೃತಗಳು ಕಾಣಿಸಿಕೊಂಡುವು. ಶಾತವಾಹನರು ದಕ್ಷಿಣದ ಬಹುಭಾಗವನ್ನು ಆಳುತ್ತಿದ್ದರು.

ಅವರ ಆಡಳಿತ, ವ್ಯವಹಾರ ಭಾಷೆ ಪ್ರಾಕೃತವಾಗಿತ್ತು. ಹೀಗಾಗಿ ಕನ್ನಡದ ಅನೇಕ ಶಬ್ದಗಳು ಪ್ರಾಕೃತದಲ್ಲಿ ಸೇರಿವೆ. ಡಾ. ಎ. ಎನ್. ಉಪಾಧ್ಯೆಯವರು ಸೂಚಿಸಿರುವ ಶಬ್ದಗಳಲ್ಲಿ ಕೆಲವನ್ನು ಗಮನಿಸಬಹುದು. ಉಮ್ಮಲ್ಲೊ (ಕನ್ನಡದ ಉಮ್ಮಳ), ಅಕ್ಕಾ, ಉಡು, ಊರೋ (ಊರು), ಊಲೋ (ಉರುಳು, ಉರುಳುವುದು), ಎತ್ತೊಪ್ಪವು (ಎಂತಪ್ಪ, ಎಂತಹವನು). ಕಲೀ (ಕಲಿ=ಶೂರ), ಕುರುಡ (ನಿರ್ದಯ ಎಂಬರ್ಥ ಪ್ರಾಕೃತದಲ್ಲಿ ಬಂದಿದೆ), ಕೂರ (ಕೂಳು), ಕೊಟ್ಟ (ಕೋಟೆ), ಖಡ್ಡಂ (ಗಡ್ಡ), ಚಿಕ್ಕ, ಣೇಸರೋ (ನೇಸರು), ಪಾವೋ (ಪಾವು, ಹಾವು), ಪುಲ್ಲೀ (ಪುಲಿ, ಹುಲಿ), ಪೊಚ್ಚಂ (ಹೊಚ್ಚ ಹೊಸ), ಮುರುಲೋ (ಮುರುಳು), ಮುದ್ದಿ (ಮುದ್ದುಮಾಡು, ಮುತ್ತಿಡು), ರೊಟ್ಟ (ಅಕ್ಕಿಯ ಹಿಟ್ಟು ಅರ್ಥದಲ್ಲಿ ಪ್ರಯೋಗವಾಗಿದೆ), ಸೂಲಾ (ವೇಶ್ಯೆ, ಸೂಳೆ) ಇತ್ಯಾದಿ.

*

## ೬. ಸಂಸ್ಕೃತ - ಕನ್ನಡ

**ಕನ್ನಡವು ಸಂಸ್ಕೃತ ಜನ್ಯವೇ? :** ಭಾರತವೇ ಆರ್ಯಜನಾಂಗದ ಮೂಲವೆಂಬ ಅಭಿಪ್ರಾಯವನ್ನು ಕೆಲವು ಭಾರತೀಯ ವಿದ್ವಾಂಸರು ಪ್ರತಿಪಾದಿಸಿದ್ದಾರೆಂದು ಹಿಂದೆಯೇ ಹೇಳಿದೆ. ಅದರಂತೆ ಗೀರ್ವಾಣವಾಣಿಯಾದ ಸಂಸ್ಕೃತವೇ (ಭಾರತದ) ಎಲ್ಲ ಭಾಷೆಗಳ ಮೂಲವೆಂಬ ಅಭಿಪ್ರಾಯವೂ ಇತ್ತು. ಕನ್ನಡ ದ್ರಾವಿಡ ಭಾಷಾ ವರ್ಗದ ಒಂದು ಭಾಷೆ, ದ್ರಾವಿಡ ಭಾಷಾ ವರ್ಗ ಆರ್ಯ ಭಾಷಾ ವರ್ಗದಿಂದ ವಿಭಿನ್ನ ವಾದುದು ಎಂದು ಹೇಳಿದ ಮೇಲೆ ಕನ್ನಡವೂ ಆರ್ಯ ಭಾಷೆಯಿಂದ, ಅಂದರೆ ಆರ್ಯವರ್ಗದ ಒಂದು ಭಾಷೆಯಾದ ಸಂಸ್ಕೃತದಿಂದ ಬೇರೆ ಎಂಬ ಮಾತು ಸ್ವತಃ ಸಿದ್ಧ ವಾದುದು. ಆದರೆ ಕನ್ನಡದಲ್ಲಿರುವ ಸಂಸ್ಕೃತ ಶಬ್ದಗಳ ಬಾಹುಳ್ಯದಿಂದ ಇಂದಿಗೂ ಅನೇಕರಲ್ಲಿ ಕನ್ನಡವು ಸಂಸ್ಕೃತದಿಂದ ಹುಟ್ಟಿತು, ಸಂಸ್ಕೃತ ಕನ್ನಡದ ತಾಯಿ ಎಂಬ ಭ್ರಮಾಮೂಲ ಅಭಿಪ್ರಾಯ ತಳವೂರಿದೆ. ಆದ್ದರಿಂದ ಸಂಸ್ಕೃತ-ಕನ್ನಡಗಳ ಸಂಬಂಧ ವನ್ನು ಇಲ್ಲಿ ಮತ್ತೆ ಪರಿಶೀಲಿಸಿದೆ.

ಆರ್ಯರು ಭಾರತಕ್ಕೆ ಬಂದಮೇಲೆ ತಮ್ಮ ಭಾಷೆಯಾದ ಸಂಸ್ಕೃತವನ್ನು ಸಮೃದ್ಧಗೊಳಿಸಿದರು. ಸು. ಕ್ರಿ.ಪೂ. ಐದನೆಯ ಶತಮಾನದವರೆಗೆ ಸಂಸ್ಕೃತ ಭಾರತದಲ್ಲಿ ಪ್ರಮುಖವಾದ ಸ್ಥಾನವನ್ನು ಪಡೆದಿತ್ತು. ಬುದ್ಧನ ಕಾಲಾನಂತರ ಅದು ವಿದ್ವಾಂಸರ ಭಾಷೆಯಾಗಿ ಜನಸಾಮಾನ್ಯರಿಂದ ದೂರವಾಯಿತು. ಸಂಸ್ಕೃತ ದಿಂದ ಹುಟ್ಟಿದ ಪ್ರಾಕೃತ, ಪಾಳಿ, ಅಪಭ್ರಂಶಗಳು, ದ್ರಾವಿಡ ಜನಾಂಗವಿರಲಿ, ಆರ್ಯವರ್ಗದ ಜನಸಾಮಾನ್ಯರಲ್ಲಿಯೇ ರೂಢಿಗೆ ಬಂದುವು. ಬೌದ್ಧಧರ್ಮದ ಪ್ರಚಾರದೊಂದಿಗೆ ಪ್ರಾಕೃತಕ್ಕೆ ಜನಮಾನ್ಯತೆ ದೊರೆಯಿತು. ಆದರೆ ವೈದಿಕ ಧರ್ಮ ಬೌದ್ಧಧರ್ಮದ ಅನೇಕ ಅಂಶಗಳನ್ನೂ ವ್ಯವಸ್ಥೆಯನ್ನೂ ಸ್ವೀಕರಿಸಿ, ಜೀರ್ಣಿಸಿ ಕೊಂಡು ಮತ್ತೆ ತಲೆಯೆತ್ತಿದಮೇಲೆ ಸಂಸ್ಕೃತ ಜನಸಾಮಾನ್ಯರ ಭಾಷೆಯಾಗದೆ ಧಾರ್ಮಿಕ, ಸಾಂಸ್ಕೃತಿಕ, ಆಡಳಿತ ಭಾಷೆಯಾಯಿತು. ಆ ವೇಳೆಗೆ ಸಂಸ್ಕೃತಕ್ಕೆ ವ್ಯಾಕರಣ ನಿಯಮಗಳು ರೂಪಿತವಾಗಿದ್ದು ಅದರ ಬೆಳವಣಿಗೆ ನಿಲ್ಲುವಂತಾಯಿತು, ಸಾಹಿತ್ಯ ಸೃಷ್ಟಿಯಾದರೂ ಸಹ. ಜನರಿಂದ ಸಂಸ್ಕೃತ ದೂರ ಉಳಿಯುವಂತಾಯಿತು. ಕಾಲಕ್ರಮೇಣ ಉತ್ತರದಲ್ಲಿ ಪ್ರಾಕೃತವು ಪ್ರಾದೇಶಿಕ ವೈಲಕ್ಷಣ್ಯಗಳ ಕಾರಣ, ದೇಶದ ವಿಸ್ತಾರ, ಸಂಪರ್ಕದ ಅಭಾವಗಳ ಕಾರಣ ಸ್ವತಂತ್ರಭಾಷೆಗಳ ರೂಪ ಪಡೆಯಿತು. ದಕ್ಷಿಣ ಭಾರತದಲ್ಲಿ ದ್ರಾವಿಡ ಮೂಲದ ಭಾಷೆಗಳು ಪ್ರಾಚುರ್ಯ ಪಡೆದುವು, ಸಾಹಿತ್ಯ ಕಾಣಿಸಿಕೊಂಡಿತು. ಆದರೂ ಸಂಸ್ಕೃತ ಧಾರ್ಮಿಕ ಭಾಷೆ ಯಾಗಿದ್ದರಿಂದ ಪಂಡಿತರ ಭಾಷೆಯಾಗಿದ್ದರಿಂದ ಪ್ರಾದೇಶಿಕ ಭಾಷೆಗಳ ಮೇಲೆ ಭಾಷಾಕೋಶ ದೃಷ್ಟಿಯಿಂದ ಪ್ರಭಾವ ಬೀರಿತು. ಭಾರತದ ವಿದ್ವಾಂಸರು ಸಂಸ್ಕೃತವೇ

ಈ ಎಲ್ಲ ಭಾಷೆಗಳ ಮೂಲವೆಂದು ತಿಳಿದರು. ಈ ಭಾಷೆಗಳ ಉಗಮದ ಬಗ್ಗೆ ಪುರಾಣ ಕಥೆಗಳನ್ನು ಕಲ್ಪಿಸಿ ವಿವರಿಸಲಾಯಿತು. ಅಚ್ಚಕನ್ನಡ ಶಬ್ದಗಳಿಗೂ ಸಂಸ್ಕೃತ ಭಾಷೆಯ ಮೂಲಕ ವ್ಯುತ್ಪತ್ತಿ ಹೇಳುವ ಸಂಪ್ರದಾಯವೂ, ಪ್ರಯತ್ನಗಳೂ ನಡೆದುವು. ಇಂತಹ ಪರಿಸರದಲ್ಲಿ ಕನ್ನಡವು ಸಂಸ್ಕೃತಜನ್ಯವೆಂಬ ಭಾವನೆ ಹರಡಿದ್ದು ಆಶ್ಚರ್ಯವೇನೂ ಅಲ್ಲ.

ತೆಲುಗಿನ ಪ್ರಸಿದ್ಧ ಕವಿ ಕೇತನ ಸಂಸ್ಕೃತವೇ ಎಲ್ಲ ಭಾಷೆಗಳ ತಾಯಿ ಎಂದು ಹೇಳಿದನು. ಮಲೆಯಾಳಂ ವ್ಯಾಕರಣ ಗ್ರಂಥದಲ್ಲಿಯೂ (೧೪ನೇ ಶತಮಾನದ 'ಲೀಲಾತಿಲಕ') ಸಂಸ್ಕೃತ ಅನಾದಿಭಾಷೆ, ಅದರಿಂದ ಎಲ್ಲ ಭಾಷೆಗಳೂ ಹುಟ್ಟಿದುವು ಎಂದಿದೆ. ಕನ್ನಡದ ನಾಗವರ್ಮ, ಪೊನ್ನರಂತಹವರೂ ಸಂಸ್ಕೃತ ಪ್ರಾಕೃತ ಅಪಭ್ರಂಶ ಪೈಶಾಚಿಕವೆಂಬ ಮೂರೂವರೆ ಭಾಷೆಗಳಿಂದ 'ಸರ್ವವಿಷಯ ಭಾಷಾ ಜಾತಿಗಳಕ್ಕುಂ' ಎಂದಿದ್ದಾರೆ. ಹಲವು ಸಂಸ್ಕೃತ ವಿದ್ವಾಂಸರು ದಕ್ಷಿಣದ ಭಾಷೆಗಳನ್ನು ಮ್ಲೇಚ್ಛಭಾಷೆಗಳೆಂದು ಪರಿಗಣಿಸಿದರು. ಭಾವಪ್ರಕಾಶಕಾರನಾದ ಶಾರದಾತನಯ ದ್ರವಿಡ, ಕನ್ನಡ, ಆಂಧ್ರ, ಹೂಣ, ಹಿಮ್ಮೀರ, ಸಿಂಹಲ ಮುಂತಾದ ಭಾಷೆಗಳು ಮ್ಲೇಚ್ಛಭಾಷೆಗಳಾಗಿವೆ ಎಂದು ಕನ್ನಡವನ್ನೂ ಸೇರಿಸಿ ಹೇಳಿದ್ದಾನೆ. ಭಟ್ಟಾಕಳಂಕ ಕನ್ನಡ ವ್ಯಾಕರಣವನ್ನು ಸಂಸ್ಕೃತದಲ್ಲಿ ರಚಿಸಿ "ಭಗವದ್ವಾಣಿಯು ಸ್ವೋತ್ಪತ್ತಿ ಸಮಯದಲ್ಲಿ ಸಮುದ್ರಘೋಷದಂತೆ ಅವ್ಯಕ್ತವಾದ ಏಕಭಾಷಾರೂಪದಲ್ಲಿದ್ದರೂ ತನ್ನ ವಿಚಿತ್ರಶಕ್ತಿಯಿಂದ ನಾನಾ ದೇಶ, ನಾನಾ ಜನಪದ, ನಾನಾ ಜಾತಿಭೇದಗಳಿಂದ ನಾನಾ ಭಾಷೆಗಳಾಗಿ ಪರಿಣಮಿಸಿರುವುದು" ಎಂದಿದ್ದಾನೆ. ಸಂಸ್ಕೃತ ಗೀರ್ವಾಣವಾಣಿ, ದೇವಭಾಷೆಯಾದ್ದರಿಂದ ದೇವವಾಣಿ ಸಂಸ್ಕೃತವೇ ಎಂದೂ, ಆದ್ದರಿಂದ ಸಂಸ್ಕೃತದಿಂದ ಎಲ್ಲ ಭಾಷೆಗಳೂ ಹುಟ್ಟಿದವೆಂಬ ಕಲ್ಪನೆ ಹರಡಿರಬೇಕು. ಪಾಶ್ಚಾತ್ಯ ವಿದ್ವಾಂಸರಲ್ಲಿ ಕೆಲವರು ಕೆಲ್ಟಿಕ್, ಟ್ಯೂಟೊನಿಕ್ ಭಾಷೆಗಳಿಗೂ ದಕ್ಷಿಣ ಭಾರತದ ಭಾಷೆಗಳಿಗೂ ಕೆಲವು ಹೋಲಿಕೆ ಕಂಡು ಇವುಗಳನ್ನು ಇಂಡೋ ಯೂರೋಪಿಯನ್ ಭಾಷಾವರ್ಗಕ್ಕೆ ಸೇರಿಸಿದ್ದರು. ಹತ್ತೊಂಬತ್ತನೇ ಶತಮಾನದ ಪ್ರಾರಂಭದ ದಶಕಗಳಲ್ಲಿ ಸಂಸ್ಕೃತ–ಕನ್ನಡ–ತಮಿಳು ಭಾಷೆಗಳ ತೌಲನಿಕ ಅಧ್ಯಯನ ನಡೆದಂತೆ ಕಾಣಬರುತ್ತದೆ. ಶ್ರೀರಂಗಪಟ್ಟಣದ ಕೃಷ್ಣಮಾಚಾರ್ಯ ತನ್ನ 'ಹೊಸಗನ್ನಡ ನುಡಿಗನ್ನಡಿ'ಯಲ್ಲಿ ಮೊದಲ ಬಾರಿಗೆ ಕನ್ನಡ ತಮಿಳುಗಳು ಸಂಸ್ಕೃತದಿಂದ ಬೇರೆ ಎನ್ನುತ್ತಾನೆ. ಶಬ್ದಗಳನ್ನು ಹೋಲಿಸಿ ಚರ್ಚಿಸಿದ್ದಾನೆ. ಅನಂತರ ಕಾಲ್ಡ್‌ವೆಲ್ ದ್ರಾವಿಡ ಭಾಷೆಗಳ ತೌಲನಿಕ ವ್ಯಾಕರಣ ರಚಿಸಿ, ಒಂದು ಭಾಷೆಯ ಮೂಲ ತಿಳಿಯಲು ಅಗತ್ಯವಾದ ಭಾಷಾವೈಜ್ಞಾನಿಕ ಆಧಾರಗಳ ಮೇಲೆ ಸಂಸ್ಕೃತ ಮತ್ತು ದ್ರಾವಿಡ ಭಾಷೆಗಳು ಭಿನ್ನ ಮೂಲದುವು ಎಂಬುದನ್ನು ತೋರಿದರು.

ಶಬ್ದಕೋಶ ಮತ್ತು ವ್ಯಾಕರಣ ಈ ಎರಡು ದೃಷ್ಟಿಯಿಂದಲೂ ತುಲನೆ ಅಗತ್ಯವಾಗುತ್ತದೆ. ಬೇರೆ ಭಾಷೆಯ ಪ್ರಭಾವ ಎಷ್ಟೇ ಇದ್ದರೂ ದೇಹದ ಅಂಗಸೂಚಕ ಶಬ್ದಗಳು, ಬಾಂಧವ್ಯಸೂಚಕ ಶಬ್ದಗಳು, ಮನೆ ಹಾಗೂ ಬಳಕೆಯ ಪ್ರಾಣಿಗಳಿಗೆ ಸಂಬಂಧಿಸಿದ ಶಬ್ದಗಳು, ಉದ್ಯೋಗಕ್ಕೆ ಸಂಬಂಧಿಸಿದ ಶಬ್ದಗಳು, ಸರ್ವನಾಮಗಳು, ಸಂಖ್ಯಾವಾಚಕಗಳು, ಕ್ರಿಯಾಪದಗಳು ಮೂಲಭಾಷೆಯವೇ ಉಳಿದುಬರುತ್ತವೆ ಎಂದು ಹಿಂದೆಯೇ ಹೇಳಿದೆ. ಬೇರೆ ಭಾಷೆಯಿಂದ ಏನಿದ್ದರೂ ನಾಮಪದಗಳಲ್ಲಿ ಶಾಸ್ತ್ರ, ಸಂಸ್ಕೃತಿ, ನಾಗರಿಕತೆಗೆ ಸಂಬಂಧಿಸಿದ ಶಬ್ದಗಳು, ಗುಣವಾಚಕ ವಿಶೇಷಣಗಳು, ಭಾವನಾಮಗಳು ಸೇರಬಹುದು.

೧. ದೇಹದ ಅಂಗಸೂಚಕ ಶಬ್ದಗಳು :

| ಸಂಸ್ಕೃತ | ಕನ್ನಡ | ತಮಿಳು | ತೆಲುಗು | ಮಲೆಯಾಳಂ |
|---|---|---|---|---|
| ಹಸ್ತ | ಕಯ್ | ಕಯ್ | ಚೇಯಿ | ಕೈ |
| ಶಿರಸ್ | ತಲೆ | ತಲೈ | ತಲ | ತಲ |
| ಅಕ್ಷಿ, ನಯನ | ಕಣ್ | ಕಣ್ | ಕನ್ನು | ಕಣ್ಣು |
| ಕರ್ಣ | ಕಿವಿ | ಶೆವಿ | ಚೆವಿ | ಚೆವಿ |
| ದಂತ | ಹಲ್ಲು | ಪಲ್ | ಪಲ್ಲು | ಪಲ್ಲು |

೨. ಸಂಬಂಧವಾಚಕಗಳು :

| | | | | |
|---|---|---|---|---|
| ಭ್ರಾತೃ | ಅಣ್ಣ | ಅಣ್ಣ | ಅನ್ನ | ಏಟ್ಟ (<ಜ್ಯೇಷ್ಠನಿಂದ) |
| | ತಮ್ಮ | ತಂಬಿ | ತಮ್ಮುಡು | ತಂಬಿ, ತಂಬಾನ್ |
| ಮಾತೃ | ತಾಯಿ | ತಾಯ್, ಆಯಿ | ತಲ್ಲಿ | ಅಮ್ಮ |
| ಪಿತೃ | ತಂದೆ | ತಂದೈ | ತಂಡ್ರಿ | ಅಚ್ಛ |

೩. ಪ್ರಾಣಿ ಪಕ್ಷಿಗಳು :

| | | | | |
|---|---|---|---|---|
| ವೃಷಭ | ಎತ್ತು | ಎರುದು | ಎದ್ದು | ಎರುದು |
| ವ್ಯಾಘ್ರ | ಹುಲಿ | ಪುಲಿ | ಪುಲಿ | ಪುಲಿ |
| ಸರ್ಪ | ಹಾವು | ಪಾಂಬು | ಪಾಮು | ಪಾಮ್ಮು |
| ಮಹಿಷ | ಎಮ್ಮೆ | ಎರುಮೈ | ಎನುಮು | ಎಱುಮ |

೪. ಸಾಮಾನ್ಯ ಪದಾರ್ಥಗಳು :

| | | | | |
|---|---|---|---|---|
| ಕ್ಷೀರ | ಹಾಲು | ಪಾಲ್ | ಪಾಲು | ಪಾಲ್ |
| ಕವಾಟ | ಬಾಗಿಲು | ವಾಸಲ್ (ವಾಯಿಲ್) | ವಾಕಿಲಿ | ವಾಕಿಲ್ |

| | | | | |
|---|---|---|---|---|
| ಲವಣ | ಉಪ್ಪು | ಉಪ್ಪು | ಉಪ್ಪು | ಉಪ್ಪು |
| ಆತಪತ್ರ | ಕೊಡೆ | ಕುಡೈ | ಗೊಡಗು | ಕೊಡ |

೫. ಸರ್ವನಾಮಗಳು :

| | | | | |
|---|---|---|---|---|
| ಅಹಂ | ನಾನು | ಯಾನ್, ನಾನ್ | ನೇನು | ಞಾನ್ |
| | ನಾವು | ನಾಂಗಳ್, ನಾವ್ | ಮೇಮು | ಞಾಙ್ಙಳ್ |
| ತ್ವಂ | ನೀನು | ನೀ | ನುವ್ವು | ನೀ |
| ಸಃ | ಅವನು | ಅವನ್ | ವಾಡು | ಅವನ್ |

೬. ಸಂಖ್ಯಾವಾಚಕಗಳು :

| | | | | |
|---|---|---|---|---|
| ಏಕ | ಒಂದು | ಒನ್ರು | ಒಕಟಿ | ಒರು |
| ದ್ವಿ | ಎರಡು | ಇರಂಡು | ರೆಂಡು | ರಂಡು |
| ತ್ರಿ | ಮೂರು | ಮೂನ್ರು | ಮೂಡು | ಮೂನ್ರು |
| ಶತ | ನೂಱು | ನೂಱು | ನೂರು | ನೂಱು |

೭. ಧಾತುಗಳು :

| | | | | |
|---|---|---|---|---|
| ಗಮ್ | ಹೋಗು | ಪೋ | ಪೋ | ಪೋ |
| ಅದ್ | ತಿನ್ನು | ತಿನ್ | ತಿನು | ತಿನ್ನ |
| ಸ್ತು | ಹೊಗಳು | ಪುಗಳ್ | ಪೊಗಳು | |

ವ್ಯಾಕರಣ ವಿಷಯಕ್ಕೆ ಸಂಬಂಧಿಸಿದ ವ್ಯತ್ಯಾಸಗಳು ಹಿಂದೆ ದ್ರಾವಿಡ ಭಾಷೆಯ ವೈಶಿಷ್ಟ್ಯ ಸಂದರ್ಭದಲ್ಲಿ ಹೇಳಿರುವುವೇ ಇಲ್ಲೂ ಸಂಸ್ಕೃತ-ಕನ್ನಡಕ್ಕೂ ಅನ್ವಯಿಸುತ್ತವೆ. ಕೇಶಿರಾಜ ಹೇಳಿರುವ ಕನ್ನಡದ ಅಸಾಧಾರಣ ಲಕ್ಷಣಗಳ ಉಲ್ಲೇಖವೂ ಆ ಭಾಗದಲ್ಲಿಯೇ ಬಂದಿದೆ. ಉಳಿದಂತೆ ಕೆಲವು ಅಂಶಗಳನ್ನು ಇಲ್ಲಿ ಗಮನಿಸಬಹುದು.

ಸಂಸ್ಕೃತ ವರ್ಣಮಾಲೆಯ ಋ, ೡ, ಶ, ಷ ಗಳು ಕನ್ನಡದಲ್ಲಿಲ್ಲ. ಹಾಗೆಯೇ ಸಂಸ್ಕೃತದಲ್ಲಿ ಕನ್ನಡದ ಹ್ರಸ್ವ ಎ, ಒ ಮತ್ತು ಱ, ೞ, ಳ (ಕುಳ) ವರ್ಣಗಳೂ ಇಲ್ಲ. ದ್ರಾವಿಡ ಭಾಷೆಗಳ ವರ್ಣಮಾಲೆಯ ಸಂಖ್ಯೆ ಸಂಸ್ಕೃತಕ್ಕಿಂತ ಕಡಮೆ. ಆದರೆ ಸಂಸ್ಕೃತ ಪ್ರಭಾವದಿಂದ ಕೆಲವು ವರ್ಣಗಳು ಕನ್ನಡದಲ್ಲಿ ಇಂದಿಗೂ ರೂಢಿಯಲ್ಲಿವೆ, ವರ್ಣಮಾಲೆಯಲ್ಲೂ ಸೇರ್ಪಡೆಯಾಗಿವೆ.

ಸಂಸ್ಕೃತದಲ್ಲಿ ಕಾಣಬರದ ಕನ್ನಡ ಶಬ್ದಗಳ ಒಂದು ವಿಶೇಷವೆಂದರೆ ಕನ್ನಡದ ಹಲವು ನಾಮವಾಚಕಗಳು ಕ್ರಿಯಾವಾಚಕಗಳಾಗಿಯೂ ಪ್ರಯೋಗವಾಗುತ್ತವೆ. ಉದಾ : ಕರಿ, ನಡೆ, ಕಟ್ಟು, ಮೆಟ್ಟು, ತಪ್ಪು, ಬೆಳೆ, ಹಾಡು ಇತ್ಯಾದಿಗಳಿಗೆ ನಾಮ ಮತ್ತು ಕ್ರಿಯಾಪದ ಹೀಗೆ ಎರಡೆರಡು ಅರ್ಥಗಳಿವೆ.

ಕನ್ನಡದಲ್ಲಿ ಉಪಸರ್ಗಗಳಿಲ್ಲ. ಸಂಸ್ಕೃತದಲ್ಲಿ ಶಬ್ದಗಳ ಮೊದಲು ಪ್ರ–, ವಿ–, ಅಪ–, ಅನು– ಮುಂತಾದ ಉಪಸರ್ಗಗಳು ಬಳಕೆಯಾಗುತ್ತವೆ. ಆದರೆ ಸಂಸ್ಕೃತ ಶಬ್ದಗಳನ್ನು ಕನ್ನಡದಲ್ಲಿ ಬಳಸುವಾಗ ಉಪಸರ್ಗಸಮೇತ ಬಳಸುವ ರೂಢಿ ಇದೆ. ಸಂಸ್ಕೃತ ಉಪಸರ್ಗಗಳನ್ನು ಕನ್ನಡ ಶಬ್ದಗಳಿಗೆ ಸೇರಿಸುವುದಿಲ್ಲ. ಉದಾ : ಪ್ರಖ್ಯಾತ, ವಿಖ್ಯಾತ, ಅಪಮಾನ, ಅನುಸರಣ ಇತ್ಯಾದಿ.

ಕನ್ನಡ ಕ್ರಿಯಾಪದಗಳಲ್ಲಿ ಪ್ರಥಮ ಪುರುಷ (ಅನ್ಯಪುರುಷ) ದಲ್ಲಿ ಮಾತ್ರ ಲಿಂಗ ಸೂಚನೆ ಇರುತ್ತದೆ, ಉತ್ತಮ-ಮಧ್ಯಮ ಪುರುಷಗಳಲ್ಲಿರುವುದಿಲ್ಲ. ಗಚ್ಛತಿ ಎಂದಾಗ, ಎಲ್ಲ ಲಿಂಗಗಳಿಗೂ ಇದು ಬಳಕೆಯಾಗುತ್ತದೆ. ಅಂದರೆ ಸಂಸ್ಕೃತದಲ್ಲಿ ಕ್ರಿಯಾಪದಗಳಲ್ಲಿ ಲಿಂಗ ಸೂಚನೆ ಇರುವುದಿಲ್ಲ. ಕನ್ನಡದಲ್ಲಿ—

| | | |
|---|---|---|
| ಉ.ಪು. | ಹೋಗುತ್ತೇನೆ | ಹೋಗುತ್ತೇವೆ |
| ಮ.ಪು. | ಹೋಗುತ್ತೀಯೆ | ಹೋಗುತ್ತೀರಿ |
| ಅ.ಪು. | ಹೋಗುತ್ತಾನೆ<br>ಹೋಗುತ್ತಾಳೆ | ಹೋಗುತ್ತಾರೆ |
| | ಹೋಗುತ್ತದೆ | ಹೋಗುತ್ತವೆ. |

ಕನ್ನಡದಲ್ಲಿ ಸಂಬಂಧಾರ್ಥಕ ಸರ್ವನಾಮಗಳು ಪ್ರತ್ಯೇಕವಾಗಿಲ್ಲ. ಕನ್ನಡ ಭಾಷೆಯ ರಚನಾ ವಿನ್ಯಾಸಕ್ಕೆ ಅವುಗಳ ಅಗತ್ಯವಿಲ್ಲ. ಸಂಸ್ಕೃತದಲ್ಲಿ ಸಂಬಂಧಾರ್ಥಕ ಸರ್ವನಾಮಗಳನ್ನು ಪ್ರಯೋಗಿಸುವೆಡೆಯಲ್ಲಿ ಕನ್ನಡದಲ್ಲಿ ಪ್ರಶ್ನಾರ್ಥಕ ಸರ್ವನಾಮಗಳನ್ನು ಪ್ರಯೋಗಿಸಲಾಗುತ್ತದೆ. ಆದರೆ ಸಂಸ್ಕೃತದಲ್ಲಿ 'ಯತ್' ಸಂಬಂಧವಾಚಕವನ್ನು ಪ್ರಶ್ನಾರ್ಥಕದಲ್ಲಿ ಬಳಸುವುದಿಲ್ಲ, ಹಾಗೆಯೇ 'ಕಿಂ' ಪ್ರಶ್ನಾರ್ಥಕ ಸರ್ವನಾಮವನ್ನು ಸಂಬಂಧವಾಚಕವಾಗಿ ಬಳಸುವುದಿಲ್ಲ. ಯಾರು, ಯಾವನು ಪ್ರಶ್ನಾರ್ಥಕ ಸರ್ವನಾಮಗಳು, ಕನ್ನಡದಲ್ಲಿ. "ಯಾವನು ಮಾಡುವನೋ ಅವನು ಉಣ್ಣುವನು" ಎಂದು ಹೇಳುವುದು ಸಂಸ್ಕೃತದ ರೀತಿ, ಆ ಪ್ರಭಾವದಿಂದ ಕನ್ನಡದಲ್ಲೂ ರೂಪಿಸಿಕೊಂಡದ್ದು. "ಮಾಡಿದವನು ಉಣ್ಣುವನು" ಕನ್ನಡ ಭಾಷೆಯ ರೀತಿ, ಆಡುನುಡಿಯಲ್ಲಿ ಸಾಮಾನ್ಯ. ಯಾರು ಕೇಳುತ್ತಾರೊ ಅವರಿಗೆ ಕೊಡು– ಸಂಸ್ಕೃತ ರೀತಿ. ಕೇಳಿದವರಿಗೆ ಕೊಡು–ಕನ್ನಡ ರೀತಿ.

ಸಂಸ್ಕೃತದಲ್ಲಿ ವಿಶೇಷಣಗಳಿಗೆ ತರತಮ ಭಾವಗಳುಂಟು, ಕನ್ನಡದಲ್ಲಿಲ್ಲ. ಉದಾ : ಸುಂದರ, ಸುಂದರತರ, ಸುಂದರತಮ.

ದ್ರಾವಿಡ ಭಾಷೆಗಳ ವೈಶಿಷ್ಟ್ಯ ಸಂದರ್ಭದಲ್ಲಿ ಹೇಳಿದ ನಾಮಪದ, ಗುಣವಚನ, ಆಖ್ಯಾತ ಪ್ರತ್ಯಯ, ಕರ್ಮಣೀ ಪ್ರಯೋಗ ಇತ್ಯಾದಿ ಸಂಸ್ಕೃತ-ದ್ರಾವಿಡ ಭಾಷಾ ವ್ಯತ್ಯಾಸಗಳನ್ನೂ ಗಮನಿಸಿದಾಗ ಕನ್ನಡ ಸಂಸ್ಕೃತಕ್ಕಿಂತ ಭಿನ್ನ ಎಂಬುದು ಸ್ಪಷ್ಟವಾಗುತ್ತದೆ. ಆದ್ದರಿಂದ ಕನ್ನಡವನ್ನು ಸಂಸ್ಕೃತಜನ್ಯವೆನ್ನುವುದು ಅಜ್ಞಾನದ ಮಾತಾಗುತ್ತದೆ.

## ೭. ಕನ್ನಡ ಭಾಷೆಯ ಪ್ರಾಚೀನತೆ

**ಕನ್ನಡ ಮತ್ತು ಕರ್ನಾಟಕ**: ಇಂದು ಕನ್ನಡ ಮತ್ತು ಕರ್ನಾಟಕ ಶಬ್ದಗಳನ್ನು ನಿರ್ದಿಷ್ಟ ಅರ್ಥದಲ್ಲಿ ಬಳಸಲಾಗುತ್ತಿದೆ. ಹಿಂದೆ ಈ ಶಬ್ದಗಳು ಭಾಷೆ, ಜನಾಂಗ ಅಥವಾ ಜನಪದ ಮತ್ತು ಪ್ರದೇಶವನ್ನೂ ಸೂಚಿಸುತ್ತಿದ್ದುವು. ಕವಿರಾಜಮಾರ್ಗಕಾರನೇ ಕನ್ನಡಶಬ್ದವನ್ನು ಭಾಷೆ ಹಾಗೂ ಪ್ರದೇಶವಾಚಿಯಾಗಿ ಬಳಸಿದ್ದಾನೆ. 'ಪಲಗನ್ನಡ', ಎಂದಾಗ ಭಾಷೆಯನ್ನು ಕುರಿತುದಾಗಿದೆ. 'ಕಾವೇರಿಯಿಂದಮಾ ಗೋದಾವರಿವರಮಿರ್ದ ನಾಡದಾ ಕನ್ನಡದೊಳ್ ಭಾವಿಸಿದ ಜನಪದಂ', 'ಒಕ್ಕುಂದದ ನಡುವಣ ನಾಡೆ ಕನ್ನಡದ ತಿರುಳ್' ಎಂಬಲ್ಲಿ ಪ್ರದೇಶ ವಾಚಕವಾಗಿಯೂ ಕವಿರಾಜಮಾರ್ಗಕಾರ ಬಳಸಿದ್ದಾನೆ. ಆಂಡಯ್ಯ ಹೇಳುವ 'ಕನ್ನಡಮೆನಿಪ್ಪಾ ನಾಡು ಚೆಲ್ವಾಯಿತು' ಎಂಬಲ್ಲಿಯೂ ಪ್ರದೇಶವೇ ಸೂಚಿತ ವಾಗಿದೆ. ಅಲ್ಲದೆ 'ಕನ್ನಡ, ಕಮ್ಮೆ, ತೆಲುಗ, ತಿಗುಳ' ಎಂಬ ನಿಜಗುಣ ಶಿವಯೋಗಿಗಳ ಪ್ರಯೋಗದಿಂದ ಈ ಶಬ್ದ ಜನಾಂಗ ಅಥವಾ ಕುಲವನ್ನೂ ಸೂಚಿಸು ತ್ತಿತ್ತು ಎಂದು ಊಹಿಸಲಾಗಿದೆ. ಈಗ ಕನ್ನಡ, ಕನ್ನಡನಾಡು, ಕನ್ನಡಿಗ ಶಬ್ದಗಳು ಭಾಷೆ, ಪ್ರದೇಶ, ಕುಲ-ಜನ ಅರ್ಥದಲ್ಲಿ ಬಳಕೆಯಾಗುತ್ತಿವೆ. 'ಕನ್ನಡ ನಾಡು' ಶಬ್ದಕ್ಕೆ ಬದಲಾಗಿ 'ಕರ್ನಾಟಕ' ಮಾನ್ಯತೆ ಪಡೆದು ರೂಢಿಯಲ್ಲಿದೆ, ಅಧಿಕೃತವಾಗಿ ಪ್ರದೇಶದ ಹೆಸರೂ ಆಗಿದೆ.

ಮಹಾಭಾರತದಲ್ಲಿ 'ಕರ್ಣಾಟಾ:' ಶಬ್ದವಿದೆ. ಕ್ರಿ.ಶ. ಒಂದನೆಯ ಶತಮಾನದ್ದು ಎನ್ನಲಾದ ಮಾರ್ಕಂಡೇಯ ಪುರಾಣದಲ್ಲಿ ಉಕ್ತವಾಗಿರುವ ದೇಶ ಗಳಲ್ಲಿ 'ಕರ್ಣಾಟಕ'ವೂ ಒಂದಾಗಿದೆ. ಸೋಮದೇವನ ಕಥಾಸರಿತ್ಸಾಗರ (ಕ್ರಿ.ಶ. ೫ನೇ ಶ.) ದಲ್ಲಿ ಮತ್ತು ವರಾಹಮಿಹಿರನ ಬೃಹತ್‌ಸಂಹಿತೆಯಲ್ಲಿ (ಕ್ರಿ.ಶ. ೬ನೇ ಶ.) 'ಕರ್ಣಾಟ' ಎಂದಿದೆ. ಶೂದ್ರಕನ ಮೃಚ್ಛಕಟಿಕ ನಾಟಕದಲ್ಲಿ ಒಂದು ಪಾತ್ರವಾದ ಚಂದನಕ 'ಕರ್ಣಾಟ'ವನ್ನು ಹೇಳುತ್ತಾನೆ. ಗಂಗಭೂವಿಕ್ರಮನ ಬೆದಕೂರು ಶಾಸನದಲ್ಲಿ 'ಅಸ್ಯಸೀಮಾ: ಕನ್ನಾ೯ಟಕೇ....' ಎಂದಿದೆ. ಸಂಸ್ಕೃತದಲ್ಲಿ ಕರ್ಣಾಟ, ಕರ್ಣಾಟಕ ಎಂಬ ಎರಡು ರೂಪಗಳೂ ಇವೆ, ಸಮಾನಾರ್ಥಕವಾಗಿವೆ. 'ಕರ್ಣೇಷು ಅಟತಿ ಕರ್ಣಾಟ' ಎಂದು 'ಶಬ್ದರತ್ನಾವಲಿ' ಮತ್ತು 'ವಿಶ್ವಗುಣಾ-ದರ್ಶ'ಗಳಲ್ಲಿ ವಿವರಣೆ ಇದೆ. ಎಂದರೆ, ಕಿವಿಗಳಲ್ಲಿ ಬಿದ್ದು ಪ್ರಸಿದ್ಧವಾದದ್ದು. ಸ್ಕಂಧಪುರಾಣದಲ್ಲಿ ಕರ್ಣಾಟ ಎಂಬ ರಾಕ್ಷಸನು ವಾಸಿಸುತ್ತಿದ್ದುದರಿಂದ ಈ ಹೆಸರು ಬಂದಿತೆಂದು ಹೇಳಲಾಗಿದೆ. ಪ್ರಾಕೃತದಲ್ಲಿ 'ಕಣ್ಣಾಡ' ಎಂಬ ರೂಪ ಬಳಕೆ ಯಾಗಿದೆ.

'ಶಿಲಪ್ಪದಿಕಾರಮ್' (ಕ್ರಿ.ಶ. ೨ನೇ ಶತಮಾನ?) ನಲ್ಲಿ ಚೇರರಾಜ ನೀಲಗಿರಿ ಯಲ್ಲಿ 'ಕರುನಾಡರ್' ಆಡಿದ ಕುಣಿತ ನೋಡಿದನೆಂದಿದೆ. ಪಾಂಡ್ಯರಾಜನ

ವೇಳ್ವಿಕುಡಿ ತಾಮ್ರಶಾಸನದಲ್ಲಿ (ಕ್ರಿ.ಶ. ೭೭೦) 'ಕರುನಾಡಗನ್' ಶಬ್ದವಿದೆ. ಹೀಗೆ ಮೊದಲು ಪ್ರದೇಶವಾಚಕ, ಅನಂತರ ಭಾಷಾವಾಚಕ, ಜನಾಂಗವಾಚಕವಾಗಿ ಕರ್ಣಾಟಕ ಶಬ್ದ ರೂಢಿಯಲ್ಲಿತ್ತು. ಕ್ರಿಸ್ತಪೂರ್ವದಿಂದಲೂ ಕನ್ನಡಪ್ರದೇಶ ಅಸ್ತಿತ್ವದಲ್ಲಿತ್ತು. ಕನ್ನಡ ಭಾಷೆ ಕ್ರಿಸ್ತಶಕದ ಪ್ರಾರಂಭದಿಂದ ಇದ್ದಿರಬಹುದು.

'ಕರ್ಣಾಟ' ಶಬ್ದದಿಂದ 'ಕನ್ನಡ' ಬಂದಿರಲಾರದು. ತಮಿಳ್>ದ್ರಾವಿಡವಾದ ಹಾಗೆ ಕನ್ನಡವೇ ಕರ್ಣಾಟವಾಗಿರಬೇಕು. ಅಂದರೆ ಕನ್ನಡ ಶಬ್ದದ ಸಂಸ್ಕೃತೀಕರಣ ಕರ್ಣಾಟ ಎನ್ನಬಹುದು. ಕರುನಾಡು>ಕರ್ನಾಡು>ಕರ್ಣಾಟ (ರೇಫೆ ಇದ್ದಾಗ ನ-ಣ ಆಗುತ್ತದೆ, ಸಂಸ್ಕೃತದಲ್ಲಿ) ಎಂದು ಆಗಿರಬೇಕು. ಪುನ್ನಾಡು>ಪುನ್ನಾಟವಾಗಿದೆ. ತಮಿಳಿನಲ್ಲಿ ಕರುನಾಡು, ಕರುನಾಡರ್ ಶಬ್ದಗಳಿವೆ. ಕರ್+ನಾಡು+ಅಗಂ>ಕರ್ನಾಡಗಂ>ಕರ್ನಾಟಕ ಎಂದಾಗಿರಬಹುದೆಂದು ವಿದ್ವಾಂಸರು ಊಹಿಸಿದ್ದಾರೆ.

ಕರ್+ನಾಡುವಿನ ವ್ಯುತ್ಪತ್ತಿ ಬಗ್ಗೆ ಹಲವು ಅಭಿಪ್ರಾಯಗಳಿವೆ. ಆರ್. ನರಸಿಂಹಾಚಾರ್ಯರು ಕಮ್ಮಿತು+ನಾಡು=ಕನ್ನಾಡು ಎಂದು ವಿವರಿಸಿದ್ದಾರೆ. ಕಮ್ಮಿತು ಎಂದರೆ ಸುವಾಸನೆ, ಪರಿಮಳ. ಇದು ಅಭಿಮಾನದ ವಿವರಣೆ. (ತೆಲುಗು<ತೇನ್<ಜೇನ್‌ನಿಂದ ಬಂದಿದೆ ಎಂದು ಆಂಧ್ರರು ಹೇಳುತ್ತಾರೆ.) ಕನ್ನಾಡು>ಕನ್ನಡು>ಕನ್ನಡ ಆಯಿತು ಎಂದು ಅವರ ಅಭಿಪ್ರಾಯ. ಆದರೆ ಕನ್ನಾಡು ಶಬ್ದ ಎಲ್ಲಿಯೂ ಕಾಣಸಿಗುವುದಿಲ್ಲ, ಉಲ್ಲೇಖಗೊಂಡಿಲ್ಲ. ಶಂ. ಬಾ. ಜೋಷಿಯವರು 'ಕನ್ನಡದ ನೆಲೆ'ಯಲ್ಲಿ ಈ ಬಗ್ಗೆ ವಿಸ್ತಾರವಾಗಿ ಚರ್ಚಿಸಿದ್ದಾರೆ. 'ಕನ್ನಡ'ದ ಕನ್ (ಕಮ್) ಎಂಬುದು ಜನಾಂಗವಾಚಿ. ಮನುಸ್ಮೃತಿ, ಮತ್ಸ್ಯಪುರಾಣಗಳ 'ಕರ್ಣ'ರು 'ಕನ್' ಜನಾಂಗದವರು. ವೇದಗಳ 'ಕಳವ'ರು ಕನ್ನಡದ ಪೂರ್ವಜರು, ಮೂಲದ್ರಾವಿಡರು. ಕನ್ನ ಕಮ್ಮ ಎಂದಾಗಿ ಕನ್ನಡ, ಆಂಧ್ರ, ತಮಿಳರ ಮೊದಲಿಗರು ತಲೆದೋರಿದರು. ಕನ್ನರು ಮೂಲಕನ್ನಡಿಗರು. ಕನ್ ಜನಾಂಗದ ನಾಡು ಕನ್ನಡ. ಆದರೆ 'ಕನ್', 'ಕರ್ಣ' ಹೇಗಾಯಿತು? ರೇಫಕ್ಕೆ ಇವರು ಸಮಾಧಾನ ಹೇಳುವುದಿಲ್ಲ. ಎಂ. ಗೋವಿಂದ ಪೈ ಅವರು ಕರು+ನಾಡು ಎಂದರೆ ದೊಡ್ಡ ದೇಶ ಎಂದು ಹೇಳುತ್ತಾರೆ. ಹತ್ತಂಗಡಿ ನಾರಾಯಣರಾಯರು ಕರು+ನಾಡು ಎಂದರೆ ಎತ್ತರದ ಪ್ರದೇಶ ಎನ್ನುತ್ತಾರೆ. ಕರ್ನಾಟಕ ಸಮುದ್ರಮಟ್ಟಕ್ಕಿಂತ ಎತ್ತರದಲ್ಲಿದೆ; ಉಪ್ಪರಿಗೆ ಮನೆಗೆ ಕರುಮಾಡ ಎನ್ನುವಂತೆ ಕರು+ನಾಡುವಿನ 'ಕರು'ವಿನ ಅರ್ಥ ಸಹ ಎನ್ನುತ್ತಾರೆ. ಡಾ. ಗುಂಡರ್ಟ್ ಮತ್ತು ಡಾ. ಕಾಲ್ಡ್‌ವೆಲ್ ಅವರು ಕರ್+ನಾಡು ಎಂದರೆ ಕಪ್ಪುಮಣ್ಣಿನ ನಾಡು ಎಂದು ವ್ಯುತ್ಪತ್ತಿ ಹೇಳಿದ್ದಾರೆ. ಇಲ್ಲಿಯ ಭೂಮಿ ಹತ್ತಿಯ ಬೆಳೆಗೆ ಹೆಸರಾದದ್ದು. ಡಾ. ಎಂ. ಎಚ್. ಕೃಷ್ಣ ಅವರು ಕರುನಾಡು ಎಂದು ತಮಿಳರು ಕರೆದದ್ದು

ಕನ್ನಡಿಗರು ತಮ್ಮ ನಾಡನ್ನು ಏನೆಂದು ಕರೆದುಕೊಳ್ಳುತ್ತಿದ್ದರು ಎಂಬುದು ಇದರಿಂದ ಸ್ಪಷ್ಟವಾಗುವುದಿಲ್ಲ, ಎನ್ನುತ್ತಾರೆ. ಪ್ರ. ಗೋ. ಕುಲಕರಣಿಯವರು ಪರ್ವತ (ಮಲೆ) ಗಳ ಪ್ರದೇಶ ಮಲೆಯಾಳ, ಮೈದಾನ–ಬಯಲು–ಪ್ರದೇಶ ತಮಿಳು (ತಿಱವೀಡು > ತಿಱಮೀಡ > ತಿಱಮಿಳ > ತಮಿಳ ಎಂದು ರೂಪ ಸಾಧಿಸಿದ್ದಾರೆ) ನಾಡು, ನೀಲಗಿರಿಯಿಂದ ಗೋದಾವರಿವರೆಗಿನ ಸಾನು (ಕರು) ಪ್ರದೇಶವು ಕರುನಾಡು ಎಂದು ವಿವರಣೆ ನೀಡಿದ್ದಾರೆ.

ಕನ್ನಡ ಹಾಗೂ ಕರ್ನಾಟಕ ಕುರಿತ ಹಲವು ಅಭಿಪ್ರಾಯಗಳನ್ನು ಮೇಲೆ ಹೇಳಿದೆ. ಇಂದಿಗೂ ಆ ವಿಷಯ ಕುರಿತು ಒಮ್ಮತವಿಲ್ಲ.

**ಕನ್ನಡ ಭಾಷೆಯ ಪ್ರಾಚೀನತೆ** : ಕನ್ನಡ ಪ್ರದೇಶದ ಬಗ್ಗೆ ಮಹಾಭಾರತದ ಸಭಾಪರ್ವ ಹಾಗೂ ಭೀಷ್ಮಪರ್ವಗಳಲ್ಲಿ 'ಕರ್ಣಾಟಾ:' ಎಂದು ಉಲ್ಲೇಖಿಸಿರುವುದನ್ನು ಮೇಲೆ ಹೇಳಿದೆ. ಈಗಿರುವ ರೂಪದಲ್ಲಿ ಮಹಾಭಾರತ ಕ್ರಿ.ಪೂ. ೩ನೇ ಶತಮಾನದಿಂದ ಕ್ರಿ.ಶ. ಎರಡನೇ ಶತಮಾನದೊಳಗೆ ಪೂರ್ಣಗೊಂಡಿರಬೇಕೆಂದು ಊಹಿಸಿದ್ದಾರೆ. ಆದರೆ ಕನ್ನಡ ಭಾಷೆ ಮೂಲದ್ರಾವಿಡದಿಂದ ಎಂದು ಕವಲೊಡೆಯಿತು, ಸ್ವತಂತ್ರ ಅಸ್ತಿತ್ವ ಪಡೆಯಿತು ಎಂಬುದು ತಿಳಿಯುವುದಿಲ್ಲ. ಭಾಷೆ ಗ್ರಂಥಸ್ಥವಾದಾಗಲೇ ದಾಖಲೆಗಳ ಆಧಾರ ದೊರೆಯುವುದು. ಆದ್ದರಿಂದ ಕನ್ನಡದ ಪ್ರಾಚೀನತೆಯನ್ನು ಶಾಸನ ಹಾಗೂ ಶಾಸನೇತರ ಆಧಾರಗಳಿಂದ ತಿಳಿಯಬೇಕಿದೆ. ಕನ್ನಡದ ಪ್ರಾಥಮಿಕ ಅವಸ್ಥಾರೂಪವಂತೂ ತಿಳಿಯುವುದಿಲ್ಲ.

ಹರಪ್ಪಾ-ಮೊಹೆಂಜದಾರೊ ಸಂಸ್ಕೃತಿಗೆ ಸೇರಿದ ಮುದ್ರಿಕೆಗಳಲ್ಲಿ ಕನ್ನಡ ಜನರ ಉಲ್ಲೇಖವಿದೆಯೆಂದೂ, ಅವರು 'ಕಣನಿರ್' ಜನಾಂಗದವರೆಂದೂ ಡಾ. ಹೆರಾಸ್ ಹೇಳಿದ್ದಾರೆ. ಆದರೆ ಹರಪ್ಪಾ ಲಿಪಿಯನ್ನು ಓದಲು ಇನ್ನೂ ಯಾರಿಂದಲೂ ಸಾಧ್ಯವಾಗಿಲ್ಲ ಎಂದು ಮಾತ್ರ ಹೇಳಬಹುದು. ಹೆರಾಸ್ ಅವರದು ಸದ್ಯಕ್ಕೆ ಅತಿ ದೂರದ ಊಹೆ ಮಾತ್ರ.

ಛಾಂದೋಗ್ಯ ಉಪನಿಷತ್ತಿನಲ್ಲಿ ಚೆನ್ (ಚಂದ್ರ), ಮಟಚಿ (ಮಿಡಿತೆ) ಶಬ್ದಗಳು ಸಿಗುತ್ತವೆ. ಮಹಾಭಾರತ, ಪುರಾಣಗಳಲ್ಲೂ ಕನ್ನಡಿಗರ, ಕರ್ನಾಟಕದ ಪ್ರಸ್ತಾಪವಿರುವುದನ್ನು ನೋಡಿದ್ದೇವೆ. ಟಾಲೆಮಿ ಪ್ರಾಚೀನ ಭಾರತದ ಸ್ಥಳಗಳನ್ನು ಹೇಳಿದ್ದಾನೆ. ಅವುಗಳಲ್ಲಿ ಕೆಲವು ಕನ್ನಡ ಪ್ರದೇಶದ ಸ್ಥಳಗಳೆಂದು ಗೋವಿಂದ ಪೈ ಅವರು ಗುರುತಿಸಿದ್ದಾರೆ. Tabaso ಅಥಣಿ ತಾಲ್ಲೂಕಿನ ತವಸಿ, Inde ಬಿಜಾಪುರದ ಇಂಡಿ, Hippokoura ಹೂವಿನ ಹಿಪ್ಪರಿಗೆ, Modugoulla ರಾಯಚೂರಿನ ಮುದ್ಗಲ, Soubouttou ಸವದಿ. ಟಾಲೆಮಿಯ ಕಾಲ ಕ್ರಿ.ಶ. ೩ನೇ ಶತಮಾನ.

ಕನ್ನಡ ಸಾಹಿತ್ಯಕ್ಕೆ ಬೌದ್ಧಮೂಲ ಹುಡುಕುವ ಪ್ರಯತ್ನವೂ ನಡೆದಿದೆ. ಕ್ರಿ.ಶ. ೪–೫ನೇ ಶತಮಾನದಿಂದಲಾದರೂ ಕನ್ನಡದಲ್ಲಿ ಬೌದ್ಧಗ್ರಂಥಗಳ ರಚನೆ

ಯಾಗಿರಬೇಕು, ಅವು ನಾಶವಾಗಿರಬೇಕು ಎಂಬ ಅಭಿಪ್ರಾಯವಿದೆ. ಕರ್ನಾಟಕಕ್ಕೆ ಬೌದ್ಧರ ಸಂಪರ್ಕವಿತ್ತೆಂಬುದು ನಿಜ. ಕ್ರಿ.ಪೂ.ದ ಅಶೋಕನ ಶಾಸನಗಳು ಸಿಕ್ಕಿವೆ. ಬ್ರಹ್ಮಗಿರಿ, ಜಟಿಂಗ ರಾಮೇಶ್ವರ, ಎಮ್ಮೆ ತಮ್ಮನ ಗುಂಡು (ಗುಡ್ಡ) ಗಳಲ್ಲಿ ಅಶೋಕನ ಶಾಸನಗಳು ದೊರೆತಿವೆ. ಈ ಪ್ರದೇಶ ಸುವರ್ಣಗಿರಿ ಪ್ರಾಂತಕ್ಕೆ ಸೇರಿದ್ದು, ಇದರ ರಾಜಧಾನಿ 'ಇಸಿಲ' ಎಂಬುದಾಗಿತ್ತು. ಆದರೆ ಕನ್ನಡ ವ್ಯವಹಾರ ಭಾಷೆ ಯಾಗಿತ್ತೆ ಎಂಬುದು ತಿಳಿಯುವುದಿಲ್ಲ.

ಕುಂತಲ ಪರಮೇಶ್ವರ ಎಂಬ ಬಿರುದು ಹೊಂದಿದ್ದ ಶಾತವಾಹನ ವಂಶದ ಹಾಲರಾಜ ಸಂಕಲಿಸಿದ ಪ್ರಾಕೃತ 'ಗಾಥಾ ಸಪ್ತಶತಿ' ಕಾವ್ಯದಲ್ಲಿ ಹಲವು ಕನ್ನಡ ಶಬ್ದಗಳಿವೆ. ಪೊಟ್ಟ (ಹೊಟ್ಟೆ), ತುಪ್ಪ, ಪೆಟ್ಟು (ಹೊಡೆ), ತೀರ್ (ಸಮರ್ಥ ನಾಗು), ರೊಟ್ಟ, ಊರೋ (ಊರು) ಇತ್ಯಾದಿ. ಆತನ ಕಾಲ ಕ್ರಿ.ಪೂ. ಒಂದರಿಂದ ಕ್ರಿ.ಶ. ಒಂದನೆಯ ಶತಮಾನ ಎಂದು ಊಹೆ. ಪ್ರಾಕೃತ ಆಡಳಿತ, ವ್ಯವಹಾರ ಭಾಷೆಯಾದ ಆ ಕಾಲದಲ್ಲಿ ಕನ್ನಡ ಸಾಮಾನ್ಯ ಜನರ ಭಾಷೆಯಾಗಿದ್ದಿರಬೇಕು. ಸ್ಥಳೀಯ ಭಾಷೆಯ ಶಬ್ದಗಳು ಪ್ರಾಕೃತದಲ್ಲೂ ಬೆರೆತು ಗ್ರಂಥದಲ್ಲೂ ಕಾಣಿಸಿ ಕೊಂಡಿರಬೇಕೆಂದು ಗೋವಿಂದ ಪೈ ಅವರಂತೆ ಇತರ ವಿದ್ವಾಂಸರೂ ಒಪ್ಪುತ್ತಾರೆ. ಆದರೆ ಪೈ ಅವರು ಊಹಿಸಿರುವಂತೆ ಕನ್ನಡ ಗ್ರಂಥಸ್ಥವಾಗಿತ್ತು, ಶ್ರೀಮಂತ ವಾಗಿತ್ತು ಎಂದರೆ ಅಸಾಧ್ಯದ ಮಾತಾಗುತ್ತದೆ. ಏಕೆಂದರೆ ದಕ್ಷಿಣ ಭಾರತದಲ್ಲಿ ಸಿಗುವ ಕ್ರಿ.ಪೂ. ೩ನೇ ಶ.ದಿಂದ ಕ್ರಿ.ಶ. ೪ನೇ ಶ.ದವರೆಗಿನ ಶಾಸನಗಳೆಲ್ಲ ಪ್ರಾಕೃತ ದಲ್ಲಿವೆ, ಕೆಲವು ಸಂಸ್ಕೃತದಲ್ಲಿವೆ. ದ್ರಾವಿಡ ಭಾಷೆಗಳ ಶಾಸನಗಳೆಲ್ಲ ಕ್ರಿ.ಶ. ೫ನೇ ಶ. ದಿಂದ ಈಚಿನವಾಗಿವೆ. ಕನ್ನಡದ ಹಲ್ಮಿಡಿ ಶಾಸನ (ಕ್ರಿ.ಶ. ೪೫೦), ತಮಿಳಿನ ದಳವನೂರ ಗುಹಾಶಾಸನಗಳು (ಕ್ರಿ.ಶ. ೬೦೦–೬೩೦), ತೆಲುಗಿನ ಶಾಸನ (ಕ್ರಿ.ಶ. ೬೩೩) ಇವು ಈಗ ದೊರೆತಿರುವ ಅತ್ಯಂತ ಪ್ರಾಚೀನ ಶಾಸನಗಳು. ಹಲ್ಮಿಡಿ ಶಾಸನ ಗದ್ಯದಲ್ಲಿದೆ. ಸಂಸ್ಕೃತ ಪ್ರಭಾವವನ್ನು ಗುರುತಿಸಬಹುದು. ಆದ್ದರಿಂದ ಕ್ರಿ.ಪೂ. ದಲ್ಲೆ ಕನ್ನಡ ಗ್ರಂಥಸ್ಥವಾಗಿತ್ತು ಎಂಬುದನ್ನು ಒಪ್ಪಲು ಕಷ್ಟ. ತಮಿಳಿನಲ್ಲಿ ಪ್ರಾಚೀನ ಕಾಲದಲ್ಲಿ 'ಸಂಘಂ' ಸಾಹಿತ್ಯವಿದ್ದಿತೆಂಬುದಕ್ಕೆ ಐತಿಹಾಸಿಕ ಆಧಾರಗಳಿಲ್ಲ. ಕೇವಲ ಐತಿಹ್ಯವಿದೆ. ಕನ್ನಡದ ಬಗ್ಗೆ ಅಂತಹ ಐತಿಹ್ಯವೂ ಇದ್ದಂತಿಲ್ಲ.

ಈಜಿಪ್ಟಿನ ಆಕ್ಸಿರಿಂಕಸ್ ಎಂಬಲ್ಲಿ ದೊರೆತ ಪ್ಯಾಪಿರೈ (ಕಾಗದ) ಗಳಲ್ಲಿ ಒಂದು ಗ್ರೀಕ್ ಪ್ರಹಸನವೂ ಸೇರಿದೆ. ಇದರಲ್ಲಿ ಬರುವ ಸಂಭಾಷಣೆಯ ಕೆಲವು ಮಾತುಗಳು ಗ್ರೀಕ್ ಭಾಷೆಯವಲ್ಲ. ಅವು ಕನ್ನಡ ಶಬ್ದಗಳೆಂದು ಡಾ. ಶಾಮಾಶಾಸ್ತ್ರಿಗಳು ಊಹಿಸಿದರು. ಆರ್. ನರಸಿಂಹಾಚಾರ್ಯರೂ, ಗೋವಿಂದ ಪೈಗಳೂ ಅನಂತರ ಆ ಬಗ್ಗೆ ವಿವರವಾಗಿ ಚರ್ಚಿಸಿ ಪ್ರತಿಪಾದಿಸಿದ್ದಾರೆ. ಅವು ತಮಿಳೂ ಆಗಿರಬಹುದು, ಖಚಿತವಾಗಿ ಕನ್ನಡ ಎನ್ನುವಂತಿಲ್ಲ ಎಂದು ಎಸ್. ಶ್ರೀಕಂಠಯ್ಯ ಹೇಳುತ್ತಾರೆ.

ಇತ್ತೀಚೆಗೆ ಅದು ತುಳುವಾಗಿರಬಹುದೆಂಬ ವಾದವೂ ಎದ್ದಿದೆ. ಪ್ರಹಸನದ ಕಥೆ ಪಶ್ಚಿಮ ಕರಾವಳಿಗೆ ಸಂಬಂಧಿಸಿದುದಾಗಿದೆ. ಮಲ್ಪಿನಾಯಕ ಎಂಬ ಉಲ್ಲೇಖವೂ ಇದೆ. ಆ ಕಾಲಕ್ಕೆ ಗ್ರೀಕರೂ ರೋಮನರೂ ಕನ್ನಡ ನಾಡಿನೊಂದಿಗೆ ವ್ಯಾಪಾರ ಸಂಬಂಧ ಹೊಂದಿದ್ದರು. ಪ್ರಹಸನದ ಕಾಲ ಕ್ರಿ.ಶ. ೧೫೦. ಅಲ್ಲಿ ಇವೆ ಎನ್ನ ಲಾಗಿರುವ ಕನ್ನಡ ಶಬ್ದಗಳಲ್ಲಿ ಕೆಲವು ಹೀಗಿವೆ: krounou–ಕರೆವನೊ, lalle–ಲಲ್ಲೆ, kotakos–ಕೊಡಗೂಸು, minei–ಮೀನಾ, alemaka–ಅಲ್ಲೆಮ್ಮಕ್ಕ, ar minthi–ಆರ್‌ಮಿಂದ್ವೈ, skalmakata–ಕಳ್‌ಮಕತಾ, malpiniak–ಮಲ್ಪಿ-ನಾಯಕ್, zabede–ಹಬ್ಬದ ಎಡೆ (ಆ ಕಾಲಕ್ಕೆ ಪ> ಹ ಆಗಿತ್ತೆ ?), ಇತ್ಯಾದಿ.

ಕ್ರಿ.ಪೂ. ೩ನೇ ಶತಮಾನದ ಅಶೋಕನ ಬ್ರಾಹ್ಮೀ ಲಿಪಿಯ ಪ್ರಾಕೃತ ಶಾಸನ ದಲ್ಲಿ (ಬ್ರಹ್ಮಗಿರಿ) ‘ಇಸಿಲ’ ಎಂಬ ಪದವಿದೆ. ಇದು ಊರಿನ ಹೆಸರು, ಕರ್ನಾಟಕ ದಲ್ಲಿತ್ತು ಎಂದು ಡಿ. ಎಲ್. ನರಸಿಂಹಾಚಾರ್ಯರು ಹೇಳುತ್ತಾರೆ. ‘ಇಸಿಲ’ದ ಜ್ಞಾತಿಪದ ‘ಎಸಿಲ’ ಎಂದಿರಬೇಕು. ತಮಿಳಿನ ಎಯಿಲ್ ಅಥವಾ ಎಯಿಲಂ ಕನ್ನಡದಲ್ಲಿ ಎ>ಇ ಆಗಿ, ಯಿ>ಸಿ ಆಗಿ ಇಸಿಲ ಎಂದಾಗುತ್ತದೆ. ಎಯಿಲ್‌ಗೆ ತಮಿಳಿನಲ್ಲಿ ಕೋಟೆ ಎಂದರ್ಥ. ಆದ್ದರಿಂದ ಕೋಟೆಯುಳ್ಳ ಅಥವಾ ಕೋಟೆಯೊಳಗಿನ ಊರು ಎಂದರ್ಥ. ಹಾಗಿದ್ದಲ್ಲಿ ಈ ಶಬ್ದವೇ ದಾಖಲಿರುವ ಅತ್ಯಂತ ಪ್ರಾಚೀನ ಕನ್ನಡ ಶಬ್ದವಾಗುತ್ತದೆ.

ಮಾಧವಪುರ ಶಾಸನದಲ್ಲಿ (ಕ್ರಿ.ಪೂ. ೧ನೇ ಶ.) ‘ನಾಟಪತಿ’ ಎಂಬ ಶಬ್ದವಿದೆ. ಅದರಲ್ಲಿ ‘ನಾಟ’ವು ನಾಡು ಎಂಬುದರ ಪ್ರಾಚೀನ ರೂಪ. ಕ್ರಿ.ಶ. ೨ನೇ ಶ.ದ ಶಾತವಾಹನರ ಮಳವಳ್ಳಿ ಶಾಸನದಲ್ಲಿ ‘ಸಂಬಲೀವ ಊರ’ ಎಂಬ ಶಬ್ದವಿದೆ. ಅಲ್ಲಿಯ ‘ಊರ್’ ಖಚಿತವಾಗಿ ಕನ್ನಡ. ಕ್ರಿ.ಶ. ೨ರಿಂದ ೪ನೇ ಶ.ದವರೆಗಿನ ಶಾಸನಗಳಲ್ಲಿ ಕೋಟ್ಟ, ಆಪಿಟ್ಟ, ವೆಟ್ಟಕ್ಕಿ, ವೇಗೂರಂ, ಕುಂದಮುಚ್ಚುಂಡಿ ಶಬ್ದಗಳಿವೆ. ಇವು ಕನ್ನಡ ದ್ರಾವಿಡದಿಂದ ಕವಲೊಡೆದು ಪ್ರತ್ಯೇಕ ಭಾಷೆಯಾಗಿ ತ್ತೆಂಬುದನ್ನು ಸೂಚಿಸುತ್ತವೆ. ಕ್ರಿ.ಶ. ೩ನೇ ಶ.ದ ಬೌದ್ಧಗ್ರಂಥ ‘ಲಲಿತವಿಸ್ತರ’ ದಲ್ಲಿ ‘ಕನಾರಿ’ ಎಂಬ ಲಿಪಿಯ ಹೆಸರು ಉಕ್ತವಾಗಿದೆ. ಹಲ್ಮಿಡಿ ಶಾಸನಕ್ಕೆ ಎರಡು ಮೂರು ಶತಮಾನಗಳಷ್ಟಾದರೂ ಹಿಂದೆ ಕನ್ನಡ ಗ್ರಾಂಥಿಕ ಭಾಷೆಯಾಗಿದ್ದಿರಬೇಕು ಎಂದು ಊಹಿಸಬಹುದು. ಹಲ್ಮಿಡಿ ಶಾಸನದ ನಂತರದ ಶಾಸನಗಳಲ್ಲಿ ವೃತ್ತ, ತ್ರಿಪದಿ ಛಂದಸ್ಸುಗಳಲ್ಲಿರುವ ಪದ್ಯಗಳನ್ನು ನೋಡಬಹುದು. ಕ್ರಿ.ಶ. ೮೦೦ರ ಸೈಗೊಟ್ಟ ಶಿವಮಾರನ ಶಾಸನದ ‘ಗಜಾಷ್ಟಕ’ ಓವನಿಗೆ, ಒನಕೆವಾಡು ಆಗಿ ಜನಪ್ರಿಯ ವಾಯಿತಂತೆ. ಅಂದರೆ ಆ ಕಾಲಕ್ಕಾಗಲೇ ಜಾನಪದ ಕಾವ್ಯ ಪ್ರಕಾರಗಳು ಕನ್ನಡ ದಲ್ಲಿದ್ದುವೆಂದು ಹೇಳಬಹುದು. ಒಟ್ಟಿನಲ್ಲಿ, ಕನ್ನಡ ಭಾಷೆಯ ಅಸ್ತಿತ್ವ ಕ್ರಿ.ಪೂ.ಕ್ಕೆ ಹೋಗುತ್ತದೆ.

# ೮. ಕನ್ನಡ ಲಿಪಿಯ ವಿಕಾಸ

ಭಾಷೆಯೆಂದರೆ ವಾಸ್ತವವಾಗಿ ಆಡುನುಡಿ. ಬರಹ ಏನಿದ್ದರೂ ಆಡುವ ನುಡಿಯನ್ನು ಪರೋಕ್ಷದಲ್ಲಿ ಬೇರೆಯವರಿಗೆ ತಿಳಿಸಲು, ಸ್ಥಿರಗೊಳಿಸಲು, ಇರುವ ಸಾಧನ, ವಿಧಾನ. ಬರಹವೇ ಭಾಷೆಯೆಂಬ ಭಾವನೆ ತಪ್ಪು. "ಧ್ವನಿಗಳ ಸಮೂಹದಿಂದ ಕೂಡಿದ ಶಬ್ದಗಳು ನಿರ್ದಿಷ್ಟ ಅರ್ಥದ ಸಂಕೇತಗಳು. ಅಂದರೆ ಒಂದು ಅರ್ಥಕ್ಕೆ ಒಂದು ಧ್ವನಿಸಮೂಹ ಸಂಕೇತವಾಗುತ್ತದೆ. ಆ ಧ್ವನಿಸಂಕೇತಗಳಿಗೆ ಸಂಕೇತ ಲಿಪಿ. ಆದ್ದರಿಂದ ಲಿಪಿ ಏನಿದ್ದರೂ ಸಂಕೇತದ ಸಂಕೇತ. ಆಯಾ ಧ್ವನಿಗಳನ್ನು ಸೂಚಿಸುವ ಲಿಪಿ ಅಥವಾ ಅಕ್ಷರಗಳಿದ್ದರೆ ಯಾವ ಭಾಷೆಯನ್ನಾದರೂ ಯಾವ ಲಿಪಿಯಲ್ಲಾದರೂ ಬರೆಯಬಹುದು." ಎಂಬುದನ್ನು ಪ್ರಾರಂಭದಲ್ಲಿಯೆ ಹೇಳಿದೆ.

ಭಾಷೆ ಹುಟ್ಟಿದ ಸಾವಿರಾರು ವರ್ಷಗಳ ನಂತರ ಲಿಪಿ, ಬರಹ ಹುಟ್ಟಿತು. "ಭಾಷೆಯ ಉಪಯೋಗವನ್ನು ಕಂಡುಕೊಂಡು ಮನುಷ್ಯ ಮನುಷ್ಯನಾದನು: ಲೇಖನದ ಉಪಯೋಗವನ್ನು ಕಂಡುಕೊಂಡು ಮನುಷ್ಯ ನಾಗರಿಕನಾದನು" ಎಂದು ಡಾ. ಎಂ. ಚಿದಾನಂದಮೂರ್ತಿ ಹೇಳಿದ್ದಾರೆ. ಭಾಷೆ ಪ್ರಾಣಿಯಿಂದ ಮನುಷ್ಯನನ್ನು ಬೇರ್ಪಡಿಸಿದರೆ, ಬರಹ ಬರ್ಬರನಿಂದ ನಾಗರಿಕ ಮನುಷ್ಯನನ್ನು ಬೇರ್ಪಡಿಸುತ್ತದೆ. ನಾಗರಿಕತೆಯ ವಿಕಾಸಕ್ಕೆ ಬರಹವೂ ಕಾರಣವಾಗಿದೆ. ಇಂದಿಗೂ ಭಾಷೆಯಿದ್ದೂ ಲಿಪಿ, ಬರಹ ಇಲ್ಲದ ಸಹಸ್ರಾರು ಭಾಷೆಗಳಿವೆ. ಅವುಗಳನ್ನು ಕ್ಷುಲ್ಲಕ ಅಥವಾ ನಿರ್ಲಿಪಿ ಭಾಷೆಗಳು ಎನ್ನುತ್ತಾರೆ.

ಪ್ರಾರಂಭದಲ್ಲಿ ಬರಹ ಈಗಿನ ಸ್ವರೂಪದಲ್ಲಿರಲಿಲ್ಲ. 'ಚಿತ್ರಲಿಪಿ' ಬರಹದ ಮೊದಲನೆಯ ಘಟ್ಟ. ಒಂದು ವಸ್ತುವನ್ನು ಸೂಚಿಸಲು ಆ ವಸ್ತುವಿನ ಚಿತ್ರವನ್ನೇ ಬರೆದು ಸೂಚಿಸುವ ವಿಧಾನ. ಅಂತಹ ಚಿತ್ರಗಳ ಮಾಲೆ ಬರೆದು ಅಭಿಪ್ರಾಯ ಸೂಚಿಸುವುದು. ಎರಡನೆಯ ಘಟ್ಟದಲ್ಲಿ ಈ ಚಿತ್ರಲಿಪಿ ವಸ್ತುಗಳಿಗೆ ಮಾತ್ರ ಸೀಮಿತವಾಗದೆ ಭಾವಗಳನ್ನು ಸೂಚಿಸಲೂ ಬಳಕೆಯಾದುವು. ಆಗ ವಸ್ತುವಿಗೂ ಚಿತ್ರಕ್ಕೂ ಇದ್ದ ನೇರ ಸಂಬಂಧ ಕಳಚಿ ಲಿಪಿ ಚಿಹ್ನೆ, ಸಂಕೇತವಾಗುವುದರತ್ತ ಹೆಜ್ಜೆ ಇಟ್ಟಿತು. ಇದು 'ಭಾವಲಿಪಿ'. ಚಿತ್ರಲಿಪಿಯಿಂದ ಬರೆದದ್ದು ಚಿತ್ರಲೇಖನವಾದರೆ (Pictography), ಭಾವಲಿಪಿಯ ಬರಹ 'ಭಾವಲೇಖನ' (Ideographic writing) ಎನಿಸಿಕೊಂಡಿತು. ಮೂರನೆಯ ಘಟ್ಟದಲ್ಲಿ ಚಿಹ್ನೆಗಳಿಗೂ, ವಸ್ತುಗಳಿಗೂ, ಭಾವಗಳಿಗೂ ಇದ್ದ ನೇರಸಂಬಂಧ ತಪ್ಪಿ, ಚಿಹ್ನೆಗಳು ಒಂದೊಂದು 'ಪದ'ಗಳನ್ನು ಸೂಚಿಸತೊಡಗಿದುವು. ಮುಖದ ಚಿತ್ರವು ಆ ಭಾಷೆಯಲ್ಲಿ ಮುಖಕ್ಕೆ ಇದ್ದ ಪದದ ಸಂಕೇತವಾಯಿತು. ಈಗಲೂ ಚೀನಿ ಭಾಷೆಯಲ್ಲಿ (ಅಕ್ಷರಗಳಿಗಲ್ಲ) ಪದಗಳಿಗೆ ಹೀಗೆ ಒಂದೊಂದು ಲಿಪಿಸಂಕೇತವಿದೆ. ಚೀನಿ ಭಾಷೆಯಲ್ಲಿ ಇಂತಹ ಒಂಬತ್ತು ಸಾವಿರಕ್ಕೂ

ಮಿಕ್ಕು ಚಿಹ್ನೆಗಳಿವೆ. ಇದನ್ನು 'ಪದಲೇಖನ' ಎನ್ನುತ್ತಾರೆ. ನಾಲ್ಕನೆಯ ಘಟ್ಟ 'ಅಕ್ಷರ ಲೇಖನ'. ಇಲ್ಲಿ ಒಂದು ಚಿಹ್ನೆಯು ಸ್ವರ ಅಥವಾ ವ್ಯಂಜನ ಸಮೇತವಾದ ಸ್ವರವನ್ನು ಸೂಚಿಸುತ್ತದೆ. (ಸ್ವರಕ್ಕೇ ಬೇರೆ ವ್ಯಂಜನಕ್ಕೇ ಬೇರೆ ಚಿಹ್ನೆಯಿಲ್ಲ.) ಈಜಿಪ್ಟ್ ಭಾಷೆಯಲ್ಲಿ ವ್ಯಂಜನಗಳಿಗೆ ಚಿಹ್ನೆಗಳಿವೆ. ಸ್ವರವನ್ನು ಬರೆಯುತ್ತಿರಲಿಲ್ಲ. ಆದರೆ ಅವು ರೂಢಿಯಲ್ಲಿ ಸ್ವರವನ್ನೂ ಸೂಚಿಸುತ್ತಿದ್ದುವು. ಐದನೆಯ ಘಟ್ಟದಲ್ಲಿ ಎರಡು ವಿಧಾನಗಳಿವೆ. ವ್ಯಂಜನಗಳಿಗೆ ಮಾತ್ರ ಚಿಹ್ನೆ ಇದ್ದು, ಸ್ವರ ಬರೆಯದೆ ಬಿಡುವುದು ಒಂದು ವಿಧಾನ. ಇದು ಈಜಿಪ್ಷರ ಚಿಹ್ನೆಗಳನ್ನು ಸ್ವೀಕರಿಸಿ ಫೊನಿಷಿನಿಯನ್ನರು ಬಳಸಿಕೊಂಡ ವಿಧಾನ. ಗ್ರೀಕರು ಫೊನಿಷಿಯನ್ ಬರಹವನ್ನು ಬಳಸಿಕೊಂಡರೂ ಸಹ ವ್ಯಂಜನ ಮತ್ತು ಸ್ವರಗಳಿಗೆ ಪ್ರತ್ಯೇಕ ಚಿಹ್ನೆಗಳನ್ನು ಬರಹದಲ್ಲಿ ಬಳಸಿದರು. ಇದು 'ವರ್ಣಮಾಲಾತ್ಮಕ ಲೇಖನ' (Alphabetic writing) ಎನಿಸಿಕೊಂಡಿತು. ವರ್ಣಮಾಲೆಯ ಎಲ್ಲ ವರ್ಣಗಳಿಗೂ ಇಲ್ಲಿ ಚಿಹ್ನೆ ಇರುತ್ತವೆ.

ಹರಪ್ಪಾ ಮತ್ತು ಮೊಹೆಂಜದಾರೊಗಳಲ್ಲಿ ದೊರೆತಿರುವ ಮುದ್ರಿಕೆಗಳ ಲಿಪಿಯೇ ಭಾರತದಲ್ಲಿನ ಅತ್ಯಂತ ಪ್ರಾಚೀನವಾದ ಬರವಣಿಗೆಯ ದಾಖಲೆಗಳಾಗಿವೆ. ಸಿಂಧೂ ಸಂಸ್ಕೃತಿಯ ಈ ಲಿಪಿಯನ್ನು ಇಂದಿಗೂ ಓದಲು ಸಾಧ್ಯವಾಗಿಲ್ಲ. ನೋಡಿದರೆ ಇದು ಚಿತ್ರಲಿಪಿಯನ್ನು ಹೋಲುತ್ತದೆ. ಸುಮಾರು ಮುನ್ನೂರು ಚಿಹ್ನೆಗಳಲ್ಲಿ ಹಲವು ಬಿಟ್ಟ, ಮರ, ಮೀನು, ಮನುಷ್ಯ, ಪಾತ್ರೆ ಮುಂತಾದವುಗಳ ಚಿತ್ರಗಳಂತೆ ಕಾಣುತ್ತವೆ. ವಿದ್ವಾಂಸರು ಈ ಲಿಪಿ ಚಿತ್ರಲಿಪಿಗಿಂತ ಪದಲೇಖನ ಘಟ್ಟದ್ದು, ಇಲ್ಲವೇ ಅದಕ್ಕೂ ಮುಂದುವರಿದ ಅಕ್ಷರಲೇಖನ ಘಟ್ಟದ್ದಿರಬಹುದು ಎನ್ನುತ್ತಾರೆ. ಲಿಪಿರಹಸ್ಯ ಬಿಡಿಸಿದ ಹೊರತು ಯಾವುದೇ ನಿರ್ಣಯಾತ್ಮಕ ಅಭಿಪ್ರಾಯ ಸಾಧ್ಯವಿಲ್ಲ. ಕ್ರಿ.ಪೂ. ೩೦೦೦ ವರ್ಷಗಳ ಹರಪ್ಪಾ ಲಿಪಿಯನ್ನು ಹೊರತುಪಡಿಸಿದರೆ, ಭಾರತದಲ್ಲಿ* ಕ್ರಿ.ಪೂ. ಮೂರನೇ ಶತಮಾನದ ಹೆಚ್ಚು ಮಾಹಿತಿ ಒದಗಿಸುವ ಅಶೋಕನ ಶಾಸನಗಳ ಬ್ರಾಹ್ಮೀ ಲಿಪಿಯೇ ಪ್ರಾಚೀನವಾದದ್ದು. ಅದರ ಜೊತೆಗೇ ಬಲದಿಂದ ಎಡಕ್ಕೆ (ಉರ್ದುವಿನಂತೆ) ಬರೆಯುವ ಖರೋಷ್ಠೀ ಲಿಪಿಯೂ ಪ್ರಚಲಿತವಾಗಿತ್ತು–ಭಾರತದ ವಾಯುವ್ಯ ಪ್ರದೇಶದಲ್ಲಿ.‡ ಭಾರತದ ಉಳಿದೆಡೆ ಬ್ರಾಹ್ಮೀ ಪ್ರಚಾರದಲ್ಲಿತ್ತು.

* ಏರಾಣ್ ಎಂಬಲ್ಲಿ ದೊರೆತ ಕ್ರಿ.ಪೂ. ನಾಲ್ಕನೆಯ ಶತಮಾನದ ಒಂದು ನಾಣ್ಯದಮೇಲಿರುವ 'ರಾಞೋ ಧಮಪಾಲಸ' ಎಂಬ ಬರವಣಿಗೆಯೇ ಪ್ರಾಚೀನವಾದದ್ದು. ಅಜ್ಮೀರ್ ಜಿಲ್ಲೆಯ ಬಾಡ್ಲಿ ಎಂಬಲ್ಲಿ ದೊರೆತ ಶಾಸನ ಇದಕ್ಕೂ ಹಿಂದಿನದೆಂದು ಹೇಳಲಾಗಿದೆ; ಕಾಲ ಕ್ರಿ.ಪೂ. ೪೮೩. ಆಂಧ್ರದ ಭಟ್ಟಿಪ್ರೋಲುವಿನಲ್ಲಿ ದೊರೆತ ಸಂಪುಟದ ಶಾಸನ, ತಕ್ಷಶಿಲೆಯಲ್ಲಿ ದೊರೆತ ನಾಣ್ಯದಮೇಲಿನ ಬರವಣಿಗೆಗಳು ಅಶೋಕನ ಕಾಲಕ್ಕಿಂತ ಹಿಂದಿನವೆಂದು ಹೇಳಲಾಗಿದೆ.

‡ ಕತ್ತೆಯ ಚರ್ಮದಮೇಲೆ ಬರೆಯುತ್ತಿದ್ದುದರಿಂದ 'ಖರ+ಓಷ್ಠ' (ಕತ್ತೆಯ ತುಟಿ) ಖರೋಷ್ಠಿ ಎಂಬ ಹೆಸರು ಬಂದಿತೆಂದೂ, ಖರೋಷ್ಠ ಎನ್ನುವವನು ಈ ಲಿಪಿಯನ್ನು ಬಳಕೆಗೆ ತಂದದ್ದರಿಂದ ಈ ಹೆಸರು ಬಂದಿತೆಂದೂ ಭಿನ್ನ ಅಭಿಪ್ರಾಯಗಳಿವೆ. ಅರಾಮೇಯಿಕ್ ಭಾಷೆಯ

ಅಶೋಕನ ಶಾಸನಗಳು ಎರಡೂ ಲಿಪಿಯಲ್ಲಿವೆ. ಕರ್ನಾಟಕದ ಬ್ರಹ್ಮಗಿರಿ ಶಾಸನದ ಪಾಠ ಬ್ರಾಹ್ಮೀಯಲ್ಲಿದೆ, ಲಿಪಿಕಾರನ ಹೆಸರು 'ಚಪಡ' ಎಂಬುದು ಮಾತ್ರ ಖರೋಷ್ಠೀಯಲ್ಲಿದೆ. ಈ ಲಿಪಿ ಅರಮೇಯಿಕ್ ಲಿಪಿಯಿಂದ ಬಂದಿತೆಂದು ವಿದ್ವಾಂಸರು ಒಮ್ಮತದಿಂದ ಹೇಳಿದ್ದಾರೆ.

ಭಾರತೀಯ ಲಿಪಿಗಳೆಲ್ಲವೂ ಅಶೋಕನ ಕಾಲದ ಬ್ರಾಹ್ಮೀ ಲಿಪಿಯ ರೂಪಾಂತರಗಳೇ ಆಗಿವೆ. ಪ್ರಾಚೀನ ಭಾರತೀಯ ಪಂಡಿತರು ಬ್ರಹ್ಮನೇ ಲಿಪಿಗಳನ್ನು ಸೃಷ್ಟಿಸಿದನೆಂದು ನಂಬಿದ್ದರು. ನಾರದಸ್ಮೃತಿ, ಯಾಜ್ಞವಲ್ಕ್ಯಸ್ಮೃತಿಗಳಲ್ಲಿ ಹಾಗೆ ಹೇಳಿದೆ. ವಾತ್ಸಾಯನನ ಕಾಮಸೂತ್ರದಲ್ಲಿ ಪುಸ್ತಕವಾಚನ ಉಲ್ಲೇಖವಿದೆ. ವ್ಯಾಸರು ಹೇಳಿದ್ದನ್ನು ಗಣಪತಿ ಬರೆದುಕೊಂಡನೆಂಬ ಕಥೆಯೂ ರೂಢಿಯಲ್ಲಿದೆ. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿಯೂ ಲಿಪಿ, ಲೇಖವಾಚನ, ಲೇಖಕ ಶಬ್ದಗಳಿವೆ. ಪುರಾಣಗಳಲ್ಲಿ ಮಶಿ, ಮಶಿಕೂಪಗಳ ಉಲ್ಲೇಖವಿದೆ. ಕ್ರಿ. ಪೂ. ೩೨೬ ರಲ್ಲಿದ್ದ ಅಲೆಗ್ಜಾಂಡರನ ಸೇನಾಪತಿ ನಿಯಾರ್ಕಸ್ ಲೇಖನವಸ್ತುಗಳನ್ನು ಹೆಸರಿಸಿದ್ದಾನೆ. ಈ ಆಧಾರಗಳಿಂದ ಭಾರತೀಯರಿಗೆ ಕ್ರಿಸ್ತಪೂರ್ವದಲ್ಲೆ ಲಿಪಿ ತಿಳಿದಿತ್ತೆಬುಂದು ಸ್ಪಷ್ಟ. ಗಣಿಕೆ, ಲೋಹಕಂಠ, ಟಂಕಗಳಿಂದ ಭೂರ್ಜಪತ್ರ, ತಾಳೆಯೋಲೆ, ತಾಮ್ರ ಮುಂತಾದುವುಗಳ ಮೇಲೆ ಬರೆಯುತ್ತಿದ್ದರು. ಗರಿಯಿಂದ ಬರೆಯುವುದು ಮಹಮ್ಮದೀಯರು ಬಂದನಂತರ ಪ್ರಾರಂಭವಾಯಿತು. ಸುಟ್ಟಬಾದಾಮಿಯ ಕರಕಲಿನಿಂದ ಮಸಿ ತಯಾರಿಸುತ್ತಿದ್ದರು.

ಭಾರತದಲ್ಲಿ ಲಿಪಿ ಭಾರತೀಯರಿಂದಲೇ ಸೃಷ್ಟಿಯಾಯಿತೆಂಬ ಅಭಿಪ್ರಾಯವಿದೆ. ಕನ್ನಿಂಗ್‌ಹ್ಯಾಂ ಈ ವಾದದ ಪ್ರತಿಪಾದಕರು. ಆದರೆ ವೀಬರ್, ಮ್ಯಾಕ್ಸ್‌ಮುಲ್ಲರ್ ಅವರು ಫೊನಿಷಿಯನ್ನರಿಂದ ಲಿಪಿ ಭಾರತಕ್ಕೆ ಬಂದಿತೆನ್ನುತ್ತಾರೆ. ಏಕೆಂದರೆ ಭಾರತದೊಂದಿಗೆ ವ್ಯಾಪಾರವ್ಯವಹಾರ ಸಂಪರ್ಕ ಅವರಿಗಿತ್ತು. ಕೆಲವರು ಗ್ರೀಕರ ದಂಡಯಾತ್ರೆಯನಂತರ ಲಿಪಿ ಭಾರತದಲ್ಲಿ ರೂಢಿಗೆ ಬಂದಿತು ಎಂದೂ ಹೇಳುತ್ತಾರೆ. ಆದರೆ ಹರಪ್ಪಾ-ಮೊಹೆಂಜದಾರೊ ಮುದ್ರಿಕೆಗಳು ಕ್ರಿ. ಪೂ. ಸಾವಿರಾರು ವರ್ಷ

---

'ಖರೋಠ' ಸಂಸ್ಕೃತದಲ್ಲಿ ಖರೋಷ್ಠ ಎಂದಾಯಿತು ಎಂಬ ಅಭಿಪ್ರಾಯವೂ ಇದೆ. ಆದರೆ ದಾಸಗುಪ್ತ ಎಂಬ ವಿದ್ವಾಂಸರು ಇರಾನಿಯನ್ ಭಾಷೆಯ 'ಖರಪೋಸ್ತ' ಶಬ್ದ (ಕತ್ತೆಯ ಚರ್ಮ) ಇದಕ್ಕೆ ಮೂಲವಿರಬೇಕೆಂದು ಹೇಳಿದ್ದಾರೆ. ಈ ಅಭಿಪ್ರಾಯವನ್ನು ಫ್ರಿಜ಼್‌ಲುಸ್ಕಿ ಎಂಬಾತ ಮೊದಲು ಪ್ರತಿಪಾದಿಸಿದರು. ಪೊಸ್ತದಿಂದಲೇ ಪುಸ್ತಕ ಶಬ್ದವೂ ಬಂದಿರಬೇಕು ಎನ್ನುತ್ತಾರೆ. ಅತಿ ಪ್ರಾಚೀನ ಕಾಲದಲ್ಲಿ ಒಂಟೆ ಅಥವಾ ಕತ್ತೆಯ ಚರ್ಮದ ಮೇಲೆ ಬರೆಯುತ್ತಿದ್ದರು. ಇಂಗ್ಲಿಷಿನ ಪಾರ್ಚ್‌ಮೆಂಟ್ ಎಂಬುದರ ಮೂಲ ಸಹ ಇದೇ ಆಗಿದೆ. ಖರೋಷ್ಠೀ ಲಿಪಿ ಅರಾಮೇಯಿಕ್ ಲಿಪಿಯಿಂದಲೇ ಹುಟ್ಟಿತೆಂಬ ಬಗ್ಗೆ ಎಲ್ಲಾ ವಿದ್ವಾಂಸರ ಒಪ್ಪಿಗೆ ಇದೆ. ಭಾರತದ ವಾಯವ್ಯಗಡಿ ಪ್ರದೇಶದಲ್ಲಿ ಹೆಚ್ಚು ಪ್ರಚಲಿತವಾಗಿತ್ತು. ನೋಡಿ: 'ಕನ್ನಡ ಲಿಪಿಯ ಉಗಮ ಮತ್ತು ವಿಕಾಸ'— ಎ. ವಿ. ನರಸಿಂಹಮೂರ್ತಿ.

ಹಿಂದೆ ಲಿಪಿ ಭಾರತದಲ್ಲಿದ್ದುದಕ್ಕೆ ಸಾಕ್ಷಿಯಾಗಿವೆ. ಲ್ಯಾಂಗ್‌ಡನ್ ಆ ಸಿಂಧೂ ಸಂಸ್ಕೃತಿಯ ಲಿಪಿಯಿಂದಲೇ ಬ್ರಾಹ್ಮೀ ಲಿಪಿ ಜನಿಸಿತೆನ್ನುತ್ತಾರೆ.

ಅಶೋಕನ ಬ್ರಾಹ್ಮೀ ಲಿಪಿಯಿಂದ 'ಗುಹಾಲಿಪಿ', ಅದರಿಂದ 'ದೇವನಾಗರಿ', 'ನಾಗರಿ' ಲಿಪಿಗಳು ಬಂದುವು. ದಕ್ಷಿಣ ಭಾರತದ ಲಿಪಿಯಾಗಿದ್ದ 'ವಟ್ಟೆಲುತ್ತು' ಸಹ ಗುಹಾಲಿಪಿಯ ರೂಪಾಂತರವಾಗಿದೆ. ವಟ್ಟೆಲುತ್ತುವಿನಿಂದ ತಮಿಳು ಲಿಪಿ ಬಂದಿತು ಎನ್ನಲಾಗಿದೆ. ಕ್ರಿ.ಶ. ಆನೇ ಶ.ದ ಪಾಂಡ್ಯರಾಜ ಜಟಿಲವರ್ಮನ ಕಾಲದಲ್ಲಿ ಅದು ಬಳಕೆಯಲ್ಲಿತ್ತು, ಕಾಲಕ್ರಮೇಣ ತಮಿಳು ಲಿಪಿ ರೂಢಿಗೆ ಬಂದಿತು. ವ್ಯಂಜನಗಳನ್ನು ಸ್ವರರಹಿತವಾಗಿ ಒಂದರ ಪಕ್ಕ ಒಂದು ಬರೆಯುವುದು ವಟ್ಟೆಲುತ್ತುವಿನ ವಿಶೇಷ. ತಮಿಳು–ಮಲೆಯಾಳಂ, ಕನ್ನಡ–ತೆಲುಗು ಲಿಪಿಗಳಿಗೆ ಸಾಮ್ಯವಿದೆ. ಕನ್ನಡ ಮತ್ತು ತೆಲುಗು ಲಿಪಿಗಳು ಸಂಸ್ಕೃತ ವರ್ಣಮಾಲೆಯನ್ನು ಅಳವಡಿಸಿಕೊಂಡಿರುವುದರಿಂದ ಧ್ವನಿಗಳನ್ನು ಖಚಿತವಾಗಿ ಪ್ರತಿನಿಧಿಸುತ್ತವೆ. ಆದರೆ ತಮಿಳು ಲಿಪಿ ತಮಿಳು ಭಾಷೆಯ ಉಚ್ಚಾರಣೆಯನ್ನು ಪರಿಪೂರ್ಣವಾಗಿ ವ್ಯಕ್ತಪಡಿಸುವುದಿಲ್ಲ. ಕ್ರಿ.ಶ. ೧೩೦೦ ರವರೆಗಿನ ಕನ್ನಡ–ತೆಲುಗು ಲಿಪಿಗಳು, ಕದಂಬ, ಬಾದಾಮಿ ಚಾಲುಕ್ಯ, ಪೂರ್ವ ಚಾಲುಕ್ಯರ ಕಾಲದವರೆಗೆ, ಒಂದೇ ಬಗೆಯಾಗಿದ್ದವು, ಸ್ಪಷ್ಟಗೋಚರ ವ್ಯತ್ಯಾಸವಿರಲಿಲ್ಲ. ಅನಂತರ ವ್ಯತ್ಯಯ ಪ್ರಾರಂಭವಾಯಿತು. ವಿಜಯನಗರ ಕಾಲಕ್ಕೆ ವ್ಯತ್ಯಾಸ ಹೆಚ್ಚುತ್ತ, ಮುದ್ರಣ ಪ್ರಾರಂಭವಾದ ನಂತರ ವ್ಯತ್ಯಾಸ ಖಚಿತವಾಯಿತು. ಸಂಸ್ಕೃತವನ್ನು ಬರೆಯಲು ದಕ್ಷಿಣ ಭಾರತದಲ್ಲಿ ಬ್ರಾಹ್ಮೀಜನ್ಯ 'ಗ್ರಂಥಲಿಪಿ'ಯನ್ನು ಬಳಸಲಾಗುತ್ತಿತ್ತು. ತಮಿಳು–ಮಲೆಯಾಳಂ ಈ ಲಿಪಿಯನ್ನು ಹೋಲುತ್ತವೆ. ಇಂದು ಕನ್ನಡ–ತಮಿಳು ಲಿಪಿಗಳಿಗೆ ಸಾದೃಶ್ಯ ಕಾಣಬರದಿದ್ದರೂ ಮೂಲ ಒಂದೇ ಆಗಿದೆ. ಆ ಕಾಲದಲ್ಲಿ ಸಂಸ್ಕೃತ, ಪ್ರಾಕೃತಗಳಲ್ಲಿ ಬಳಕೆಯಲ್ಲಿದ್ದ ಲಿಪಿಗಳನ್ನು ತಮ್ಮ ತಮ್ಮ ಭಾಷೆಗೆ ತಕ್ಕಂತೆ ವ್ಯತ್ಯಯ ಮಾಡಿಕೊಂಡು ಅಳವಡಿಸಿಕೊಂಡರು. ಬ್ರಾಹ್ಮೀಯಿಂದ ಇಂದಿನ ಕನ್ನಡದವರೆಗಿನ ಲಿಪಿವಿಕಾಸವನ್ನೂ, ಇನ್ನಿತರ ಭಾಷೆಗಳಲ್ಲಾದ ವ್ಯತ್ಯಾಸಗಳನ್ನೂ ಕೆಲವು ಉದಾಹರಣೆಗಳಿಂದ ಸ್ಪಷ್ಟಪಡಿಸಬಹುದು.

ಅಶೋಕನ ಬ್ರಾಹ್ಮೀಯಲ್ಲಿ ಕ ಹೀಗಿದೆ: †. ಅದರಿಂದ ಗುಹಾಲಿಪಿಯ ३ ವೂ, ಅದರಿಂದ ವಟ್ಟೆಲುತ್ತು ᴣ , ತಮಿಳಿನ க, ದೇವನಾಗರಿ क, ಗ್ರಂಥ ತಮಿಳು ಹ , ಕನ್ನಡ-ತೆಲುಗು ಸ > ಕ, క ಗಳು ರೂಪುಗೊಂಡುವು. ಇತರ ಕೆಲವು ವರ್ಣಗಳನ್ನೂ ಗಮನಿಸಬಹುದು :

| | ಅಶೋಕ ಬ್ರಾಹ್ಮೀ | ಗುಹಾ | ದೇವನಾಗರಿ | ಗ್ರಂಥ | ವಟ್ಟೆಳುತ್ತು | ತಮಿಳು | ಕನ್ನಡ-ತೆಲುಗು |
|---|---|---|---|---|---|---|---|
| ಚ | 𑀘 | 𑀘 | च | | ச | ச | ಚ ವ ಬ ಚ |
| ಪ | 𑀧 | | प | ப | ப | ப | ಐ ಏ ಪ ಪ ಪ |
| ಯ | 𑀬 | | य | ய | ய | ய | ಮ ಮ ಯ ಯ |
| ಅ | 𑀅 | | अ | அ | அ | அ | ಅ ಅ ಅ ಅ |
| ಇ | 𑀇 | | ई | இ | | இ | ಇ ಇ ಇ |
| ಉ | 𑀉 | | उ | | | உ | ಉ ಉ ಉ ಉ |

**ಕಾಗುಣಿತ :**

ಆ ಾ : ಅಶೋಕ F (ಕಾ) ℒ (ಯಾ), ಗುಹಾ ℱ ಕನ್ನಡ, ತೆಲುಗಿನಲ್ಲೂ ಈ ಬಲಗಡೆ ಬಾಗುವಿಕೆ ಉಂಟು. ಆದರೆ ದೇವನಾಗರಿ, ತಮಿಳು, ಗ್ರಂಥ ಲಿಪಿಗಳಲ್ಲಿ ಇದು ಪ್ರತ್ಯೇಕ ಭಾಗವಾಗಿ ಪರಿಣಮಿಸಿತು: ಕಾ ಡಾ (ಕಾ, ಡಾ).

ಏ ೇ : 7 (ಕೇ) ೨ (ಯೇ), ಗುಹಾಲಿಪಿಯಲ್ಲಿ ℱ. ಇದೇ ರೀತಿ ವಟ್ಟೆಲುತ್ತುವಿನಲ್ಲೂ ಇದೆ. ಗ್ರಂಥ ಮತ್ತು ತಮಿಳು ಲಿಪಿಗಳಲ್ಲಿ ಈ ಎಡ ಬಾಗುವಿಕೆಯ ಭಾಗ ಪ್ರತ್ಯೇಕವಾಯಿತು, ಅಕ್ಷರದ ಎಡಗಡೆಗೆ ಪ್ರತ್ಯೇಕ ಭಾಗವಾಗಿ ಉಳಿಯಿತು : ಕೆ, ದೇವನಾಗರಿಯಲ್ಲಿ ಮೇಲೆ ನಿಂತಿತು: के, ಕನ್ನಡ ತೆಲುಗುಗಳಲ್ಲಿ ಬಲಗಡೆಗೆ ತಿರುಗಿ ಉಳಿಯಿತು : ಕೆ ಕೆ. ವಿಜಯನಗರಕಾಲದ ವರೆಗೆ ಎ ಏ ಕಾಗುಣಿತಗಳಿಗೆ ವ್ಯತ್ಯಾಸವಿರಲಿಲ್ಲ, ಸಂದರ್ಭೋಚಿತವಾಗಿ ಓದಿಕೊಳ್ಳಬೇಕಾಗುತ್ತಿತ್ತು.

ಐ ೈ : ಬ್ರಾಹ್ಮೀಯಲ್ಲಿ 'ಕ' ಕ್ಕೆ ಎರಡು ಅಡ್ಡಗೆರೆಗಳನ್ನು ಹಾಕಲಾಯಿತು ಐತ್ವ ತೋರಿಸಲು : 7. ಗ್ರಂಥ ಮತ್ತು ಹಳೆಯ ತಮಿಳಿನಲ್ಲಿ ಪ್ರತ್ಯೇಕಗೊಂಡು ಕೈ ಎಂದಾಯಿತು. ವಟ್ಟೆಲುತ್ತು ಮತ್ತು ತಮಿಳಿನಲ್ಲಿ ಎರಡು ಗೆರೆಗಳೂ ಕೂಡಿ ಒಂದೇ ಆದುವು. ಅದನ್ನೂ ತಮಿಳಿನಲ್ಲಿ ಎಡಪಕ್ಕದಲ್ಲಿ ಇರಿಸಲಾಯಿತು : ಕೈ, ವಟ್ಟೆಲುತ್ತುವಿನಲ್ಲಿ ಎಡಪಕ್ಕದಲ್ಲಿ ಕೂಡಿತು : ℱ. ಆದರೆ ಕನ್ನಡ, ತೆಲುಗುಗಳಲ್ಲಿ ಬಾಗಿದ ಗೆರೆಯ ಕೆಳ ಅರ್ಧಭಾಗವನ್ನು ಬೇರೆ ಮಾಡಿ, ಅಕ್ಷರದ ಕೆಳಗೆ ಇರಿಸಲಾಯಿತು : ಕೈ ಕೈ.

ಒ ೊ : ಅಶೋಕ ಲಿಪಿಯಲ್ಲಿ 'ಏ' ಗುಣಿತಕ್ಕೆ 'ಆ' ಗುಣಿತವನ್ನು ಸೇರಿಸುವುದರಿಂದ ಇದನ್ನು ಸಾಧಿಸಲಾಯಿತು : ≠ ϰ . ಹಿಂದೆ ವಿವರಿಸಿದಂತೆ ಚಿಹ್ನೆಗಳು ಬಾಗಿ, ಅನಂತರ ಗ್ರಂಥ ಮತ್ತು ತಮಿಳಿನಲ್ಲಿ ಪ್ರತ್ಯೇಕವಾದುವು. ಕೊ ದೇವನಾಗರಿಯಲ್ಲಿ को ಆಯಿತು. ವಟ್ಟೆಲುತ್ತುವಿನಲ್ಲಿ ಮಾತ್ರ ಒಂದೆ ಭಾಗವಾಗಿತ್ತು : ℱ. ಕನ್ನಡ ಮತ್ತು ತೆಲುಗುಗಳಲ್ಲಿ ಜ್ > ಶಾ > ಯೊ ಎಂದಾಗಿ, ಕೊ ಕೊ ಎಂದಾದುವು.

ದಕ್ಷಿಣ ಭಾರತದ ಕನ್ನಡ, ತೆಲುಗು, ತಮಿಳು ಲಿಪಿ ವೈಚಿತ್ರ್ಯಕ್ಕೆ, ನಾಗರಿ ಲಿಪಿಗಳ ಭಿನ್ನತೆ ದೃಷ್ಟಿಯಿಂದ, ಮುಖ್ಯ ಕಾರಣವೆಂದರೆ ಲೋಹ ಕಂಟವನ್ನು ಬರೆಯಲು ಬಳಸುತ್ತಿದ್ದುದು. ಇದರಿಂದ ಲಿಪಿ ಗುಂಡುಗುಂಡಾಗಲುತೊಡಗಿತು. ಹೀಗೆ ಉತ್ತರ ಭಾರತ, ದಕ್ಷಿಣ ಭಾರತದ ಲಿಪಿಗಳೆಲ್ಲ (ಆರ್ಯ, ದ್ರಾವಿಡ ಭಿನ್ನ ಭಾಷೆಗಳಾದರೂ ಸಹ) ಒಂದೇ ಮೂಲವಾದ ಬ್ರಾಹ್ಮೀ ಲಿಪಿಯಿಂದ ಬಂದುವು. ಕನ್ನಡ ಲಿಪಿಯ ವಿಕಾಸವನ್ನು ಕೆಲವು ಉದಾಹರಣೆಗಳಿಂದ ಗಮನಿಸಬಹುದು :

*

ಅ

ಇ

ಈ

ಉ

ಒ

ಕ

ಚ

ಠ

ಡ

ಣ

ತ

ನ

ಬ

ರ

ಸ

ಳ

'ಳ' ಬ್ರಾಹ್ಮೀಯಲ್ಲಿಲ್ಲ. ಱ, ೞ ಗಳು ಐದನೇ ಶತಮಾನದ ನಂತರ ಬಂದುವು. ಇಂದು ನಾವು ಕನ್ನಡದಲ್ಲಿ ಬಳಸುವ ಅನೇಕ ಒತ್ತುಗಳು ಹಿಂದಿನ ಕಾಲದ ಆಯಾ ವ್ಯಂಜನ ಚಿಹ್ನೆಗಳನ್ನೇ ಹೆಚ್ಚು ಹೋಲುತ್ತವೆ. ಕನ್ನಡದ ಅಂಕೆಗಳೂ ಸಹ ಬ್ರಾಹ್ಮೀ ಅಂಕೆಗಳಿಂದಲೇ ರೂಪಾಂತರ ಹೊಂದಿದುವಾಗಿವೆ :

**ಕಾಗುಣಿತ:**

**ಕನ್ನಡ ಅಂಕೆಗಳು:**

| | ಬ್ರಾಹ್ಮೀ | ಶಾತವಾಹನ | ಕನ್ನಡ |
|---|---|---|---|
| ೧ | | – | [illegible] |
| ೪ | + | [illegible] | [illegible] |
| ೬ | [illegible] | [illegible] | [illegible] |
| ೭ | | [illegible] | [illegible] |
| ೯ | | [illegible] | [illegible] |

ಕನ್ನಡ-ತಮಿಳು ಲಿಪಿ ವ್ಯತ್ಯಾಸಗಳು : (೧) ಕನ್ನಡದಲ್ಲಿ ಮಹಾಪ್ರಾಣಾಕ್ಷರಗಳಿವೆ, ತಮಿಳಿನಲ್ಲಿಲ್ಲ. (೨) ತಮಿಳಿನಲ್ಲಿ ಗ, ಜ, ಡ, ದ, ಬ ಗಳಿಗೆ ಪ್ರತ್ಯೇಕ ಲಿಪಿಯಿಲ್ಲ. (೩) ತಮಿಳಿನಲ್ಲಿ ಎರಡು 'ನ' ಗಳಿವೆ. ந, ன. ன ಸಾಮಾನ್ಯವಾಗಿ ಅಂತ್ಯದಲ್ಲಿ ಬರುತ್ತದೆ. ன ವನ್ನು ற (ಱ) ಜೊತೆ ಬಳಸಲಾಗುತ್ತದೆ. ಆದರಿಂದ 'ನ್ರ'ಧ್ವನಿ ಬರುತ್ತದೆ. 'ತ' ಬಂದಾಗ ந ವೇ ಬರುತ್ತದೆ. (೪) ತಮಿಳಿನಲ್ಲಿ ಅಹ್ದುಂ ஃ ಉಂಟು. ಸಂಸ್ಕೃತದ ವಿಸರ್ಗವನ್ನು ಹೋಲುತ್ತದೆ. ಈ ವ್ಯತ್ಯಾಸಗಳು ತಲೆದೋರಲು ಕನ್ನಡದ ಮೇಲಾದ ಸಂಸ್ಕೃತದ ಪ್ರಭಾವ ಮುಖ್ಯ ಕಾರಣ. ತಮಿಳು ಈ ಪ್ರಭಾವದಿಂದ ಮುಕ್ತವಾಗಿದ್ದು, ಸ್ವತಂತ್ರವಾದ ತನ್ನ ಅಕ್ಷರಗಳ ಉಚ್ಚಾರಕ್ಕೆ ತಕ್ಕಂತೆ ರೂಢವಾಗಿದೆ. ವ್ಯಾಕರಣ ಪಾರಿಭಾಷಿಕ ಶಬ್ದಗಳು ಸಂಸ್ಕೃತದಲ್ಲಿ ಇರುವುವೇ ಕನ್ನಡದಲ್ಲೂ ಇವೆ. ಆದರೆ ತಮಿಳಿನಲ್ಲಿ ದ್ರಾವಿಡ ಮೂಲ ಶಬ್ದಗಳಿವೆ. ಉದಾ : ಸ್ವರ=ಉಯಿರ್, ವ್ಯಂಜನ=ಮೆಯ್ ಇತ್ಯಾದಿ.

## ೯. ಕನ್ನಡ ವರ್ಣಮಾಲೆ

ಕನ್ನಡ ವೈಯಾಕರಣರು ಸಂಸ್ಕೃತ ವ್ಯಾಕರಣವನ್ನು ಆಧರಿಸಿ, ಅನುಸರಿಸಿ, ಅನಂತರ ಅದಕ್ಕೆ ಕನ್ನಡ ವೈಶಿಷ್ಟ್ಯವನ್ನು ಸೇರಿಸುತ್ತಾರೆ. ಆದರೆ ಆಧುನಿಕ ಭಾಷಾ ವಿಜ್ಞಾನಿಗಳು ಆಯಾ ಭಾಷೆಯಲ್ಲಿರುವ ಶಬ್ದಗಳನ್ನು ಆಧರಿಸಿ, ಜೋಡಿ ಶಬ್ದಗಳ ಮೂಲಕ ಅರ್ಥ ವ್ಯತ್ಯಾಸಕ್ಕೆ ಕಾರಣವಾಗುವ ಧ್ವನಿಗಳನ್ನು ಗುರುತಿಸಿ (ಉದಾ : ಮನೆ-ಮಣೆ, ಬೆಲೆ-ಬೆಳೆ ಇತ್ಯಾದಿ). ಅಂತಹ ಧ್ವನಿಘಟಕಗಳನ್ನು ವರ್ಣಮಾಲೆಯಲ್ಲಿ ಸೇರಿಸುತ್ತಾರೆ. ಬರಹ ಸಾಧ್ಯವಿದ್ದು ಉಚ್ಚರಿಸಲೂ ಸಾಧ್ಯವಾಗಿ, ಧ್ವನಿಗಳ ವ್ಯತ್ಯಾಸದಿಂದ ಅರ್ಥ ವ್ಯತ್ಯಾಸ ಉಂಟಾಗುವುದಿದ್ದರೆ ಮಾತ್ರ ಅಂತಹ ಧ್ವನಿಗಳನ್ನು ಅಂದರೆ ಧ್ವನಿಮಾಗಳನ್ನು. ಅಕ್ಷರ ಎನ್ನಬಹುದು. 'ಅಕ್ಷರ' ಎಂಬ ಶಬ್ದಕ್ಕೆ ನಾನಾ ಅರ್ಥಗಳುಂಟು. ಈಗ ಸಾಮಾನ್ಯವಾಗಿ ಲಿಪಿ ಸಂಬಂಧವಾದ ಅರ್ಥ ರೂಢಿಯಲ್ಲಿದೆ.* ಕೇಶಿರಾಜ ಅಕ್ಷರಕ್ಕೇ ವರ್ಣ ಎಂದೂ ಕೆಲವೊಮ್ಮೆ ಪರ್ಯಾಯವಾಗಿ ಹೇಳುತ್ತಾನೆ. ಸದ್ಯಕ್ಕೆ "ಲಿಪಿಯಿಲ್ಲದಿದ್ದರೂ ಲಿಪಿರೂಪವನ್ನು ಪಡೆಯಬಲ್ಲ ಧ್ವನಿಗಳೇ ವರ್ಣಗಳು ಎಂದು ಸ್ಥೂಲವಾಗಿ ಹೇಳಬಹುದು. ಹೀಗೆ ಲಿಪಿರೂಪವನ್ನು ಪಡೆಯಲಾರದ ಧ್ವನಿಗಳು ವರ್ಣಗಳಲ್ಲ." ಎಂಬ ಡಾ|| ಎಚ್. ಎಸ್. ಬಿಳಿಗಿರಿಯವರ ವಿವರಣೆಯನ್ನು ಸ್ವೀಕರಿಸಬಹುದು. ಸ್ಥೂಲವಾಗಿ ಒಂದೇ ಅರ್ಥದಲ್ಲಿ, ಪರ್ಯಾಯ ಶಬ್ದಗಳಾಗಿ, ಅಕ್ಷರ-ವರ್ಣಗಳನ್ನು ಇಲ್ಲಿ ಬಳಸಿವೆ. ಸಂದರ್ಭೋಚಿತವಾಗಿ ಧ್ವನಿಮಾ ಅರ್ಥದಲ್ಲಿ ಅನ್ವಯಿಸಿಕೊಂಡಿವೆ. ಈ ಅಕ್ಷರಗಳ ಸಂಖ್ಯೆ ಭಾಷೆಯಿಂದ ಭಾಷೆಗೆ ವ್ಯತ್ಯಾಸಗೊಳ್ಳುತ್ತದೆ.

ಕನ್ನಡ ವರ್ಣಗಳ ಸಂಖ್ಯೆ ಎಷ್ಟು ? ಕನ್ನಡ ಶುದ್ಧಗೆ ಅಥವಾ ಸುದ್ದಗೆ ಎಷ್ಟು? ಎಂಬ ಬಗ್ಗೆ ವೈಯಾಕರಣರು ಚರ್ಚಿಸಿದ್ದಾರೆ. ಆಧುನಿಕ ಭಾಷಾ ಶಾಸ್ತ್ರಜ್ಞರೂ ಕನ್ನಡ ವರ್ಣಮಾಲೆಯನ್ನು ಕುರಿತು ವಿವೇಚಿಸಿದ್ದಾರೆ. ಹಾಗೆ ವಿವೇಚಿಸುವಾಗ ಹಿಂದಿನ ಮತ್ತು ಇಂದು ಪ್ರಚಲಿತವಿರುವ ಭಾಷೆಯ ಸ್ವರೂಪವನ್ನು ಗಮನಿಸಿದ್ದಾರೆ. ಇಲ್ಲಿ ಮೂರು ದೃಷ್ಟಿಯ ಅಭಿಪ್ರಾಯವನ್ನೂ ಸಂಗ್ರಹಿಸಿ ಹೇಳಿವೆ: (೧) ಕೇಶಿರಾಜ ಹೇಳುವ ಶುದ್ಧಗೆ (೨) ಮೂಲ ಕನ್ನಡ ವರ್ಣಗಳು (೩) ಇಂದಿನ ಕನ್ನಡದ ದೃಷ್ಟಿಯಿಂದ ಅಗತ್ಯವಾದ ವರ್ಣಗಳು.

ಕನ್ನಡದಲ್ಲಿ 'ಶಬ್ದಸ್ಮೃತಿ'ಯನ್ನೂ, ಸಂಸ್ಕೃತದಲ್ಲಿ 'ಭಾಷಾಭೂಷಣ' ವೆಂಬ ಕನ್ನಡ ವ್ಯಾಕರಣವನ್ನೂ ಬರೆದಿರುವ ನಾಗವರ್ಮ "ನಾತ್ರ ಪ್ರಾಯೇಣ

---

* ಅಕ್ಷರ ಎಂಬುದಕ್ಕೆ syllable ಎಂಬ ಅರ್ಥವೂ ಇತ್ತು ಎನ್ನುತ್ತಾರೆ. ಡಾ|| ಎಚ್. ಎಸ್. ಬಿಳಿಗಿರಿ. syllable ಎಂದರೆ ಒಂದು ಸ್ವರವೂ ಮತ್ತು ಒಂದು ಅಥವಾ ಹಲವು ವ್ಯಂಜನಗಳೂ ಉಳ್ಳ ಸ್ವತಂತ್ರ ಪದ ಅಥವಾ ಪದ ಭಾಗ. ಅದನ್ನು ಉಚ್ಚಾರಾಂಶವೆಂದೂ ಅಕ್ಷರವೆಂದೂ ಹೇಳುತ್ತಾರೆ.

ವರ್ಗಾಣಾಂ ದ್ವಿತೀಯ ಚತುರ್ಥಾಃ" ಎಂದನು. ಅವನ ಕಾಲಕ್ಕೇ ಮಹಾಪ್ರಾಣಾಕ್ಷರಗಳ ಬಗ್ಗೆ ವಿವೇಚನೆ ನಡೆದಿದೆ. ಪ್ರಾಯೇಣ ಎಂದು ಹೇಳಿ, ಅನುಕರಣ, ಸಂಖ್ಯೆಗಳಲ್ಲಿ ಮಾತ್ರ ಮಹಾಪ್ರಾಣಗಳು ಉಂಟು ಎಂದನು. ಶ, ಷ ಗಳಿಲ್ಲ ಎಂದನು. ಋ, ೠ, ಌ, ೡ ಗಳನ್ನೂ ಇಲ್ಲವೆಂದನು. ಭಟ್ಟಾಕಳಂಕ ತನ್ನ ಸಂಸ್ಕೃತ 'ಶಬ್ದಾನುಶಾಸನ' ವೆಂಬ ಕನ್ನಡ ವ್ಯಾಕರಣ ಗ್ರಂಥದಲ್ಲಿ ಋ, ಌ ವರ್ಣಗಳು, ಶ, ಷ ಗಳು, ವಿಸರ್ಗ ೱ ೲ ಗಳು ಇಲ್ಲವೆಂದು ತಿಳಿಸಿದ್ದಾನೆ. ಕೇಶಿರಾಜ ಶಬ್ದಮಣಿದರ್ಪಣದಲ್ಲಿ ಕನ್ನಡ ಶುದ್ಧಗೆಯನ್ನು ವಿಚಿತ್ರ ವಿಧಾನದಿಂದಲಾದರೂ ವಿಸ್ತಾರವಾಗಿ ಹೇಳಿದ್ದಾನೆ.

ಕೇಶಿರಾಜನ ಪ್ರಕಾರ ಶುದ್ಧಗೆ ೪೭ ಅಕ್ಷರಗಳು; ಅವನ ಲೆಕ್ಕಾಚಾರ ಹೀಗಿದೆ:
ಸಂಸ್ಕೃತದಲ್ಲಿರುವುವು :

ಸ್ವರಗಳು ೧೪ : ಅ ಆ ಇ ಈ ಉ ಊ ಋ ೠ ಌ ೡ ಏ ಐ ಓ ಔ.

ವರ್ಗೀಯ ವ್ಯಂಜನಗಳು ೨೫ : ಕ ಖ ಗ ಘ ಙ, ಚ ಛ ಜ ಝ ಞ
ಟ ಠ ಡ ಢ ಣ, ತ ಥ ದ ಧ ನ
ಪ ಫ ಬ ಭ ಮ

ಅವರ್ಗೀಯ ವ್ಯಂಜನಗಳು ೯ : ಯ ರ ಲ ವ ಶ ಷ ಸ ಹ ಳ.

ಯೋಗವಾಹಗಳು ೪ : ಂ, ಃ, ೱ, ೲ
(ಕೊನೆಯ ನಾಲ್ಕನ್ನು ಅನುಸ್ವಾರ, ವಿಸರ್ಗ, ಜಿಹ್ವಾಮೂಲೀಯ, ಉಪಧ್ಮಾನೀಯ ಎಂದು ಅನುಕ್ರಮವಾಗಿ ಕರೆಯುತ್ತಾರೆ.)

ಒಟ್ಟು ೫೨ ಅಕ್ಷರಗಳು.

ಇವುಗಳಲ್ಲಿ ಹಲವು ವರ್ಣಗಳು ಕನ್ನಡದಲ್ಲಿಲ್ಲ, ಅವುಗಳನ್ನು ಬಿಡಬೇಕು ಎನ್ನುತ್ತಾನೆ: ಋ ೠ ಌ ೡ : ಶ ಷ ಳ (ಕ್ಷಳ) ; ವಿಸರ್ಗ, ಜಿಹ್ವಾಮೂಲೀಯ, ಉಪಧ್ಮಾನೀಯ. ಹೀಗೆ ಒಟ್ಟು ೧೦. ೫೨–೧೦=೪೨ ವರ್ಣಗಳಾಗುತ್ತವೆ. ಈ ಪಟ್ಟಿಗೆ ಅಚ್ಚಕನ್ನಡದಲ್ಲಿರುವ ಕೆಲವು ವರ್ಣಗಳು ಸೇರಬೇಕು ಎನ್ನುತ್ತಾನೆ: ಎ, ಒ, ೞ (ಕುಳ), ಱ, ೞ ; ಇವು ೫+೪೨=೪೭. ಹೀಗೆ ದೇಶೀಯ ಐದು ವರ್ಣಗಳು ಸೇರಿದರೆ ಒಟ್ಟು ೪೭ ಕನ್ನಡ ಶುದ್ಧಗೆಯಾಯಿತು ಎಂದು ಕೇಶಿರಾಜ ವಿವರಿಸುತ್ತಾನೆ. ಆಧುನಿಕ ಭಾಷಾಶಾಸ್ತ್ರಜ್ಞರು ಈ ಅಭಿಪ್ರಾಯವನ್ನು ಒಪ್ಪುವುದಿಲ್ಲ. ದ್ರಾವಿಡ ಭಾಷೆಗಳ ಹಿನ್ನೆಲೆಯಲ್ಲಿ ಇನ್ನೂ ಕೆಲವು ವರ್ಣಗಳ ಅಗತ್ಯವಿಲ್ಲ ಎನ್ನುತ್ತಾರೆ. ಅವು ಯಾವುವೆಂದರೆ :

| | |
|---|---|
| ೧. ಱ, ೞ ವರ್ಣಗಳು | ೨ |
| ೨. ಅನುಸ್ವಾರ | ೧ |
| ೩. ಸಂಧ್ಯಕ್ಷರಗಳು | ೨ |
| ೪. ಮಹಾಪ್ರಾಣಗಳು | ೧೦ |
| | ೧೫ |

೪೭–೧೫=೩೨. ಹೀಗೆ ಕನ್ನಡದಲ್ಲಿ ೩೨ ವರ್ಣಗಳು ಮಾತ್ರ ಉಳಿಯುತ್ತವೆ. ಕನ್ನಡಕ್ಕೆ ಇಷ್ಟು ವರ್ಣಗಳು ಸಾಕು ಎಂದು ಅವರ ಅಭಿಪ್ರಾಯ. ಆದರೆ ಸಂಸ್ಕೃತ ಶಬ್ದಗಳನ್ನು ಸಾಂಸ್ಕೃತಿಕ ವೈಜ್ಞಾನಿಕ ಮಾನವಿಕ ಜ್ಞಾನಕ್ಷೇತ್ರಗಳ ದೃಷ್ಟಿಯಿಂದ, ಹೆಚ್ಚು ಹೆಚ್ಚಾಗಿ ಬಳಸುತ್ತಿರುವುದರಿಂದ, ಸೌಲಭ್ಯವನ್ನೂ ಗಮನಿಸಿದರೆ, ಸಂಸ್ಕೃತದ ಕೆಲವು ವರ್ಣಗಳ ಅಗತ್ಯ ಕಂಡುಬರುತ್ತದೆ. ಕೆಲವು ಮುಖ್ಯ ವರ್ಣಗಳ ಬಗ್ಗೆ ಸ್ಥೂಲವಾಗಿ ಮುಂದೆ ಚರ್ಚಿಸಿದೆ.

(೧) ಱ ಕಾರ : ಕೇಶಿರಾಜ ಱ, ೞ ಗಳು ಕನ್ನಡದ ವೈಶಿಷ್ಟ್ಯ ಎಂದಿದ್ದಾನೆ. ದ್ರಾವಿಡ ಭಾಷೆಯಲ್ಲಿ ಇವು ಇದ್ದುವು. ತಮಿಳು, ತೆಲುಗು ಭಾಷೆಗಳಲ್ಲಿ ಈಗಲೂ ಇವೆ. ವರ್ಣ ವ್ಯತ್ಯಾಸದಿಂದ (ಜೋಡಿ ಶಬ್ದ ಅಥವಾ ಶಬ್ದಯುಗ್ಮಗಳಲ್ಲಿ) ಅರ್ಥ ವ್ಯತ್ಯಾಸವಾಗುತ್ತದೆ. ಹಳಗನ್ನಡ ಕಾವ್ಯಗಳಲ್ಲಿ ಯಾವುದಾದರೂ ಶಬ್ದದಲ್ಲಿ ರೇಫೆ (ರ) ಇರಬೇಕೊ ಶಕಟರೇಫೆ (ಱ) ಇರಬೇಕೊ, ಕುಳ (ಳ) ಇರಬೇಕೊ ೞ ೞ ವಿರಬೇಕೊ ಎಂದು ಶಂಕೆಯುಂಟಾದಾಗ ತಮಿಳು ಶಬ್ದದೊಡನೆ ಹೋಲಿಸಿ ಅಲ್ಲಿ ಇದ್ದರೆ ಕನ್ನಡದಲ್ಲೂ ಱ, ಅಲ್ಲಿ ೞ ಇದ್ದರೆ ಇಲ್ಲೂ ೞ ಯುಕ್ತ ಶಬ್ದ ಎಂದು ನಿರ್ಧರಿಸಬಹುದು. ಉದಾ : ವಾೞ್–ಬಾೞ್ (ಬಾಳು ಬದುಕು), ವಾಳ್–ಬಾಳ್ (ಕತ್ತಿ) ; ಆಳ್–ಆಳ್ (ಸೇವಕ, ಮನುಷ್ಯ) ಆೞ್–ಆೞ್ (ಮುಳುಗು) ; ಕಱೈ–ಕರೆ (ಕಡಲ ಕರೆ, ದಂಡೆ), ಕಱೈ–ಕಱೆ (ಕಲೆ, ಬಟ್ಟೆ ಕರೆಯಾಗಿದೆ) ; ಅರಿ–ಅರಿ (ಕತ್ತರಿಸು), ಅಱಿ–ಅಱಿ (ತಿಳಿಯುವುದು), ಅರೆ (ಅರ್ಧ), ಅಱೆ (ಬಂಡೆ) : ತಳೆ (ಕಟ್ಟುವುದು), ತೞೆ (ಛತ್ರಿ) ಇತ್ಯಾದಿ. ಯಾವ ಅಕ್ಷರವಿದ್ದರೆ ಏನರ್ಥ ಎಂಬುದೂ ಸ್ಪಷ್ಟವಾಗುತ್ತದೆ. ಪಾಣಿನಿ ಪ್ರಕಾರ ರೇಫೆ ಮೂರ್ಧನ್ಯ (Retroflex). ಭಾಷಾಶಾಸ್ತ್ರಜ್ಞರ ಪ್ರಕಾರ ದಂತಮೂಲೀಯ ಅಥವಾ ವರ್ತ್ಸ್ಯ (Alveolar). ತಮಿಳು ತೆಲುಗು ಮಲೆಯಾಳಂಗಳಲ್ಲಿ ದಂತ್ಯವಾಗಿವೆ. ಆದ್ದರಿಂದ ಶಕಟರೇಫ (ಱ) ರೇಫೆಯಿಂದ (ರ) ಬೇರೆ ಉಚ್ಚಾರಣೆ ಉಳ್ಳದ್ದು. ಕೇಶಿರಾಜ 'ರೇಫೆ ಪುಟ್ಟುವ ತಾಣಮುಂ ಬೆಟ್ಟಿತ್ತಾಗುಚ್ಚರಿಸೆ ಱ ಕಾರಂ ಪುಟ್ಟುಗುಂ' ಎಂದನು. ಆದರೆ ಇದು ಟ-ತ ಗಳ ನಡುವಿನ ಒಂದು ಉಚ್ಚಾರಣೆ ಇರಬಹುದೆ ಎಂಬ ಸಂಶಯ ಬರುತ್ತದೆ. ಏಕೆಂದರೆ ಱ ಒತ್ತಕ್ಷರ (ದ್ವಿತ್ವ)ವಿದ್ದಾಗ ತಮಿಳಿನಲ್ಲಿ ಟ್ರ,

ತ್ರ ಉಚ್ಚಾರಣೆ ಪಡೆಯುತ್ತದೆ. ಣಾ ಇದ್ದಾಗ 'ನ್ದ್ರ' ಎಂಬ ಉಚ್ಚಾರಣೆ ಬರುತ್ತದೆ, ಉದಾ: ಶಿಱು+ಎಲಿ=ಶಿಟ್ರಿಲಿ, ಮಾಟ್ರಂ, ಒನ್ರು ಇತ್ಯಾದಿ. ಕನ್ನಡದಲ್ಲಿ 'ತ್ತ' ಆಗುತ್ತದೆ, ಕುಱು+ಎಸಟ್=ಕುತ್ತೆಸಟ್, ಕಿಱು+ಅಡಿ=ಕಿತ್ತಡಿ. ಒಟ್ಟನಲ್ಲಿ ಈ ವರ್ಣ ಇಂದು ಭೇದವಿಲ್ಲದೆ ರೇಫೆಯೊಂದಿಗೆ ಸೇರಿಹೋಗಿದೆ.

(೨) ೞಕಾರ: ಹರಿಹರನ ಕಾಲಕ್ಕಾಗಲೇ ೞಕಾರ ಕಣ್ಮರೆಯಾಗಿದ್ದಿರಬೇಕು. ಉಚ್ಚಾರದಲ್ಲಿದ್ದಿರಲಾರದು ಎಂಬುದು ಖಚಿತ. ಏಕೆಂದರೆ ಹರಿಹರ 'ನೋಡುವಡೊಂದಕ್ಕರ ಮದುಮಾಡುವೊಡುಚ್ಚರಣೆಗರಿದು' ಎಂದಿದ್ದಾನೆ. ನೋಡಲು ಒಂದೇ ಅಕ್ಷರದಂತಿವೆ, (ೞಕುಳಕ್ಷಳ) ಉಚ್ಚರಿಸಲು ಅಸಾಧ್ಯ. ಕೇಶಿರಾಜ ೞಕಾರಯುಕ್ತ ಶಬ್ದಗಳನ್ನು ನಿರ್ಧರಿಸಿ ಉಳಿಸುವ ಪ್ರಯತ್ನ ಮಾಡಿದರೂ, ಅವನಿಗೂ ಕೆಲವು ಶಬ್ದಗಳ ಬಗ್ಗೆ ಸಂದೇಹ ಬಂದು ಪಟ್ಟಿ ಮಾಡಿದ್ದಾನೆ. ತೆಲುಗಿನಲ್ಲೂ ಇಂದು ಈ ವರ್ಣವಿಲ್ಲ. ಇದರ ಉಚ್ಚಾರಣೆಯೂ ಸಹ ತಮಿಳಿನಲ್ಲಿ ಇಂದು ಒಂದೇ ಬಗೆಯಾಗಿಲ್ಲ. ತಂಜಾವೂರು, ಪಾಂಡಿಚೆರಿ ಕಡೆ 'ಜ̤' ಎಂಬಂತೆ ಇದೆ. ಮದ್ರಾಸು ಕಡೆ 'ಯ' ಉಚ್ಚಾರಣೆ ಇದೆ. ಕೇಶಿರಾಜ 'ಡಕಾರಮಂ ಬೆಟ್ಟಿತ್ತಾಗುಚ್ಚರಿಸೆ ೞಮಂ ಪುಟ್ಟುಗುಂ' ಎಂದಿದ್ದಾನೆ. ಪೂರ್ವದ ಹಳಗನ್ನಡದ ೞ>ರ ಆಗಿರುವುದುಂಟು. ಬಹುವಾಗಿ ಕನ್ನಡದಲ್ಲಿ ೞ>ಳ ದೊಂದಿಗೆ ಸೇರಿಹೋಗಿದೆ. ಒತ್ತಕ್ಷರದಲ್ಲಿ ರೇಫೆ ಬರುತ್ತದೆ. ಉದಾ: ಗೞ್ದೆ>ಗರ್ದೆ>ಗದ್ದೆ, ಕೞ್ತೆ>ಕರ್ತೆ>ಕತ್ತೆ. ತೆಲುಗಿನಲ್ಲಿ ಡಕಾರವಾಗಿರುವುದುಂಟು. ಕೋೞು>ಕೋಡಿ, ಏೞ್>ಏಡು. ಆಧುನಿಕರ ಪ್ರಕಾರ ೞ ಮೂರ್ಧನ್ಯ. ಬಹುಶಃ ಮೂಲದ್ರಾವಿಡ ಭಾಷೆಯಲ್ಲಿ ಇದರ ಉಚ್ಚಾರಣೆಯು ರ–ಡ ಗಳಿಗೆ ಮಧ್ಯಸ್ಥದ್ದಾಗಿದ್ದಿರಬಹುದು.

(೩) ಅನುಸ್ವಾರ: ಕನ್ನಡದಲ್ಲಿ ಅನುಸ್ವಾರದ (ಬಿಂದು) ಕಾರ್ಯವನ್ನು ವರ್ಗೀಯ ವ್ಯಂಜನಗಳ ಆಯಾ ವರ್ಗದ ಅನುನಾಸಿಕಗಳೇ ಮಾಡುತ್ತವೆ. ಉದಾ: ಬಿಙ್ಕ, ಅಞ್ಚೆ, ತೊಣ್ಡು, ಬೆನ್ದು, ಕಮ್ಪು ಇತ್ಯಾದಿ. ಸಂಸ್ಕೃತದಲ್ಲಿ ಯ, ರ, ಲ, ವ, ಶ, ಷ, ಸ, ಹ ಗಳ ಹಿಂದೆ ಬರುವ, ಉಚ್ಚಾರವಾಗುವ ಅನುಸ್ವಾರವೇ ನಿಜವಾದ ಅನುಸ್ವಾರ ಎನ್ನಲಾಗಿದೆ. ಉದಾ: ಸಂಯಮ, ಕಂಸ, ಸಂವತ್ಸರ ಇತ್ಯಾದಿ. ಆದರೆ ಇಂದಿನ ಸಂಸ್ಕೃತ ಉಚ್ಚಾರಣೆಯಲ್ಲಿ ಅದು ನ್, ಮ್ ಗಳಾಗಿವೆ. ಉತ್ತರ ಭಾರತದಲ್ಲಿ 'ನ್', ದಕ್ಷಿಣ ಭಾರತದಲ್ಲಿ 'ಮ್' ಉಚ್ಚಾರ ಅಧಿಕ, (ಸನ್‌ಸಾರ್–ಸಮ್‌ಸಾರ) ತೆಲುಗಿನ ಅರ್ಧಾನುಸ್ವಾರ (() ಸಂಸ್ಕೃತದ ಅನುಸ್ವಾರವನ್ನು ಹೋಲುತ್ತದೆ. (ವಾ(ಡು). ಅನುಸ್ವಾರ ದ್ರಾವಿಡ ಭಾಷೆಗಳಿಗೆ ಅಪರಿಚಿತ ಎನ್ನುತ್ತಾರೆ, ಡಾ|| ಕಾಲ್ಡ್‌ವೆಲ್. ಆದರೆ ಸಂಸ್ಕೃತ ವೈಯಾಕರಣರು ಮ, ನ ಕಾರಗಳಿಗೆ ಅನುಸ್ವಾರ ಆದೇಶವಾಗಿ ಬರುತ್ತದೆ ಎನ್ನುತ್ತಾರೆ. ಕನ್ನಡ

ವೈಯಾಕರಣರು ವರ್ಗಪಂಚಕಕ್ಕೆ ಬಿಂದುವನ್ನು ಬದಲಾಗಿ ಇಡುತ್ತಾರೆ. ಕನ್ನಡದಲ್ಲಿ ಶಬ್ದ ಮಧ್ಯದಲ್ಲಿನ ಅನುಸ್ವಾರ ಮುಂದೆ ಬರುವ ಸ್ಪರ್ಶ ಅಥವಾ ಅನುಘರ್ಷ (ವರ್ಗೀಯ ವ್ಯಂಜನಗಳು) ಗಳಿಗೆ ಸಮನಾದ ಅನುನಾಸಿಕ ಉಚ್ಚಾರಣೆ ಪಡೆಯುತ್ತದೆ. ಶಬ್ದಾಂತ್ಯದಲ್ಲಿ ಮ ಕಾರ ಉಚ್ಚಾರಣೆ. ಆದ್ದರಿಂದ ಕನ್ನಡದಲ್ಲಿ ಅನುಸ್ವಾರ ಪರಿಸರಕ್ಕನುಗುಣವಾದ ಉಚ್ಚಾರಣೆ ಹೊಂದಿದೆ ಎನ್ನಬಹುದು. ತಮಿಳಿನಲ್ಲಿ ಅನುಸ್ವಾರವಿಲ್ಲ. ಎರಡು ந, ண 'ನ' ಗಳಿವೆ.

(೪) ಸಂಧ್ಯಕ್ಷರಗಳು (Diphthong) : ಐ, ಔ ಗಳು. ಐ ಎಂಬುದನ್ನು ಅಯ್ ಎಂಬುದರಿಂದಲೂ, ಔ<ಅವ್ ಎಂಬುದರಿಂದಲೂ ಸೂಚಿಸಬಹುದು. ಒಂದು ಕಾಲಕ್ಕೆ ಸಂಸ್ಕೃತದಲ್ಲಿ ಐ, ಔ ಗಳ ಉಚ್ಚಾರಣೆ ಈಗಿನಂತಲ್ಲದೆ ಬೇರೆ ರೀತಿಯಲ್ಲಿದ್ದಿರಬೇಕು, ಸ್ವತಂತ್ರ ಉಚ್ಚಾರವಿದ್ದಿರಬೇಕು. ನೈಯಾಯಿಕ, ವೈಯಾಕರಣ, ನೌವಂ ಗಳನ್ನು ಅಯ್, ಅವ್‌ಗಳಂತೆ ಉಚ್ಚರಿಸಲು ಸಾಧ್ಯವಿಲ್ಲ. ಆದರೆ ಈಗ ಆ ವಿಶಿಷ್ಟ ಉಚ್ಚಾರಣೆ ಮರೆಯಾಗಿ ಅಯ್ (ಎಯ್—ತಮಿಳು), ಅವ್‌ಗಳೆಂದಾಗಿವೆ. ಇದು ಒಂದು ಸ್ವರವಲ್ಲ, ಸಂಧಿ ಸ್ವರ. ಸೇಡಿಯಾಪು ಕೃಷ್ಣಭಟ್ಟರು ಹೇಳುವಂತೆ "ಅಯ್ (ಐ) ಸ್ವರವೆನ್ನುವುದಾದರೆ ಅಯ್, ಎಯ್, ಉಯ್, ಒಯ್ ನಾಲ್ಕು ಸಂಧಿ ಸ್ವರಗಳು ಆಗುತ್ತವೆ". ಆದ್ದರಿಂದ "ಸ್ವರ ವ್ಯಂಜನಗಳ ಸೂಕ್ಷ್ಮ ವಿವೇಕದಿಂದ ಹೇಳುವುದಾದರೆ, ಅವು ಸ್ವರಗಳಲ್ಲ; ಕೇವಲ ವರ್ಣಗಳೂ ಅಲ್ಲ; ಸವ್ಯಂಜನಾಕ್ಷರಗಳು" ಎನ್ನುತ್ತಾರೆ, ಡಾ|| ಎಚ್. ಎಸ್. ಬಿಳಿಗಿರಿ. ಅವರ ಅಭಿಪ್ರಾಯದಲ್ಲಿ ಕನ್ನಡದಲ್ಲಿ ಇವನ್ನು ಬಿಡಬಹುದು.

(೫) ಮಹಾಪ್ರಾಣಗಳು : ಕನ್ನಡದಲ್ಲಿ ಮಹಾಪ್ರಾಣಗಳು ಉಂಟೇ? ಈ ಬಗ್ಗೆ ನಾಗವರ್ಮನ ಕಾಲಕ್ಕೇ ಸಂದೇಹವಿದ್ದುದು ಸ್ಪಷ್ಟ. "ನಾತ್ರ ಪ್ರಾಯೇಣ ವರ್ಗಾಣಾಂ ದ್ವಿತೀಯ ಚತುರ್ಥಾಃ" ಎಂದು ಹೇಳಿರುವುದನ್ನು ಹಿಂದೆಯೇ ಉಲ್ಲೇಖಿಸಿದೆ. ವರ್ಗಗಳ ಎರಡು ನಾಲ್ಕನೆಯ ವ್ಯಂಜನಗಳು ಪ್ರಾಯಶಃ ಇಲ್ಲ. ಅಂದರೆ ಖ ಘ, ಛ ಝ, ಠ ಢ, ಥ ಧ, ಫ ಭ ಗಳು ಇಲ್ಲ. ಆದರೆ ಕೇಶಿರಾಜ "ಒಳವು ಮಹಾಪ್ರಾಣಂಗಳ್ ವಿಳಸತ್ ಕರ್ಣಾಟ ಭಾಷೆಯೊಳ್ ಕೆಲವು ನಿಜೋಜ್ವಲವಾಗಿ", "ಅವಂ ಮಾರ್ಗವಿದರ್ ಸಂಖ್ಯೆಯೊಳಂ ಭೋರ್ಗರೆವ ಅನುಕೃತಿಯೊಳಂ ಪ್ರಯೋಗಿಸುತಿರ್ಪರ್" ಎಂದು ಸಮರ್ಥಿಸಿಕೊಳ್ಳುವ ಪ್ರಯತ್ನ ಮಾಡಿದ್ದಾನೆ. ತಮಿಳಿನಲ್ಲಿ ಮಹಾಪ್ರಾಣಾಕ್ಷರವಿಲ್ಲ. ಅಚ್ಚ ತೆಲುಗಿನಲ್ಲಿಯೂ ಇಲ್ಲವೆಂದು ನನ್ನಯ್ಯಭಟ್ಟನು ಹೇಳಿದ್ದಾನೆ. ಕೇಶಿರಾಜ ಕೊಡುವ ಸಂಖ್ಯಾವಾಚಿಗಳು ಸಹಸ್ರ>ಸಾಸಿರ ತದ್ಭವದ ಸಮಾಸದಿಂದಾದುವು (ಇರ್ಛಾಸಿರಂ, ಎಣ್ಛಾಸಿರಂ, ನೂರ್ಛಾಸಿರಂ). ಕನ್ನಡದಲ್ಲಿ ೯೯೯ ಸಂಖ್ಯೆ ಮಾತ್ರ ಇತ್ತು, ಸಾವಿರ ಇರಲಿಲ್ಲ. ಅಲರ್+ಇಸು=ಅಲರ್ಚು, ಉದಿರ್+ಇಸು = ಉದಿರ್ಚು ಆದಂತೆ ಇರ್+

ಸಾಸಿರಂ=ಇರ್ಚಾಸಿರಂ ಆಗಬೇಕಿತ್ತು. ಆದರೆ ಸಂಸ್ಕೃತದಲ್ಲಿ ಶ್ರೀಮತ್+ಶಶಾಂಕಂ= ಶ್ರೀಮಚ್ಛಶಾಂಕಂ ಆಗುವಂತೆ ಸಂಸ್ಕೃತ ಸಾದೃಶ್ಯ ಪ್ರಭಾವದಿಂದ ಕನ್ನಡದಲ್ಲೂ ಆಗಿರಬಹುದು. ಕೇಶಿರಾಜ ಕೊಡುವ ಇತರ ಉದಾಹರಣೆಗಳು ಠಾಣ, ಥಾಪನೆ, ಥಟ್ಟು, ದೆಕ್ಖಾಣ ಇತ್ಯಾದಿ ಪ್ರಾಕೃತ ಅಥವಾ ಮರಾಠಿಯಿಂದ ಬಂದುವು. ಅಚ್ಚಕನ್ನಡವಲ್ಲ. ಇನ್ನು ಅನುಕರಣ ಶಬ್ದಗಳು. ಅನುಕರಣ ಶಬ್ದಗಳಲ್ಲಿ ಅಲ್ಪಪ್ರಾಣವೂ ಇರಬಹುದು, ಮಹಾಪ್ರಾಣವೂ ಇರಬಹುದು. ಥಳಥಳ–ತಳತಳ, ಥಟ್ಟನೆ–ತಟ್ಟನೆ ಇತ್ಯಾದಿ. ಅವುಗಳಿಗೆ ಇತರ ಶಬ್ದಗಳ, ವರ್ಣಗಳ ಮೌಲ್ಯ ಕೊಡುವಂತಿಲ್ಲ. ಏಕೆಂದರೆ ಅನುಕರಣದಲ್ಲಿ ಬರುವ ಧ್ವನಿಗಳೆಲ್ಲಾ ವರ್ಣಗಳಾಗಲು ಸಾಧ್ಯವಿಲ್ಲ. ಈ ದೃಷ್ಟಿಯಿಂದ ಅಚ್ಚ ಕನ್ನಡದಲ್ಲಿ ಮಹಾಪ್ರಾಣಾಕ್ಷರಗಳು ಇಲ್ಲ ಎನ್ನಬಹುದು. ಆದರೆ ಈಗ ಅಂತಹ, ಇಂತಹ, ಎಂತಹ ಶಬ್ದಗಳನ್ನು ಅಂಥ, ಇಂಥ, ಎಂಥ ಎಂದು ಹೇಳುವುದುಂಟು ಬರೆಯುವುದೂ ಉಂಟು. ಸಂಸ್ಕೃತ ಶಬ್ದಗಳು ಅಧಿಕವಾಗಿ ಬಳಕೆಯಾಗುವವರೆಗೆ ಮಹಾಪ್ರಾಣಾಕ್ಷರಗಳನ್ನು ತ್ಯಜಿಸುವಂತಿಲ್ಲ. ದ್ರಾವಿಡದಲ್ಲಿ ಮಹಾಪ್ರಾಣಾಕ್ಷರವಿರಲಿಲ್ಲ.

(೬) ಶ, ಷ ಕಾರಗಳು : ತಮಿಳಿನಲ್ಲಿ ಶ, ಷ, ಸ ಕಾರಗಳಿಲ್ಲ. ಸಂಸ್ಕೃತದ ಷ ಕಾರ ತಮಿಳಿನಲ್ಲಿ ಡ, ಟ, ತ, ದ, ಚ ಕಾರಗಳಾಗಿ ಸಂದರ್ಭಾನುಸಾರ ಮಾರ್ಪಾಟಾಗುತ್ತದೆ. ಶ ಕಾರದ ಉಚ್ಚಾರಣೆ ಇದೆ, ಲಿಪಿ ಮಾತ್ರ ಚಕಾರವೇ (ಚ) ಆಗಿರುತ್ತದೆ. ಅಚ್ಚ ಕನ್ನಡ, ತೆಲುಗುಗಳಲ್ಲೂ ಶ ಕಾರ ಉಚ್ಚಾರಣೆ ಇಲ್ಲ. ತಮಿಳಿನ 'ಶ' ಉಚ್ಚಾರಣೆ ಕನ್ನಡದಲ್ಲಿ 'ಸ', ತೆಲುಗಿನಲ್ಲಿ 'ಚ' ಆಗುತ್ತದೆ : ಶೆಂಡು—ಸೆಂಡು—ಚೆಂಡು, ಶೆಜ್ರ್ಯ—ಸೆಜೆ—ಚೆಜ ; ಕೆಲವೆಡೆ ಶ > ಚ, ಜ ಆಗುವುದೂ ಉಂಟು. ಶಕ್ಕ್ರ—ಸೆಕ್ಕೆ (ಚೆಕ್ಕೆ ಹೊ.ಗ.), ಶಿಣುಂಗು—ಜಿನುಂಗು (ಜಿನುಗು ಹೊ.ಗ.), ಶೋಡು—ಜೋಡು, ಶಿಜಿಪ್ಪು—ಚೆಜಿಪು. ಆದ್ದರಿಂದ ಮೂಲದ್ರಾವಿಡದಲ್ಲಿ ಶ, ಚ, ಸ ಗಳ ಮಧ್ಯಸ್ಥ ಉಚ್ಚಾರಣೆ ಇದ್ದಿರಬಹುದೆ? ಷ ಕಾರವಂತೂ ಹಳಗನ್ನಡದಲ್ಲೂ, ತಮಿಳು, ತೆಲುಗುಗಳಲ್ಲೂ ಇಲ್ಲವೆ ಇಲ್ಲ. ಹೊಸಗನ್ನಡದಲ್ಲಿ ಅಷ್ಟು, ಇಷ್ಟು, ಎಷ್ಟು ಎಂಬಲ್ಲಿ ಮಾತ್ರ ಇದೆ.

(೭) ಙ, ಞ ಕಾರಗಳು : ಕನ್ನಡದಲ್ಲಿ ಙ, ಞ ಗಳಿಗೆ ಪ್ರತ್ಯೇಕ ಅಸ್ತಿತ್ವ ಇದೆಯೆ? ಇವುಗಳನ್ನು ಪ್ರತ್ಯೇಕ ವರ್ಣಗಳೆನ್ನಬಹುದೆ? ಈ ಬಗ್ಗೆ ಈ ಶತಮಾನದ ಪ್ರಾರಂಭದಿಂದಲೂ ಚರ್ಚೆ ನಡೆದಿದೆ. ಮಲೆಯಾಳಂನಲ್ಲಿ ಬಿಡಿ ಮತ್ತು ಒತ್ತಕ್ಷರಗಳಲ್ಲಿ (ಅಸಂಯುಕ್ತ, ಸಂಯುಕ್ತ) ಇವುಗಳ ಬಳಕೆ ಇದೆ. ಉದಾ : ಞಾನ್, ಞಾಙ್ಙಳ್, ಞಾರಾಟ್ಟ ಇತ್ಯಾದಿ. ತಮಿಳಿನಲ್ಲಿ ಅನುಸ್ವಾರವಿಲ್ಲವಾದ ಕಾರಣ ಐದು ವರ್ಗೀಯ ಅನುನಾಸಿಕಗಳುಂಟು. ಕೇಶಿರಾಜ ಕನ್ನಡದಲ್ಲಿ ಇವು ಉಂಟು ಎಂದು ಮೊದಲು ಹೇಳಿ, ಆಯೆಡೆ ಬಿಂದುವನ್ನು ಆದೇಶವಾಗಿ ಬಳಸಲಾಗುತ್ತದೆ ಎನ್ನುತ್ತಾನೆ. .. ಬಙ್ಕ, ಅಞ್ಚೆ ; ಬಿಂಕ, ಅಂಚೆ. ಆದರೆ ಕನ್ನಡದಲ್ಲಿ

## ೧೦. ಭಾಷೆಯ ಅವಸ್ಥಾಂತರಗಳು

ನಿರಂತರವಾಗಿ ಮಾರ್ಪಡುತ್ತಿರುವುದು ಭಾಷೆಯ ಲಕ್ಷಣ. ಬದಲಾವಣೆ ಜೀವಂತಿಕೆಯ ಲಕ್ಷಣ ಎನ್ನಬಹುದು. ಹಾಗಿಲ್ಲದೆ, ಭಾಷೆಗೆ ಅತಿಕಟ್ಟುನಿಟ್ಟಾದ ವ್ಯಾಕರಣದ ನಿರ್ಬಂಧ ಹೇರಿ, ನಿಯಮಗಳು ಅನುಲ್ಲಂಘನೀಯ ಎಂಬಂತೆ ಮಾಡಿದರೆ ಭಾಷೆಯ ಬೆಳವಣಿಗೆ ನಿಂತು ಕಾಲಕ್ರಮೇಣ ಬಳಕೆ ನಿಂತೋ, ಬೇರೆ ಭಾಷೆಗೆ ಅವಕಾಶ ಮಾಡಿಕೊಟ್ಟೋ ಅದು ಮೃತ ಭಾಷೆಯಾಗುತ್ತದೆ. ಸಂಸ್ಕೃತ, ಲ್ಯಾಟಿನ್‌ಗಳಿಗೆ ಹೀಗಾಯಿತು. ಭಾಷೆಯಲ್ಲಿ ಆಗುತ್ತಿರುವ ಮಾರ್ಪಾಟುಗಳು ಪ್ರತಿನಿತ್ಯ ಗೋಚರವಾಗುವುದಿಲ್ಲ. ಬೇರೆ ಬೇರೆ ಕಾಲಗಳನ್ನು ಮಾನವಾಗಿಟ್ಟು ಗಮನಿಸಿದಾಗ ಮಾರ್ಪಾಟುಗಳು ಸ್ಪಷ್ಟವಾಗಿ ಕಾಣುತ್ತವೆ. ಸ್ಪಷ್ಟವಾಗಿ ಕೆಲವೊಂದು ವೈಲಕ್ಷಣ್ಯಗಳನ್ನು ಗುರುತಿಸಬಹುದಾದ ಅಂತಹ ಕಾಲಮಾನವನ್ನು ಭಾಷೆಯ ಅವಸ್ಥಾನಗಳೆನ್ನಬಹುದು. ಕನ್ನಡ ಭಾಷೆಯೂ ಕಾಲಭೇದದಿಂದಾಗುವ ಅವಸ್ಥಾನಗಳನ್ನು ಹೊಂದಿದೆ. ಕ್ರಿ.ಶ. ಐದು, ಆರನೆಯ ಶತಮಾನಗಳ ಶಾಸನ ಕನ್ನಡವನ್ನು ಇಂದಿನ ಕನ್ನಡ ಮಾತ್ರ ಬಲ್ಲವರು ಓದಿ ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲದಷ್ಟು ವ್ಯತ್ಯಾಸಗಳನ್ನು ಕಾಣಬಹುದು. ಬೇರೆ ಬೇರೆ ಕಾಲದ ಕನ್ನಡದ ಅವಸ್ಥಾನಗಳು ಎಷ್ಟಿವೆ ಎಂಬ ವಿಷಯದಲ್ಲಿಯೂ ವಾದವಿದೆ.

**ಮತಭೇದ** : ಕನ್ನಡಕ್ಕೆ ಬೇರೆ ಬೇರೆ ಅವಸ್ಥಾನಗಳಿವೆಯೆಂದು ಮೊದಲ ಬಾರಿಗೆ ಭಾಷಾಭೂಷಣದ ಪೀಠಿಕೆಯಲ್ಲಿ ಬರೆದ ಬಿ. ಎಲ್. ರೈಸ್‌ರವರು ಕ್ರಿ.ಶ. ೮ನೇ ಶತಮಾನಕ್ಕೆ ಹಿಂದಿನದು ಪೂರ್ವದ ಹಳಗನ್ನಡ ಎಂದೂ, ಕ್ರಿ.ಶ. ೮ ನೇ ಶತಮಾನದಿಂದ ೧೪ ನೇ ಶತಮಾನದವರೆಗೆ ಹಳಗನ್ನಡ ಎಂದೂ, ಅನಂತರದಲ್ಲಿ ಹೊಸಗನ್ನಡವೆಂದೂ ಅಭಿಪ್ರಾಯಪಟ್ಟರು. ಆದರೆ ಇದನ್ನು ಕಿಟೆಲ್ ಅವರು ಒಪ್ಪುವುದಿಲ್ಲ. ತಮ್ಮ ಕನ್ನಡ ಭಾಷೆಯ ವ್ಯಾಕರಣದಲ್ಲಿ ಒಂದೆಡೆ ಕ್ರಿ.ಶ. ೬೦೦ ರಿಂದ ಕ್ರಿ.ಶ. ೧೨೫೦ ರ ವರೆಗೆ ಪ್ರಾಚೀನ ಕನ್ನಡವೆಂದೂ (Ancient dialect). ಕ್ರಿ.ಶ. ೧೨೫೦ ರಿಂದ ಕ್ರಿ.ಶ. ೧೬೦೦ ರ ವರೆಗೆ ಮಧ್ಯಕಾಲೀನ ಕನ್ನಡವೆಂದೂ, ಕ್ರಿ.ಶ. ೧೬೦೦ ರಿಂದ ಇಂದಿನವರೆಗೆ ಹೊಸಗನ್ನಡವೆಂದೂ ಹೇಳಿದ್ದಾರೆ.

ಕಿಟೆಲ್‌ರ ಅಭಿಪ್ರಾಯವನ್ನು ರಾ. ನರಸಿಂಹಾಚಾರ್ಯರು ಒಪ್ಪದೆ, ಮೊದಲು ಮೂರು ಅವಸ್ಥೆಗಳನ್ನು—ಪೂ. ಹ. ಗ., ಹ. ಗ., ಹೊ. ಗ.—ಅನಂತರ ನಾಲ್ಕು ಅವಸ್ಥೆಗಳನ್ನು ಪ್ರತಿಪಾದಿಸಿದ್ದಾರೆ. ಕ್ರಿ.ಶ. ೯ ನೇ ಶತಮಾನದ 'ಕವಿರಾಜಮಾರ್ಗ' ದಲ್ಲಿಯೇ 'ಪಟಗನ್ನಡ' ಎಂಬ ಶಬ್ದ ಪ್ರಯೋಗವಿರುವುದರಿಂದ ಅವನ ಕಾಲಕ್ಕಾಗಲೇ ಹಿಂದಿನ ಒಂದು ಕನ್ನಡ ಇದ್ದು ಮರೆಯಾಗುತ್ತಿತ್ತು ಎಂಬುದು ಸ್ಪಷ್ಟ. ಆ 'ಪಳಗನ್ನಡ'ವನ್ನು ನಾವು ಪ್ರಾಚೀನ ಶಾಸನಗಳಲ್ಲಿ ನೋಡಬಹುದು. ವ್ಯಾಕರಣಾಂಶಗಳಲ್ಲಿ ಬಹಳ ವ್ಯತ್ಯಾಸವಿದೆ. ಅದನ್ನೇ ಪೂರ್ವದ ಹಳಗನ್ನಡ ಎನ್ನಬಹುದು ಎಂದು

ಹೇಳಿ ಹನ್ನೆರಡು ಬಗೆಯ ವ್ಯತ್ಯಾಸಗಳನ್ನು ಉದಾಹರಣೆಯಾಗಿ ಕೊಡುತ್ತಾರೆ. ಅಂದರೆ ರೈಸ್ ಹೇಳಿದ ಪೂ. ಹ. ಗ. ವನ್ನು ಒಪ್ಪಿದ್ದಾರೆ. ಚಂಪೂಯುಗದ್ದು ಹಳಗನ್ನಡವೆನ್ನುತ್ತಾರೆ. ಅನಂತರ, ಹಳಗನ್ನಡ ಹೊಸಗನ್ನಡಗಳ ನಡುವೆ ವೀರಶೈವ ವಚನಕಾರರ ಕಾಲದ ಕನ್ನಡವನ್ನು, ಬದಲಾಗುತ್ತಿದ್ದ ಕಾಲದ ಸಂಕ್ರಮಣ ಕಾಲದ ಕನ್ನಡ, ಅದನ್ನೂ ಒಪ್ಪಬಹುದೆಂದು, ಇಲ್ಲಿ ಕಿಟೆಲ್ ಹೇಳುವ ನಡುಗನ್ನಡ ವನ್ನೂ ಒಪ್ಪುತ್ತಾರೆ. ಇನ್ನು ಉಳಿದದ್ದು ಹೊಸಗನ್ನಡ. ಹೀಗೆ ರಾ. ನರಸಿಂಹಾ ಚಾರ್ಯರು ನಾಲ್ಕು ಅವಸ್ಥಾನಗಳನ್ನು ಪ್ರತಿಪಾದಿಸಿದ್ದಾರೆ.

ಕನ್ನಡ ಕೈಪಿಡಿಕಾರರು ತಮ್ಮ ಹಿಂದಿನ ವಿದ್ವಾಂಸರ ಅಭಿಪ್ರಾಯಗಳನ್ನು ಸಂಗ್ರಹಿಸಿಕೊಟ್ಟು ತಮ್ಮ ಸಿದ್ಧಾಂತವನ್ನು ಮಂಡಿಸಿದ್ದಾರೆ. ಪೂ. ಹ. ಗ. ವಿರೋಧಿಗಳ ಅಭಿಪ್ರಾಯ ಹೀಗಿದೆ: (೧) ಕವಿರಾಜಮಾರ್ಗಕಾರ ಹೇಳುವ 'ಪಳಗನ್ನಡ'ದ ಅರ್ಥ ಹಳಗನ್ನಡ ಎಂದಲ್ಲ. ಅಂದರೆ ಅವನ ಕಾಲಕ್ಕೆ ಹಳೆಯ ದಾಗಿದ್ದ ಕನ್ನಡವೆಂದಲ್ಲ. 'ಪಳ' ಎಂಬುದು ವೇದ ಎಂಬುದಕ್ಕೆ ಬದಲಾಗಿ ಬಳಸಿರುವ ಶಬ್ದ. ಅದರರ್ಥ ಪುರಾತನವಾದ, ಬಹಳ ಕಾಲದಿಂದ ರೂಢಿಯಲ್ಲಿ ಬಂದಿರುವ ಎಂದು. (೨) ಕವಿರಾಜಮಾರ್ಗಕಾರನಿಗೂ ಹಿಂದಿನ ಕನ್ನಡದಲ್ಲಿ, ಪೂ. ಹ. ಗ. ದ ವೈಲಕ್ಷಣ್ಯ ಎಂದು ಹೇಳುವ ರೂಪಗಳಿಗಿಂತಲೂ ಹೆಚ್ಚಾಗಿ ಹಳಗನ್ನಡ ರೂಪಗಳೇ ಇವೆ. ಆದ್ದರಿಂದ ಅದನ್ನು ಹಳಗನ್ನಡವೆಂದೇ ಹೇಳಬಹುದು. (೩) ರೈಸ್‌ರವರು ಪೂ. ಹ. ಗ. ದ ದ್ವಿತೀಯಾ ವಿಭಕ್ತಿ ಪ್ರತ್ಯಯ 'ಅಂ' ಎಂದು ಹೇಳಿ—ಸ್ವರ್ಗಾಗ್ರಮಂ ಏಱಿದಾರ್, ದೇಗುಲಮಂ ಮಾಡಿದ, ಇದಂ ಅೞಿವೋಂ ಎಂಬ ಉದಾಹರಣೆಗಳನ್ನು ಕೊಟ್ಟಿದ್ದಾರೆ. ಹಳಗನ್ನಡದಲ್ಲಿ ದ್ವಿತೀಯಾ ವಿಭಕ್ತಿ ಪ್ರತ್ಯಯ 'ಅಂ' ಎಂದಿದ್ದಾರೆ. ಆದರೆ ಅವೇ ಶಾಸನಗಳಲ್ಲಿ ಎಲ್ಲಿಯೂ ಸರ್ವನಾಮಗಳಿಗೆ 'ಅಂ' ಪ್ರತ್ಯಯ ಹತ್ತಿಸಿರುವುದು ಕಾಣುವುದಿಲ್ಲ. ಅಂದರೆ ಅವಂ, ಅವಳ್ ಎಂಬ ರೂಪಗಳಿಲ್ಲ. ನಿಜ ಸ್ಥಿತಿಯಲ್ಲಿ ದ್ವಿತಿಯಾ ವಿಭಕ್ತಿ ಪ್ರತ್ಯಯ 'ಅಂ' ಎಂಬುದೇ ಸರಿಯಾದದ್ದು, 'ಅಂ' ಎಂಬುದು ಆಡುನುಡಿಯಲ್ಲಿ ರೂಢಿಯಲ್ಲಿದ್ದು ಕ್ವಚಿತ್ತಾಗಿ ಸಾಹಿತ್ಯದಲ್ಲಿ ಕಾಣಿಸಿಕೊಂಡಿದೆ.

ಮೇಲಿನ ಭಿನ್ನಾಭಿಪ್ರಾಯಗಳನ್ನು ಗಮನಿಸಿ ಕೈಪಿಡಿಕಾರರು ಹೇಳುವ ಸಿದ್ಧಾಂತ ಹೀಗಿದೆ:

ಹಳಗನ್ನಡಕ್ಕೆ ಮೊದಲು ಒಂದು ರೂಪ—ಅದು ಪೂ. ಹ. ಗ.—ಇತ್ತೆಂದು ಒಪ್ಪಬೇಕಾಗುತ್ತದೆ. ಏಕೆಂದರೆ ಹಳಗನ್ನಡದಲ್ಲಿ ಕಾಣಸಿಗದ ಶಬ್ದರೂಪಗಳೂ, ಹಳಗನ್ನಡ ವ್ಯಾಕರಣಕ್ಕೆ ಹೊಂದಿಕೊಳ್ಳದ ಪ್ರಯೋಗಗಳೂ ಇವೆ. ಇವು ತಮಿಳಿಗೆ ಹತ್ತಿರವಾಗಿ ಹೋಲುತ್ತವೆ. ಕಂದಮಿಳಿನಿಂದ ಕನ್ನಡ ಬೇರೆಯಾದ ನಂತರ ಕಾಲದ ರೂಪಗಳಲ್ಲಿ ಇವು ಕೆಲವು ಎನ್ನಬಹುದು. ಭಾಷೆ ಇದ್ದಕ್ಕಿದ್ದಂತೆ ಒಂದು ದಿನ

ಬದಲಾಗುವುದಿಲ್ಲ. ಆದ್ದರಿಂದ ಪೂ. ಹ. ಗ. ದ ಕಾಲಕ್ಕೂ ಹ. ಗ. ದ ಕಾಲಕ್ಕೂ ಗೆರೆ ಎಳೆಯುವುದು ಅಸಾಧ್ಯ. ರೈಸ್‌ರವರು ಹೇಳುವ ಕಾಲದಲ್ಲಿ ಪೂ. ಹ. ಗ. ವು ಹಳಗನ್ನಡಕ್ಕೆ ರೂಪಾಂತರ ಹೊಂದುತ್ತಿತ್ತು ಎನ್ನಬಹುದು. ಅದು ಪೂ. ಹ. ಗ. ದ ರೂಪಾಂತರ ಕಾಲ. ಒಟ್ಟಿನಲ್ಲಿ ಈ ಕೆಲವು ವೈಲಕ್ಷಣ್ಯಗಳನ್ನು ಗಮನಿಸಿ ಪೂರ್ವದ ಹಳಗನ್ನಡವಿತ್ತು ಎನ್ನಬಹುದು. ಆದರೆ ಎಂದಿನಿಂದ ಪ್ರಾರಂಭವಾಯಿತು ಎಂದು ಹೇಳುವುದು ಆಧಾರವಿಲ್ಲದ ಕಾರಣ ಸಾಧ್ಯವಿಲ್ಲ.

ಕೈಪಿಡಿಕಾರರ ವಾದಕ್ಕೆ ಸಮರ್ಥನೆಯಾಗಿ ಡಾ|| ಎ. ಎನ್. ನರಸಿಂಹಯ್ಯನವರ 'A Grammar of the Oldest Kanarese Inscriptions' ನಿಂದ ಸಾಕಷ್ಟು ಉದಾಹರಣೆಗಳನ್ನು ಕೊಡಬಹುದು. ಪೂರ್ವದ ಹಳಗನ್ನಡಕ್ಕೆ ಅವರ ಗ್ರಂಥವೇ ಆಧಾರ, ಸಮರ್ಥನೆಯೂ ಆಗಿದೆ.

**ಪೂರ್ವದ ಹಳಗನ್ನಡ** : ಪೂರ್ವದ ಹಳಗನ್ನಡ ಭಾಷೆಯ ಸ್ವರೂಪವನ್ನೂ ಕೆಲವು ವೈಶಿಷ್ಟ್ಯಗಳನ್ನೂ, ಅವು ಹೇಗೆ ಹಳಗನ್ನಡದಿಂದ ಭಿನ್ನ ಎಂಬುದನ್ನೂ ಮುಂದೆ ಗಮನಿಸಬಹುದು :

(೧) ದ್ವಿತೀಯಾ ವಿಭಕ್ತಿಯ ಪ್ರತ್ಯಯ 'ಆಱ್' ಎಂದು ದೀರ್ಘವಾಗಿದೆ. ಹಳಗನ್ನಡದಲ್ಲಿ 'ಅಱ್' ಎಂದಿದೆ. ಉದಾ : ಸ್ವರ್ಗಾಗ್ರಮರ್ಾಱ ಏಱಿದಾರ್, ಇದರ್ಾಱ ಅೞಿವೋಱ್, ಕೋಟಿಯರ್ಾಱ ರೋಹಿಸಿ.

(೨) ಷಷ್ಠೀ ವಿಭಕ್ತಿ ಪ್ರತ್ಯಯ ದೀರ್ಘ 'ಆ' ಆಗಿದೆ ; ಹಳಗನ್ನಡದಲ್ಲಿ 'ಅ' ಎಂದಿದೆ. ಉದಾ : ಏೞನೆಯಾ ನರಕದಾ ಪುೞು ಅಕ್ಕುಂ, ಇವರಾ ಮುದು ತಾಯ್ವಿರ್, ದೇವನಾ, ಭಟಾರರಾ, ಕಿಱಿಯಾ ಇತ್ಯಾದಿ.

(೩) ಸಪ್ತಮೀ ವಿಭಕ್ತಿ ಪೂ. ಹ. ಗ. ದಲ್ಲಿ 'ಉಳ್' ಎಂದು ; ಹಳಗನ್ನಡದಲ್ಲಿ 'ಒಳ್' ಆಗಿದೆ. ಉದಾ : ಕೞಿತ್ತೊಪ್ಪಿನಾ ವೆಟ್ಟದುಳ್, ಮೆಚ್ಚಿನಾನೀ ಧರಣಿಯುಳಿರವಾನೆನ್ದು, ವಾರಣಾಸಿಯುಳ್, ಪಡುವಣ ಕೆಱೆಯುಳ್.

(೪) ಆಖ್ಯಾತ ಪ್ರತ್ಯಯ ಏಕವಚನ ಒಱ್, ಆಱ್ ಎಂಬುದಾಗಿದೆ ; ಬಹುವಚನ ಒರ್, ಆರ್ ಎಂದು. ಹಳಗನ್ನಡದಲ್ಲಿ ಅಱ್, ಅರ್ ಎಂದಿದೆ. ಉದಾ : ದೇವಲೋಕಕ್ಕೆ ಸಂದರ್ಾಱ, ಮರಿಯಾದಿ ಕೊಟ್ಟಾಱ್, ಸೇಬೆಗೆ ವಿಟ್ಟಾರ್, ವೀರಲೋಕಕ್ಕೆ ಸಂದೋಱ್, ಸಾಸಿರ ಕವಿಲೆಯುಂ ಕೊಂದೋನ ಲೋಕಕ್ಕೆ ಸಂದೋಱ್, ಅಷ್ಟಶತಂ ಕ್ಷೇತ್ರಗೊಟ್ಟೊರ್, ತೆಂಕಣ ದಿಶೆ ಮಾಡಿದೊರ್ ಇತ್ಯಾದಿ.

(೫) ನಿಷೇಧ ಪ್ರತ್ಯಯ ಪೂ. ಹ. ಗ. ದಲ್ಲಿ ದೀರ್ಘ 'ಆ' ; ಹ. ಗ. ದಲ್ಲಿ 'ಅ'. ಉದಾ : ಸಿದ್ಧ ಸಮಯಮಂ ತಪ್ಪಾದೆ, ಕುಡಾದೋಱ್.

(೬) ನಪುಂಸಕಲಿಂಗದಲ್ಲಿ 'ಒದು' ಪ್ರಯೋಗ ಪೂ. ಹ. ಗ. ದಲ್ಲಿದೆ ; ಹ. ಗ. ದಲ್ಲಿ 'ಅದು' ಎಂದಾಗಿದೆ. ಉದಾ : ಇತ್ತೊದು, ಕೊಟ್ಟೊದು ; ವಿಟ್ಟದು ಎಂಬ ಪ್ರಯೋಗವೂ ಇದೆ.

(೭) ಪೂರ್ವದ ಹಳಗನ್ನಡದಲ್ಲಿ ಹಳಗನ್ನಡದ ಬಿಂದುವಿಗೆ ಬದಲಾಗಿ 'ನ' ಕಾರ ಪ್ರಯೋಗವಿದೆ. ಹಾಗೇ, ಅನುಸ್ವಾರ ಬಳಕೆಗಿಂತ ಹೆಚ್ಚಾಗಿ ಇತರೆಡೆ ವರ್ಗ ಪಂಚಮಾಕ್ಷರಗಳ ಪ್ರಯೋಗ ಕಾಣಬರುತ್ತದೆ. ಉದಾ: ಅರ್ವ, ಆದಿತ್ಯ, ಇವ್ವಿಬರ್ಸಿ, ನೋನ್ಪಿ, ಕೊನ್ದೋ೯, ಅವನ್ಗೆ ; ಅಜ್ಞ, ಬಿಜ್ಞ, ಚಞ್ಚಳ ಚಿತ್ತ, ಕೊಣ್ಡಾನ್, ಬನ್ದ ಇತ್ಯಾದಿ.

(೮) ವಿಧ್ಯರ್ಥದಲ್ಲಿ ಪೂ. ಹ. ಗ. ದಲ್ಲಿ ಗ, ಕ ಗಳ ಪ್ರಯೋಗವಿದೆ ; ಹಳಗನ್ನಡದಲ್ಲಿ ಗೆ, ಕೆ ಗಳಿವೆ. ಉದಾ : ಕೊಳ್ಗ, ಒಕ್ಕಲುಳ್ವೊತ್ತಿನ್ಮಕ್ಕಳ್ ಪುಟ್ಟಿಲ್ಕ, ರಕ್ಷಿಕ, ಕೆಡುಗ. (ಹೊಸಗನ್ನಡದಲ್ಲಿ ನಿಂದಿಸುವಾಗ: ಮನೆ ಹಾಳಾಗಿ ಹೋಗ, ಮನೆ ಕಾಯ್ವಾಗ—ಗಮನಿಸಿ.)

(೯) ಪೂ. ಹ. ಗ. ಶಬ್ದಗಳಲ್ಲಿ 'ವ' ಕಾರ ಹೆಚ್ಚು ; ಹ. ಗ. ದಲ್ಲಿ 'ಬ' ಕಾರ ಕಂಡುಬರುತ್ತದೆ. ಉದಾ : ಎನ್ವ, ವೆಟ್ಟ, ಉಣ್ವೋರ್, ವೆಳೆ, ವಿತ್ತು (ಬಿತ್ತು, ಹ. ಗ.), ವರೆ, ವಾಯ್.

(೧೦) ಪೂರ್ವದ ಹಳಗನ್ನಡದಲ್ಲಿ 'ಎ' ಇದ್ದು ಅದು ಹಳಗನ್ನಡದಲ್ಲಿ 'ಇ' ಆಗಿರುವುದನ್ನು ಗಮನಿಸಬಹುದು. ಉದಾ : ಎಱು (ಇಱು), ಎನೆಬ್ಬರುಂ, ಎನೆತುಮಂ ; ಇದರ್ಾ ಕಿಡಿಪೋ೯, ಇದೊನ್ ಕಿಡಿಪಿದೋ೯ ಎಂಬ ರೂಪಗಳೂ ಕಾಣಬರುತ್ತವೆ.

(೧೧) ದ್ವಿತ್ವ ಪ್ರಯೋಗ : ತಲೆಪ್ಪೊಱೆ, ಎಱೆತ್ತನಂ, ಬನ್ದಿದಿಗ್ಗೊ೯ಣ್ಟುಯೆ ಇತ್ಯಾದಿ.

ಸಂದರ್ಾ, ಒಕ್ಕಲುಳ್, ತಪ್ಪಾದೆ, ವಿಟ್ಟುದು, ಕೆಡುಗ, ಎಱೆ, ತಲೆಕ್ಕಾಡು ಶಬ್ದಗಳು ಹಳಗನ್ನಡದಲ್ಲಿ ಇಲ್ಲ. ಇವು ತಮಿಳಿಗೆ ಹತ್ತಿರವಾಗಿವೆ ಎಂಬುದನ್ನು ಗಮನಿಸಬೇಕು. ಇನ್ನೂ ಕೆಲವು ಉದಾಹರಣೆ : ಆಗ (ಪೂ.ಹ.ಗ.)—ಆಗ (ತ)—ಆಗುಗೆ (ಹ. ಗ.) ; ಇಲ್ಲೆ—ಇಲ್ಲೈ (ತ)—ಇಲ್ಲ ; ವೈಕೊನ್ತವಾಸಿಯಕ್ಕುಂ ಎಂಬಲ್ಲಿ ವೈಕೊನ್ತ—ವೈಗುನ್ದಂ (ತ)—ವೈಕುಂಠ (ತತ್ಸಮ) ; ಅಱಿತ್ತೋ೯— ಅಱಿತ್ತೋ೯ (ತ) ಅಱಿದಂ (ಹ. ಗ.) ; ಅಱಿರ್ವ (ಮ. ಪುರುಷ ಬಹುವಚನ ವಿಧ್ಯರ್ಥ)—ಅಱಿರ್ವಿ (ತ)—ಅಱಿಯಿಂ (ಹ. ಗ.). ಈ ಉದಾಹರಣೆಗಳಿಂದ ಹಳಗನ್ನಡದಿಂದ ಹಿಂದಕ್ಕೆ ಹೋದಂತೆಲ್ಲ ಕನ್ನಡ ತಮಿಳಿಗೆ ಹತ್ತಿರವಾಗುತ್ತದೆ ಎಂಬುದು ಸ್ಪಷ್ಟವಾಗುತ್ತದೆ.

**ಹಳಗನ್ನಡ** : ಹಿಂದೆಯೆ ಹೇಳಿದಂತೆ ಕಿಟೆಲ್‌ರು ಪೂ. ಹ. ಗ. ವನ್ನು ಒಪ್ಪದೆ ಪ್ರಾಚೀನ ಕನ್ನಡವನ್ನು ಮಾತ್ರ ಹೇಳಿದ್ದಾರೆ. ಅದು ಹಳಗನ್ನಡಕ್ಕೆ ಸಮಾನ ವಾಗುತ್ತದೆ. ಕವಿರಾಜಮಾರ್ಗಕಾರನ ಕಾಲಕ್ಕೆ ಶಿಷ್ಟವರ್ಗದವರಿಂದ ರಾಜಾಸ್ಥಾನ ಗಳಲ್ಲಿ ಮನ್ನಣೆ ಪಡೆದು ಹೊಸಗನ್ನಡವೆನಿಸಿಕೊಂಡದ್ದೆ ನಾವು ಇಂದು ಹಳಗನ್ನಡ ವೆನ್ನುವುದು. ಸುಪ್ರಸಿದ್ಧ ಪಂಪ, ರನ್ನ, ಜನ್ನ ಮೊದಲಾದ ಜೈನ ಚಂಪೂಕವಿಗಳು ಬಳಸಿದ ಭಾಷೆ ಅದು. ಅವರು ಸಂಸ್ಕೃತ ಕನ್ನಡಗಳೆರಡರಲ್ಲಿಯೂ ಪರಿಣಿತರಾಗಿದ್ದು ಹಳಗನ್ನಡಕ್ಕೆ ಮೆರುಗನ್ನು ಚೆಲುವನ್ನು ತಂದುಕೊಟ್ಟರು. ಸು. ೧೦ ನೇ ಶ. ದಿಂದ ೧೩ ನೇ ಶ. ದವರೆಗಿನ ಕಾವ್ಯಗಳಲ್ಲಿ ಹಳಗನ್ನಡ ಉಳಿದುಬಂದಿದೆ. ವ್ಯಾಕರಣ ಗ್ರಂಥಗಳೂ ರಚಿತವಾಗಿವೆ. ರನ್ನ ಮತ್ತು ನಯಸೇನರ ವ್ಯಾಕರಣ ಗ್ರಂಥಗಳು ಸಿಕ್ಕಿಲ್ಲ. ಎರಡನೇ ನಾಗವರ್ಮ, ಕೇಶಿರಾಜ, ಭಟ್ಟಾಕಲಂಕರ ಕೃತಿಗಳು ಹಳಗನ್ನಡ ವ್ಯಾಕರಣವನ್ನು ಪ್ರತಿಪಾದಿಸುತ್ತವೆ. ಕೇಶಿರಾಜನ 'ಶಬ್ದಮಣಿ ದರ್ಪಣ' ಅತ್ಯಂತ ಪ್ರಾಮಾಣಿಕವೂ ಪ್ರಯೋಗ ಬಾಹುಲ್ಯವನ್ನು ಹೊಂದಿರುವುದೂ ಆಗಿದೆ.

ಸಂಸ್ಕೃತ ಪ್ರಭಾವ, ಕಂದ ವರ್ಣವೃತ್ತಗಳು, ಅಲ್ಲಲ್ಲಿ ಗದ್ಯ, ಅಪರೂಪಕ್ಕೆ ಕನ್ನಡ ಛಂದಸ್ಸಿನ ಅಕ್ಕರ, ತ್ರಿಪದಿಗಳುಳ್ಳ ಚಂಪೂಶೈಲಿ, ಇಂದು ಕಣ್ಮರೆಯಾಗಿರುವ ವಿಭಕ್ತಿ ಪ್ರತ್ಯಯಗಳು, ರೂಢ ಮೂಲವಾದ ತದ್ಭವಗಳು, ಱ, ಳ, ಲ, ರ, ೞ ಗಳ ಪ್ರಯೋಗದಲ್ಲಿ ಸ್ಪಷ್ಟ ಅರಿವು ಇತ್ಯಾದಿ ಹಳಗನ್ನಡ ಕಾವ್ಯಗಳ ವೈಶಿಷ್ಟ್ಯವೆನ್ನ ಬಹುದು.

(೧) ರೇಫೆ—ಱ ಕಾರಗಳ ಬಳಕೆಯಲ್ಲಿ ಅರ್ಥ ವ್ಯತ್ಯಾಸದ ಖಚಿತ ಅರಿವು ಕಂಡುಬರುತ್ತದೆ :

| | | |
|---|---|---|
| ಅಱಿ=ತಿಳಿ | ಅರಿ=ಕತ್ತರಿಸು | |
| ಅಱೆ=ಬಂಡೆ | ಅರೆ=ಪುಡಿಮಾಡು | |
| ಎಱೆ=ಸುರಿ | ಎರೆ=ಬೇಡು | |
| ಪಱೆ=ಹರೆ, ನಗಾರಿ | ಪರೆ=ಚರ್ಮದ ಹೊದಿಕೆ | |
| ಪೊಱೆ=ಭಾರ | ಪೊರೆ=ಕಾಪಾಡು | ಇತ್ಯಾದಿ. |

(೨) ಕುಳ ಮತ್ತು ೞ ಕಾರದಲ್ಲಿನ ಅರ್ಥ ವ್ಯತ್ಯಾಸ :

| | |
|---|---|
| ಆೞ್=ಮುಳುಗು | ಆಳ್=ಮನುಷ್ಯ, ಸೇವಕ |
| ಉೞಿ=ಹೆಚ್ಚಾಗು, ಶೇಷ | ಉಳಿ=ಉಪಕರಣ, ಸಾಧನ |
| ತೞಿ=ಸೌದೆ | ತಳಿ=ಎರಚು |
| ಬಾೞ್=ಬದುಕು | ಬಾಳ್=ಕತ್ತಿ |
| ಬಾೞೆ=ಬಾಳೆಹಣ್ಣು | ಬಾಳೆ=ಬಾಳೆ ಮೀನು |
| ಪೊೞೆ=ನದಿ | ಹೊಳೆ=ಪ್ರಕಾಶಿಸು ಇತ್ಯಾದಿ. |

(೩) ವ್ಯಂಜನಾಂತ ಶಬ್ದಗಳ ಆಧಿಕ್ಯ :

ಮೆಯ್, ನೆಯ್, ಬಯ್
ನಾರ್, ಬೇರ್, ಉಸಿರ್
ಪಾಲ್, ಕಲ್, ನೆಲ್
ಪವಣ್, ನಾಣ್, ಪುಣ್
ಪೊನ್, ಜೇನ್, ಬಾನ್
ಬೆಳ್, ಕರುಳ್, ಕುರುಳ್, ಮುಗುಳ್
ಬಸಿಱ್, ನೇಸಱ್, ಕೆಸಱ್, ಏಱ್

(೪) ಹಳಗನ್ನಡ ಕಾಲಕ್ಕಾಗಲೇ ಬಿಂದು ಸಹಿತವಾದ ಶಬ್ದಗಳಲ್ಲಿ ಕೆಲವಾದರೂ ವಿಕಲ್ಪ ಪ್ರಯೋಗ ಹೊಂದಿದ್ದುವು. ಅಂದರೆ ಅಬಿಂದುಕವಾಗತೊಡಗಿದ್ದುವು. ಹೊಸಗನ್ನಡದಲ್ಲಂತೂ ಅನುಸ್ವಾರ ಪೂರ್ಣ ಬಿಟ್ಟುಹೋಗಿದೆ, ಆ ಶಬ್ದಗಳಲ್ಲಿ. ಸಬಿಂದುಕ ಶಬ್ದಗಳಿಗೆ ಉದಾ : ಬೆಡಂಗು, ಕೊಡಂತಿ, ಎಱಂಕೆ, ದಾಂಟು, ಮೀಂಟು, ಸೊರಂಟು, ಒಱಂಟು, ಕರಂಡಗೆ, ಬಣಂಜು, ನಾಂದು, ಕಡುಂಬು, ತೋಂಟ ಇತ್ಯಾದಿ.

(೫) ಪದಾದಿಯ ವ ಕಾರವು 'ವ' ಆಗಿಯೇ ಉಳಿಯುತ್ತದೆ. ಹೊಸಗನ್ನಡದಲ್ಲಿ ಅವು ಬ ಕಾರವಾಗಿವೆ : ವಿಲ್, ವರೆ, ವಾಯ್ ಇತ್ಯಾದಿ. ವ>ಬ ಆಗುವ ಕ್ರಿಯೆ ಪೂ. ಹ. ಗ. ಕಾಲದಲ್ಲಿಯೇ ಆರಂಭವಾದಂತೆ ತೋರುತ್ತದೆ.

(೬) ಹಳಗನ್ನಡ ಕಾಲಕ್ಕೆ ಪ>ಹ ವಾಗತೊಡಗಿತ್ತು. ಪ ಕಾರ ಶಬ್ದಗಳು ಇದ್ದುವು. ಆದರೆ ಹೊಸಗನ್ನಡದಲ್ಲಿ ಅವೆಲ್ಲ ಹ ಕಾರವಾಗಿವೆ. ಕೇಶಿರಾಜ 'ವ-ಮ ಹ-ಪ ಭೇದ'ವನ್ನು ಹೇಳಿದ್ದಾನೆ (ತಿರುಗು ಮುರುಗಾಗಿ ಹೇಳಿರುವುದಾಗಿದೆ). ಅಂದರೆ ಮ>ವ, ಪ>ಹ ಆಗುವುದು. ಉದಾ : ತಾಮರೆ-ತಾವರೆ, ಸಾಮಂತಂ-ಸಾವಂತಂ, ತೆಮರ್-ತೆವರ್ ಇತ್ಯಾದಿ. ಪ>ಹ ಆಗುವುದು ನಡುಗನ್ನಡ ಕಾಲಕ್ಕೆ ವ್ಯಾಪಕವಾಗಿ ನಡೆಯಿತು. ಕೇಶಿರಾಜ ಇದನ್ನು 'ದೇಶಿಯೊಳ್ ಚೆಲ್ವು' ಎಂದಿದ್ದಾನೆ. ಈ ಧ್ವನಿ ಪರಿವರ್ತನೆಗೆ ಸಮಂಜಸವಾದ ಕಾರಣಗಳನ್ನು ಕೊಡಲು ಸಾಧ್ಯವಾಗಿಲ್ಲ. 'ಪ್ರಾಕೃತ ಭಾಷಾ ಸಂಸರ್ಗದಿಂದ ಕನ್ನಡ ಭಾಷೆಯಲ್ಲೂ ಪಕಾರ ಹಕಾರವಾಗುವ ಪರಿಸ್ಥಿತಿ ಉಂಟಾಯಿತು' ಎಂದು ಕೈಪಿಡಿಕಾರರು ಊಹಿಸಿದ್ದಾರೆ. ಮರಾಠಿ ಪ್ರಭಾವ ಕಾರಣವಿರಬಹುದೆಂದು ಇನ್ನೊಂದು ಊಹೆ ಇದೆ. ಆದರೆ ಆಗಿನ್ನೂ ಮರಾಠಿ ಪ್ರಭಾವಶಾಲಿ ಭಾಷೆಯಾಗಿ ಅಸ್ತಿತ್ವ ಹೊಂದಿರಲಿಲ್ಲ. ಜೈನ ಸಮಾಜದ ಭಾಷೆಯಲ್ಲಿನ ಮಹಾಪ್ರಾಣ ಉಚ್ಚಾರಣೆಯಿಂದ ಪ>ಫ>ಹ ಎಂದಾಗಿರುವ ಸಾಧ್ಯತೆ ಹೆಚ್ಚು.

*

ಪಕಾರ ಹಕಾರವಾಗಿದ್ದರೂ, ಙ-ಞಗಳಂತೆ ಸಂಪೂರ್ಣ ಬಿಟ್ಟುಹೋಗದೆ, ಪಕಾರವೂ ಉಳಿದುಬಂದಿದೆ. ಅಲ್ಲದೆ, ಸಂಸ್ಕೃತ ಶಬ್ದಗಳ ಆದಿಯ ಪ>ಹ ಆಗಿಲ್ಲ. ಉದಾ : ಪಿತ, ಪ್ರಾಂತ, ಪತ್ತನ, ಪಾಲನೆ, ಪದರ ಇತ್ಯಾದಿ. ಕನ್ನಡ ಶಬ್ದಗಳ ಆದಿಯ ಪ>ಹ ಆಗಿದೆ ಉದಾ : ಪಾರ್ವ>ಹಾರುವ, ಪಳ್ಳಿ>ಹಳ್ಳಿ, ಪೊಡೆ>ಹೊಡೆ, ಪುಲ್>ಹುಲ್ಲು, ಪಿಟ್ಟು>ಹಿಟ್ಟು, ಪಗಲ್>ಹಗಲು, ಪೋಗು>ಹೋಗು ಪರಿಯಣ>ಹರಿವಾಣ, ಪರಕೆ>ಹರಕೆ, ಪಲವು>ಹಲವು, ಪಗೆ>ಹಗೆ, ಪುಟ್ಟು ಹುಟ್ಟು ಇತ್ಯಾದಿ.

ಪದಾಂತ್ಯದ ಪಕಾರವೂ ಹಕಾರವಾಗಿದೆ. ಉದಾ : ಬಿನ್ನಪ>ಬಿನ್ನಹ, ಕುರುಪು>ಕುರುಹು, ಕಾಪು>ಕಾಹು ಇತ್ಯಾದಿ. ಪರೆಪು>ಹರಹು ಎಂಬಲ್ಲಿ ಆದಿ ಅಂತ್ಯ ಎರಡೂ ಕಡೆ ಆಗಿದೆ. ಸಂಸ್ಕೃತವನ್ನು ತದ್ಭವ ಮಾಡಿದಾಗ ಆದಿಯ 'ಪ'>ಹ ಆಗಿದೆ. ಉದಾ: ಪ್ರಾಯ>ಹರಯ, ಪ್ರಾಣ>ಹರಣ, ಫಲಕ>ಹಲಗೆ, ಪ್ರಣತಿ>ಹಣತೆ ಇತ್ಯಾದಿ.

ದ್ವಿತ್ವ ಪಕಾರ ಹಕಾರವಾಗಿಲ್ಲ. ಉದಾ : ಕಪ್ಪು, ಉಪ್ಪು, ಒಪ್ಪು, ಗುಪ್ಪೆ, ಚಿಪ್ಪು ಇತ್ಯಾದಿ.

ಕೆಲವು ಕನ್ನಡ ಶಬ್ದಗಳು ಪಕಾರವಾಗಿಯೇ 'ಪಟ್ಟು' ಹಿಡಿದು ಉಳಿದಿವೆ: ಪಗದಿ (ತೆರಿಗೆ) ಪಡೆ (ಹೊಂದು), ಪನ್ನೀರು, ಪರೆ (ಹಾವಿನ ಚರ್ಮ), ಪೋಣಿಸು, ಪಾಚಿ, ಪಾತಿ, ಪಾಪ (ಮಗು), ಪಾಲು (ಭಾಗ, ಹಿಸ್ಸೆ), ಪೀಚು ಇತ್ಯಾದಿ. ಇದಕ್ಕೆ ಕಾರಣ ಆ ಶಬ್ದಗಳಿಗೆ ಎರಡು ಅರ್ಥ ಇದ್ದು, ಒಂದು ಅರ್ಥದ್ದು ಹಕಾರವಾಗಿ (ಪಾಲು>ಹಾಲು) ಇನ್ನೊಂದು ಅರ್ಥದ್ದು ಹಾಗೇ ಉಳಿದಿರಬಹುದು.

(೭) ಇವುಗಳೇ ಅಲ್ಲದೆ, ಪೂ.ಹ.ಗದ ಶಬ್ದಾಂತ್ಯದ 'ನ್' ಹಳಗನ್ನಡದಲ್ಲಿ ಬಿಂದು ಪಡೆಯುವುದನ್ನು ಕಾಣಬಹುದು. ಆನ್–ಆಂ, ನಾನ್–ನಾಂ, ಬಂದನ್–ಬಂದಂ, ಅರಸಂ, ಮರಂ, ಕುಲಮಂ, ನೋಡುವೆಂ, ಮಾಡುವೆಂ ಇತ್ಯಾದಿ. ಇವೆಲ್ಲ ನಡುಗನ್ನಡ ಹೊಸಗನ್ನಡಗಳಲ್ಲಿ ಸ್ವರಾಂತವಾದುವು.

**ನಡುಗನ್ನಡ :** ರೈಸ್‌ರವರು ನಡುಗನ್ನಡವನ್ನು ಹೇಳಿಲ್ಲ. ಕಿಟೆಲ್ ಹೇಳಿದ್ದಾರೆ. ೧೪ ನೇ ಶತಮಾನದಿಂದ ಹೊಸಗನ್ನಡ ತೊಡಗಿತು ಎನ್ನುತ್ತಾರೆ. ಕಿಟೆಲ್‌ರವರು ಹಳಗನ್ನಡ ಹೊಸಗನ್ನಡ ನಡುವಿನ ಅವಧಿಯನ್ನು ನಡುಗನ್ನಡವೆಂದು ವಿಭಾಗಿಸಿದ್ದಾರೆ. ಭಾಷೆ ನಿರ್ದಿಷ್ಟಕಾಲಕ್ಕೆ ಒಮ್ಮೆಗೇ ಬದಲಾಗುವುದಿಲ್ಲ. ಹಳಗನ್ನಡ ಆಸ್ಥಾನ ಭಾಷೆಯಾಗಿ ವಿದ್ವಾಂಸರಲ್ಲಿ ಪ್ರಚಲಿತವಾದಾಗ ಜೊತೆಜೊತೆಗೇ ಜನಸಾಮಾನ್ಯರ ಭಾಷೆ ಪರಿವರ್ತನೆ ಹೊಂದುತ್ತಿತ್ತು. ಜನ ತಮ್ಮ ಆಡುನುಡಿಯಲ್ಲಿ ಕಾವ್ಯ ರಚಿಸುತ್ತಿದ್ದಿರಬೇಕು. ಆದರೆ ಈ ಜಾನಪದ ಕಾವ್ಯಗಳು ಶಿಷ್ಟರ ಸಮ್ಮತಿ ಪಡೆಯದ ಕಾರಣ, ಗ್ರಂಥಸ್ಥವಾಗದೆ ನಷ್ಟವಾದುವು. ನಾಗವರ್ಮನ

ಕಾಲಕ್ಕೆ ಜನಸಾಮಾನ್ಯರಲ್ಲಿ ಪದ, ಪಾಡು, ಮೆಲ್ವಾಡು, ಬಾಜನೆಗಬ್ಬಗಳು ಇದ್ದು ವೆಂದು ಅವನಿಂದಲೇ ತಿಳಿದುಬರುತ್ತದೆ. ಹರಿಹರನ ಕಾಲಕ್ಕೆ ಅಟಿ ಕುಳ ಕ್ಷಳಗಳ ಗೊಂದಲ ಇತ್ತು. ಆದ್ದರಿಂದ ಹಳಗನ್ನಡದಲ್ಲಿ ಕಾವ್ಯರಚನೆಯಾಗುತ್ತಿದ್ದ ಕಾಲದಲ್ಲಿ ನಡುಗನ್ನಡದ ಸೂಚನೆಗಳು ಕಂಡುಬಂದು ವೀರಶೈವ ವಚನಕಾರರ ಕಾಲಕ್ಕೆ ಜನಸಾಮಾನ್ಯರ ಜೀವಂತ ಭಾಷೆ, ಛಂದಸ್ಸುಗಳು ಕಾವ್ಯದಲ್ಲಿ ಮನ್ನಣೆ ಪಡೆಯ ತೊಡಗಿದುವು. ಹೀಗೆ ವಚನ, ಷಟ್ಪದಿ, ತ್ರಿಪದಿ ಪ್ರತಿಷ್ಠಿತವಾದುವು. ಛಂದಸ್ಸಿಗೆ ತಕ್ಕ ಭಾಷೆಯೂ ರೂಪುಗೊಂಡಿತು. ಸಂಸ್ಕೃತ ಪ್ರಭಾವ ಹಿಂಜರಿದು ದೇಶೀ ಸರಳತೆ ಮುನ್ನೆಲೆಗೆ ಬಂದಿತು. ಹಳಗನ್ನಡದ ಚಂಪೂಶೈಲಿಯ ಕಾವ್ಯಗಳು 'ವಸ್ತುಕ' ಎನಿಸಿಕೊಂಡರೆ ದೇಶೀ ಮೂಲಕೃತಿಗಳು 'ವರ್ಣಕ' ಎಂಬ ಹೆಸರು ಪಡೆದುವು. ನಡುಗನ್ನಡ ಕಾಲಕ್ಕೆ ಆಸ್ಥಾನಗಳ ಪ್ರಭಾವ ಇಳಿಮುಖವಾಯಿತು. ರಾಜಾಶ್ರಯ ವಿಲ್ಲದಿದ್ದರೂ ಸಮಾಜದ ಬೆಂಬಲದಿಂದ ಪ್ರಸಿದ್ಧರಾದ ಕವಿಗಳು ಕೃತಿ ರಚನೆಗೆ ಮಾರ್ಗದರ್ಶಿಗಳಾದರು. ಚಂಪೂವಿನ ಸ್ಥಾನದಲ್ಲಿ ಷಟ್ಪದಿ ವಿಜೃಂಭಿಸತೊಡಗಿತು. ದೇಶಿ ನಡುಗನ್ನಡದ ಸಂಕೇತವಾಯಿತು.

ಹಳಗನ್ನಡದಲ್ಲಿದ್ದ ವ್ಯಂಜನಾಂತ ಶಬ್ದಗಳು ನಿತ್ಯವಾಗಲ್ಲದಿದ್ದರೂ ಬಹುವಾಗಿ ನಡುಗನ್ನಡದಲ್ಲಿ ಸ್ವರಾಂತವಾಗತೊಡಗಿದುವು. ಉದಾ: ಬೇಡು, ನೋಡು, ಮಾಡು, ಮೂಡು, ಪಗಲು, ಇರುಳು, ಬೆಮರು, ಮಣಲು, ಮುಗಿಲು ಇತ್ಯಾದಿ. ಪುಲ್ಲು, ಕಲ್ಲು, ಆಳು, ಮಗಳು ಮುಂತಾದ ಕೆಲವು ಶಬ್ದಗಳು ಸ್ವರಾಂತವಾಗಿ ಪೂ.ಹ.ಗ.ದಲ್ಲಿಯೇ ಸಿಕ್ಕುತ್ತವೆ. ಅಂದರೆ ವ್ಯಂಜನಾಂತ ಶಬ್ದಗಳು ಸ್ವರಾಂತ ವಾಗುವ ಪ್ರವೃತ್ತಿ ಬಹು ಹಿಂದಿನಿಂದಲೇ ಪ್ರಾರಂಭವಾಯಿತು ಎನ್ನಬಹುದು. ವ್ಯಂಜನಾಂತಗಳಿಗೆ 'ಉ' ಸೇರುವುದು ನಡುಗನ್ನಡದಲ್ಲಿ ಹೆಚ್ಚಾಯಿತು. ಒಂದೇ ಸ್ವರವಿದ್ದ ಯಕಾರಾಂತ ಶಬ್ದಗಳು ಇಕಾರಾಂತವಾದುವು. ಉದಾ: ಕಾಯಿ, ತಾಯಿ, ನಾಯಿ, ಬಾಯಿ (<ಕಾಯ್, ತಾಯ್, ನಾಯ್, ಬಾಯ್). ಹಾಗೇ ಅಕಾರ ಎಕಾರಗಳ ಮುಂದಿನ 'ಯ್'ಕಾರವು 'ಐ'ತ್ವ ಪಡೆಯಿತು. ಉದಾ: ಕಯ್–ಕೈ, ಮೆಯ್–ಮೈ. ಲಕಾರಾಂತ ಶಬ್ದಗಳಿಗೂ ಇಕಾರ ಸೇರಿತು. ಉದಾ: ಒಲ್–ಒಲಿ, ಕಲ್–ಕಲಿ, ಬಲ್–ಬಲಿ ಇತ್ಯಾದಿ. ಕೇಶಿರಾಜ "ಕೆಲವು ನಿಜಬಿಂದು ಗಳ್ ಕೆಲಕೆಲವು ವಿಕಲ್ಪಾರ್ಥ ಬಿಂದುಗಳ್" ಎಂದು ಪಟ್ಟಿ ನೀಡುತ್ತಾನೆ. ಸಬಿಂದುಕ ಶಬ್ದಗಳು ಅವನ ಕಾಲಕ್ಕೇ ಅಬಿಂದುಕವಾಗುತ್ತಿದ್ದುವು ಎಂಬುದು ಸ್ಪಷ್ಟ. ಉದಾ: ಕದಂಪು–ಕದಪು, ಇಱುಂಪೆ–ಇರುಪೆ, ಬೆಳಂತಿಗೆ–ಬೆಳತಿಗೆ, ಇಱುಂಕಿದಂ–ಇಱುಕಿದಂ, ತುಳುಂಕಿದಂ–ತುಳುಕಿದಂ, ಮುಸುಂಕಿದಂ–ಮುಸುಕಿದಂ, ಕುಸುಕು. ತುಡುಕು, ಪುಡುಕು, ಬರ್ದುಕು, ಮುಱುಗು, ಜಿನುಗು, ಮಲಗು, ದಾಟು, ಮೀಟು, ತೋಟ, ಬೆಡಗು, ಅಡಗು, ತೊಡಕು. ಹೀಗೆ ಸಬಿಂದುಕ ಶಬ್ದಗಳು ಅಬಿಂದುಕವಾಗಲು ಕಾರಣ ಬಹುಶಃ ಮೂಲದ್ರಾವಿಡದಲ್ಲಿ ಅವು ನಾಸಿಕೋಚ್ಚಾರದಿಂದ ಕೂಡಿದು

ವಾಗಿರಬೇಕು; ಅವು ತಮಿಳು–ಕನ್ನಡಗಳಲ್ಲಿ ಅನುಸ್ವಾರವಾದರೆ, ತೆಲುಗಿನಲ್ಲಿ ಅರ್ಧಾನುಸ್ವರ ಶಬ್ದಗಳಾದುವು. ಕಾಲಕ್ರಮೇಣ ಕನ್ನಡದಲ್ಲಿ ಮತ್ತೆ ಅವು ಬಿಂದು ಕಳೆದುಕೊಂಡುವು. ಆದರೂ ಆಡುನುಡಿಯಲ್ಲಿ ಕೆಲವೊಮ್ಮೆ ಅರ್ಧಾನುಸ್ವಾರ ಯುಕ್ತವಾಗಿ ಉಚ್ಚಾರವಾಗುವುದುಂಟು. ಉದಾ: ಬೇಟೆ–ಬ್ಯಾ(ಟೆ, ಕೋಟೆ–ಕ್ವಾ(ಟೆ. ಅಲ್ಲದೆ ಸಮಾಸಗಳಲ್ಲಿದ್ದ ಬಿಂದುವೂ ಲೋಪವಾಗತೊಡಗಿತು. ಪುಟ್ಟುಂಗುರುಡಂ > ಹುಟ್ಟುಗುರುಡ (ಹೊ.ಸ.), ತೂಗುಂದೊಟ್ಟಿಲ್ > ತೂಗುದೊಟ್ಟಿಲು (ಹೊ.ಗ.).

ಪದಗಳ ಅಂತ್ಯದ ನಕಾರ ಉಕಾರಕ್ಕೆ ತಿರುಗಿ ನಡುಗನ್ನಡ ವೇಳೆಗೆ ಸ್ವರಾಂತವಾಗತೊಡಗಿತು. ಹಾಗೇ ವ>ಬ ಆಗುವ ಪ್ರವೃತ್ತಿ ಹಳಗನ್ನಡ ಕಾಲಕ್ಕೇ ತೊಡಗಿ ನಡುಗನ್ನಡದಲ್ಲಿ ಹೆಚ್ಚಾಯಿತು. ಇತರ ದ್ರಾವಿಡ ಭಾಷೆಗಳನ್ನು ಗಮನಿಸಿದರೆ, ತಮಿಳು ಮಲೆಯಾಳಗಳಲ್ಲಿ ವಕಾರವಿರುವ ಶಬ್ದಗಳು ಹಳಗನ್ನಡದಲ್ಲೇ ಬಕಾರಯುಕ್ತವಾಗಿರುವುದು ಸ್ಪಷ್ಟವಾಗುತ್ತದೆ. ವರೈ (ತ) – ವರೆ (ಮ) – ಬರೆ (ಹ.ಗ), ವರು–ವರು–ಬರ್, ವಲೈ–ವಲೆ–ಬಲೆ, ವಾಯಿಲ್–ವಾದಿಲ್–ಬಾಗಿಲ್, ವಾಙ್ಗು–ವಾಙ್ಙು–ಬಾಗು, ವಾನ್–ವಾನ್–ಬಾನ್, ವಾಳ್–ವಾಳ್–ಬಾಳ್, ವೀಡು–ವೀಡು–ಬೀಡು ಇತ್ಯಾದಿ.

ಪೂರ್ವದ ಹಳಗನ್ನಡ, ಹಳಗನ್ನಡಗಳಲ್ಲಿಯ ವಿಜಾತೀಯ ಸಂಯುಕ್ತಾಕ್ಷರಗಳು ನಡುಗನ್ನಡ ಕಾಲಕ್ಕೆ ನಡುವೆ ಸ್ವರ ಸೇರಿ ವಿರಳವಾಗಿರುವುದುಂಟು. ಇದನ್ನು ಸ್ವರಭಕ್ತಿ (Anaptyxis) ಕಾರ್ಯ ಎನ್ನುತ್ತಾರೆ. ಉದಾ: ಬಳ್ಕು–ಬಳುಕು, ಅಳ್ಕು–ಅಳುಕು, ನುಣ್ಪು–ನುಣುಪು, ಬಲ್ಮೆ–ಬಲುಮೆ, ನಲ್ಮೆ–ನಲುಮೆ. ಕೆಲವೆಡೆ ವಿಜಾತೀಯ ಸಂಯುಕ್ತಾಕ್ಷರಗಳು ದ್ವಿತ್ವವಾಗಿವೆ. ಉದಾ: ಉರ್ಕು–ಉಕ್ಕು, ಸೊರ್ಕು–ಸೊಕ್ಕು, ಕಟ್ತಲೆ–ಕತ್ತಲೆ, ಮುಟ್ತು–ಮುತ್ತು, ತಪ್ಪಿಲ್–ತಪ್ಪಲು ಇತ್ಯಾದಿ.

**ಹೊಸಗನ್ನಡ:** ಸುಮಾರು ಕ್ರಿ.ಶ. ೧೬ ನೇ ಶತಮಾನದ ವೇಳೆಗೆ ನಡುಗನ್ನಡ ಈಗಿನ ಕನ್ನಡ ರೂಪಕ್ಕೆ ತಿರುಗಿತ್ತೆಂದು ಹೇಳಬಹುದು. ಅಂದರೆ ಹೊಸಗನ್ನಡದ ಹೆಚ್ಚು ಲಕ್ಷಣಗಳು ಸ್ಪಷ್ಟವಾಗತೊಡಗಿದುವು. ಈ ಬದಲಾವಣೆಗಳನ್ನು ದಾಸರ ಕೀರ್ತನೆಗಳಲ್ಲಿ ಗುರುತಿಸಬಹುದು. ಹಳಗನ್ನಡ ನಡುಗನ್ನಡ ನಾಮಪದಗಳೂ, ಧಾತುರೂಪಗಳೂ ಕಣ್ಮರೆಯಾಗತೊಡಗಿದುವು. ಎಷ್ಟೋ ವೇಳೆ ಪ್ರತ್ಯಯಗಳ ಬಳಕೆಯೂ ಕಡಮೆಯಾಗತೊಡಗಿತು. ಅಲ್ಲದೆ, ಕೆಲವೊಮ್ಮೆ ಹಳೆಯ ಪ್ರತ್ಯಯಗಳ ಸ್ಥಾನದಲ್ಲಿ ರೂಪಾಂತರ ಹೊಂದಿದ ಹೊಸ ಪ್ರತ್ಯಯಗಳು ಕಾಣಿಸಿಕೊಂಡುವು. ಮರಾಠಿ ಹಿಂದೂಸ್ಥಾನಿ ಶಬ್ದಗಳ ಸೇರ್ಪಡೆ ಹೆಚ್ಚಿತು. ಆಡುನುಡಿಯ ಪ್ರಭಾವ ಗ್ರಾಂಥಿಕ ಭಾಷೆಯ ಮೇಲೆ ಹೆಚ್ಚಾಯಿತು. ಮೈಸೂರು ಅರಸರ ಕಾಲದಲ್ಲಿ,

ಅನಂತರ ಬ್ರಿಟಿಷರ ಕಾಲದಲ್ಲಿ ಶಾಸ್ತ್ರ, ಧರ್ಮ, ಸಂಸ್ಕೃತಿಗಳಲ್ಲಿನ ಅಮೂರ್ತ ವಿಷಯ ಗಳನ್ನು ವಿವರಿಸುವಾಗ ಸಂಸ್ಕೃತ ಶಬ್ದಗಳನ್ನು ಬಳಸುವುದು ರೂಢಿಗೆ ಬಂದಿತು. ಹೊಸಗನ್ನಡ ಪ್ರದೇಶದಿಂದ ಪ್ರದೇಶಕ್ಕೆ ವ್ಯತ್ಯಾಸ ಹೊಂದುವುದನ್ನೂ ಗಮನಿಸ ಬಹುದು. ಹೈದರಾಬಾದು ಕರ್ನಾಟಕ ಪ್ರದೇಶದಲ್ಲಿ ಉರ್ದುವಿನ ಪ್ರಭಾವ, ಮುಂಬಯಿ ಕರ್ನಾಟಕ ಪ್ರದೇಶದಲ್ಲಿ ಮರಾಠಿ ಪ್ರಭಾವವನ್ನು ಕಾಣಬಹುದು. ಹೀಗಾಗಿ ಕನ್ನಡದಲ್ಲೆ ಪ್ರಾದೇಶಿಕ ವೈಲಕ್ಷಣ್ಯಗಳು ಉಂಟಾದುವು, ಅವುಗಳನ್ನು ಉಪಭಾಷೆಗಳು ಎಂದೂ ಕರೆಯಬಹುದು. ಸ್ವಾತಂತ್ರ್ಯ ಲಭಿಸಿ, ಅಖಂಡ ಕರ್ನಾಟಕವಾದನಂತರವೇ ಮತ್ತೆ ಕನ್ನಡಕ್ಕೆ ಪ್ರಾಶಸ್ತ್ಯ ದೊರಕಿ ಆಡಳಿತಭಾಷೆ ಯಾಗಿ ರೂಪುಗೊಳ್ಳಲು ಸಾಧ್ಯವಾಯಿತು.

ಹೊಸಗನ್ನಡಕ್ಕೆ ಸಂಬಂಧಿಸಿದ ಸ್ವಾರಸ್ಯಕರ ವಿಷಯವೆಂದರೆ ಒಂದು ಕಾಲಕ್ಕೆ ಕೇಶಿರಾಜ ವ್ಯಾಕರಣ ನಿಯಮ ವಿರುದ್ಧ, ಭಾಷೆಗೆ ಒಗ್ಗದ್ದು ಎಂದು ಹೇಳಿದುದೆಲ್ಲವೂ ಹೊಸಗನ್ನಡ ಲಕ್ಷಣವಾಗಿ ಪರಿಣಮಿಸಿವೆ :

(೧) 'ಲ್'ಗೆ ಬದಲಾಗಿ 'ಳ್' ಬಳಸಕೂಡದು ಎಂದು ಕೇಶಿರಾಜ ಹೇಳಿದ್ದಾನೆ. ಈಗ ಬೆರಲ್ > ಬೆರಳ್ > ಬೆರಳು, ಕೊರಲ್ > ಕೊರಳ್ > ಕೊರಳು ಆಗಿವೆ. ವ್ಯಂಜನಾಂತ ಶಬ್ದಗಳೆಲ್ಲವೂ ನಡುಗನ್ನಡ ಕಾಲದಲ್ಲೆ ಸ್ವರಾಂತವಾಗತೊಡಗಿದುವು. ಈಗ ನಿತ್ಯವೆಂಬಂತೆ ಆಗಿವೆ.

(೨) ವರ್ತಮಾನ ಕ್ರಿಯಾರೂಪಗಳಿಂದ ಕೃದಂತಮಾಡಿ ಕೃಲ್ಲಿಂಗವಾಗಿ ಬಳಸಕೂಡದು ಎಂದನು. ಮಾಡಿದಪನಂ, ನೋಡಿದಪಂ ಇತ್ಯಾದಿ. ಈಗ ಮಾಡಿದವನನ್ನು, ನೋಡಿದವನು, ಮಾಡುವವನನ್ನು, ನೋಡುವವನು ಎಂದೆಲ್ಲ ರೂಪಗಳನ್ನು ಸಾಧಿಸಲಾಗುತ್ತಿದೆ.

(೩) ಆಗಳ್, ಈಗಳ್, ಇರುಳ್, ಪಗಲ್ ಹೊರತಾಗಿ ಇತರ ವ್ಯಂಜನಾಂತ ಶಬ್ದಗಳಿಗೆ ಷಷ್ಠಿಯ 'ಅ' ಪ್ರತ್ಯಯ ಸೇರುವಾಗ ಇನಾಗಮ ಮಾಡಕೂಡದು ಎಂದನು. ಅವು ಆಗಿವೆ. ಉದಾ : ಬೆಮರಿನ, ಮಣಲಿನ, ಮುಗಿಲಿನ.

(೪) ಸತಿಸಪ್ತಮಿಯಲ್ಲಿ 'ಅಲ್' ಹೇಳಕೂಡದು, 'ಅಲೊಡಂ' ಶುದ್ಧ ಎಂದನು. ಈಗ ಅಲು ಸೇರಿಸುವುದು ಸಾಮಾನ್ಯವಾಗಿದೆ.

(೫) ಸಮಾಸದಲ್ಲಿ ಎರಡೂ ಶಬ್ದಗಳು ಸಂಸ್ಕೃತದ್ದಾಗಿರಬೇಕು, ಇಲ್ಲವೆ ತದ್ಭವಗಳಾಗಿರಬೇಕು. ಒಂದು ಶಬ್ದ ನಿಯಮಕ್ಕೆ ಒಗ್ಗದಿದ್ದಲ್ಲಿ ಮಾತ್ರ ಅರಿಸಮಾಸ ದೋಷವಿಲ್ಲ ಎಂದಿದ್ದನು. ಈಗ ನಿಯಮವನ್ನು ಗಮನಿಸದಿರುವುದೇ ಹೆಚ್ಚು.

ಇವೇ ಅಲ್ಲದೆ ಇನ್ನೂ ಹಲವು ಅಂಶಗಳಲ್ಲಿ ನಡುಗನ್ನಡಕ್ಕೂ ಹೊಸಗನ್ನಡಕ್ಕೂ ಇರುವ ವ್ಯತ್ಯಾಸಗಳನ್ನು ಗುರುತಿಸಬಹುದು. (೧) ವಿಜಾತೀಯ ಸಂಯುಕ್ತಾಕ್ಷರಗಳು ಸಜಾತೀಯವಾಗಿರುವುದು : ಗಱ್ದೆ > ಗರ್ದೆ > ಗದ್ದೆ, ಕಱ್ತೆ > ಕರ್ತೆ > ಕತ್ತೆ, ಅಱ್ದು > ಅರ್ದು > ಅದ್ದು, ಪೆರ್ಮೆ > ಹೆಮ್ಮೆ, ಒರ್ವನ್ > ಒರ್ಬನ್ > ಒಬ್ಬನು, ಕರ್ವು > ಕರ್ಬು > ಕಬ್ಬು. ಕೇಶಿರಾಜನ ಕಾಲಕ್ಕೇ ಈ ಬದಲಾವಣೆ ನಡೆದಿತ್ತು. (೨) ಸಂಯುಕ್ತಾಕ್ಷರದ ದ್ವಿತೀಯ ವ್ಯಂಜನ ಲೋಪ : ನಾಣ್ಚು > ನಾಚು, ತೋರ್ಚು > ತೋಚು, ಸೋಲ್ತು > ಸೋತು, ಬಱ್ದುಂಕು > ಬರ್ದುಂಕು > ಬದುಕು. ಇದಕ್ಕೆ ಕಾರಣ ಮೂರು ಅಕ್ಷರಗಳ ಶಬ್ದವಾಗಿದ್ದರೆ ಶಿಥಿಲ ಉಚ್ಚಾರಣೆ ; ಎರಡಕ್ಷರಗಳ ಶಬ್ದವಾಗಿದ್ದರೆ ಸ್ವರಾಘಾತ (accent) ದಲ್ಲಿ ಆದ ವ್ಯತ್ಯಾಸ (ಎರಡಕ್ಷರ ಪದಗಳಿಗೆ ಶಿಥಿಲೋಚ್ಚಾರಣೆ ಆಗುವುದಿಲ್ಲ). ಕನ್ನಡದ ಅವನ್, ಇವನ್ ತೆಲುಗಿನಲ್ಲಿ ವಾಡು, ವೀಡು ಆಗಲು ಸ್ವರಾಘಾತ 'ವ'ಕಾರದ ಮೇಲೆ ಬಿದ್ದದ್ದೆ ಕಾರಣ. ಆಗ ಮೊದಲ ಸ್ವರ ಲೋಪವಾಗಿ ಎರಡನೆಯ ಸ್ವರಸ್ಥಾನಕ್ಕೆ ಬಂದು ದೀರ್ಘವಾಗುತ್ತದೆ. (೩) ವರ್ಣವಿಪರ್ಯಯ ಅಥವಾ ಅಕ್ಷರಪಲ್ಲಟ. ಇದನ್ನು ಮುಂದೆ ವಿವರಿಸಲಾಗುವುದು. ಉದಾ : ಅಲರ್ > ಅರಲ್ > ಅರಳು, ನೆಳಲ್ > ನೆರಳು, ಅಸಗ > ಅಗಸ. ಇತ್ಯಾದಿ. ಕೆಲವೊಮ್ಮೆ ಸ್ವರ ಮುಂದಿನ ವ್ಯಂಜನದೊಡನೆ ಸೇರುವುದು, ಮೇಲೆ ತೆಲುಗಿನ ಸಂದರ್ಭದಲ್ಲಿ ವಿವರಿಸಿದಂತೆ. ಉದಾ : ಎಹಗೆ > ಹೇಗೆ, ಅಹಗೆ > ಹಾಗೆ, ಅಹುದು > (ಹಉದು) > ಹೌದು. (೪) 'ಆ'ಕಾರ, 'ಏ'ಕಾರಯುತ ಶಬ್ದಗಳು 'ಯಾ'ವನ್ನೂ, ಓ > ವಾ ವನ್ನೂ ಆಡುನುಡಿಯಲ್ಲಿ ಹೆಚ್ಚಾಗಿ, ಗ್ರಂಥದಲ್ಲಿ ಕ್ವಚಿತ್ತಾಗಿ ಪಡೆದಿವೆ. ಆರ್ > ಯಾರು, ಆವನ್ > ಯಾವನು, ಏಕೆ > ಯಾಕೆ, ಬೇಡ > ಬ್ಯಾಡ, ಕೋಪ > ಕ್ವಾಪ, ಓರೆ > ವಾರೆ, ಓಲೆ > ವಾಲೆ ಇತ್ಯಾದಿ. (೫) ಬಂಡಿಯ ಱ 'ರ' ಆಗಿದೆ, ೞ > ಳ ಆಗಿದೆ—ಸೇರಿಹೋಗಿವೆ. ಹಲವೆಡೆ ಆ ಎರಡು ಬಗೆಯ ಶಬ್ದಗಳ ಅರ್ಥ ಉಳಿದಿದ್ದರೂ, ಕೆಲವೆಡೆ ಒಂದು ಅರ್ಥದಲ್ಲಿನ ಶಬ್ದ ಬಳಕೆ ತಪ್ಪಿಹೋಗಿರುವುದುಂಟು. ಆಳ್–ಆೞ್‌ಗಳಲ್ಲಿ ಆಳು ಎಂಬುದು ಮನುಷ್ಯಸೇವಕ ಅರ್ಥಗಳಲ್ಲಿ ಉಳಿದು ಆೞ್ = ಮುಳುಗು ಎಂಬುದು ಬಿಟ್ಟುಹೋಗಿದೆ. ಅರ್ಥ ಅಸ್ಪಷ್ಟವಾದಾಗ ಬಾಳೆಹಣ್ಣು, ಬಾಳೆಮೀನು (ಬಾೞೆ–ಬಾಳೆ ಎಂಬುವಕ್ಕೆ) ಎಂದು ಸ್ಪಷ್ಟವಾಗಿ ಹೇಳುವುದು ಬಳಕೆಗೆ ಬಂದಿದೆ. ಕೆಲವೆಡೆ ೞ್–ಳ್ ಗಳು > ಣ್ ಆಗಿವೆ. ಉದಾ : ಗಿಳಿ > ಗಿಣಿ, ಗೆೞಸು > ಗೆಣಸು, ಮೆೞಸು > ಮೆಣಸು, ನೊಳವು > ನೊಣ.

## ೧೧. ಕನ್ನಡ ಮತ್ತು ಉಪಭಾಷೆಗಳು

"ಒಂದು ಸಮಾಜದ ವ್ಯಕ್ತಿಗಳು ಪರಸ್ಪರ ವ್ಯವಹಾರಕ್ಕಾಗಿ ಬಳಸುವ ಯಾದೃಚ್ಛಿಕ ಧ್ವನಿಸಂಕೇತಗಳ ವ್ಯವಸ್ಥೆಯೇ ಭಾಷೆ" ಎಂಬುದನ್ನು ಪ್ರಾರಂಭದಲ್ಲಿಯೆ ಹೇಳಿದೆ. ಜೆ. ಬಿ. ಕ್ಯಾರೊಲ್* ಎಂಬಾತ ಇನ್ನೂ ವಿವರವಾಗಿ ಹೀಗೆ ಹೇಳಿದ್ದಾನೆ: "ಯಾದೃಚ್ಛಿಕ ಧ್ವನಿಸಂಕೇತಗಳ ಮತ್ತು ಧ್ವನಿಯ ಅನುಕ್ರಮಣಿಕೆಗಳ ರಚನಾಪದ್ಧತಿಯಿಂದ ಕೂಡಿ, ಒಂದು ಜನಸಮುದಾಯವು ಪರಸ್ಪರ ವ್ಯಕ್ತಿ-ಸಂಪರ್ಕಕ್ಕೆ ಬಳಸಬಹುದಾದ ಮತ್ತು ಮಾನವ ಪರಿಸರದಲ್ಲಿನ ವಸ್ತು ಘಟನೆ ಮತ್ತು ಕ್ರಿಯೆಗಳನ್ನು ವಿಸ್ತಾರವಾಗಿ ದಾಖಲುಗೊಳಿಸುವ ಧ್ವನಿವ್ಯವಸ್ಥೆಯನ್ನು ಭಾಷೆಯೆಂದು ಕರೆಯುತ್ತಾರೆ."

ಇಲ್ಲಿ ಧ್ವನಿವ್ಯವಸ್ಥೆ, ಧ್ವನಿಸಂಕೇತಗಳು ಎಂದಿರುವುದರಿಂದ ಆಂಗಿಕ ಸಂಜ್ಞೆಗಳಿಂದ ಪರಸ್ಪರ ಮನೋಗತ ತಿಳಿಸುವುದು ಭಾಷೆಯಾಗುವುದಿಲ್ಲ. ಹಾಗೇ, ಧ್ವನಿಸಂಕೇತಗಳು ಆ ಸಮಾಜದಲ್ಲಿ ರೂಢಿಯಿಂದ ಬಂದ ಅರ್ಥವನ್ನು ಸೂಚಿಸುವುವಾಗಿರಬೇಕು. ಮನೆ (ಮ್ ಅ ನ್ ಎ mane) ನಾಲ್ಕು ಧ್ವನಿಮಾಗಳ ಸಮೂಹ. ಅದೇ 'ಮನೆ' ಎಂದಿದ್ದರೆ, ನಾಲ್ಕು ಧ್ವನಿಮಾಗಳು ಕನ್ನಡದಲ್ಲಿರುವುವೇ ಆಗಿದ್ದರೂ ಅವುಗಳ ಸಮೂಹದಿಂದ ನಮ್ಮ ಸಮಾಜದಲ್ಲಿ ಯಾವುದೇ ರೂಢಿಯ ಅರ್ಥಸೂಚಿತವಾಗುವುದಿಲ್ಲ. ಆದ್ದರಿಂದ ಈ ಧ್ವನಿಸಮೂಹ ಕನ್ನಡದಲ್ಲಿ ಧ್ವನಿಸಂಕೇತವಲ್ಲ.

ಭಾಷೆ ನದಿಯ ಪ್ರವಾಹದಂತೆ ನಿರಂತರ ಹರಿಯುತ್ತ ಏರಿಳಿತಗಳಿಗೆ ಒಳಗಾಗಿ ಕಾಲದೇಶಗಳ ವ್ಯತ್ಯಾಸದಿಂದ ರೂಪ ಬದಲಾಯಿಸುತ್ತ ಸಾಗುತ್ತದೆ. ಹೀಗೆ ನಿತ್ಯ ಪರಿವರ್ತನಶೀಲವಾಗಿರುವುದರಿಂದಲೇ ಅದು ಜೀವಂತವಾಗಿ ಉಳಿಯಲು ಸಾಧ್ಯ. ಈ ಪರಿವರ್ತನೆ ಅಪ್ರಜ್ಞಾಪೂರಕವಾಗಿ ನಡೆಯುವಂತಹುದೇ ಹೊರತು ಉದ್ದೇಶ-ಪೂರ್ವಕವಾಗಿ ಅಲ್ಲ. ಭಾಷಾವ್ಯತ್ಯಾಸವಾಗಲು ಸ್ಥೂಲವಾಗಿ ಎರಡು ಬಗೆಯಾಗಿ ಕಾರಣಗಳನ್ನು ವಿಂಗಡಿಸಲಾಗುತ್ತದೆ: (1) ಬಾಹ್ಯಕಾರಣಗಳು (2) ಆಂತರಿಕ ಕಾರಣಗಳು. ಆಂತರಿಕ ಕಾರಣಗಳಲ್ಲಿ ಮುಖ್ಯವಾದುವು ಧ್ವನಿವ್ಯತ್ಯಾಸ, ಅರ್ಥವ್ಯತ್ಯಾಸಗಳು. ಅವುಗಳ ಬಗ್ಗೆ ಮುಂದೆ ವಿವರಿಸಲಾಗುವುದು. ಭಾಷಾವ್ಯತ್ಯಾಸದಿಂದ ಇನ್ನೊಂದು ಮುಖ್ಯಪರಿಣಾಮ ಆಗುತ್ತದೆ. ಅದೂ ಸಹ ಆಂತರಿಕ ಕಾರಣಗಳಲ್ಲಿ ಬರುತ್ತದೆ. ಇದರ ಪರಿಣಾಮವಾಗಿಯೆ ಉಪಭಾಷೆಗಳು ಕಾಣಿಸಿಕೊಳ್ಳುವುದು.

ಒಂದು ಸಮಾಜದ, ಒಂದು ಭಾಷಾವರ್ಗದ ಜನರೆಲ್ಲ ಒಂದೇ ಬಗೆಯಾಗಿ ಯಾಂತ್ರಿಕವಾಗಿ ಭಾಷೆಯನ್ನಾಡಲು ಸಾಧ್ಯವಿಲ್ಲ. ಉಚ್ಚಾರಣೆಯಲ್ಲಿ ವ್ಯಕ್ತಿ

---

* J. B. Carrol – Study of Language, 1955.

ವ್ಯಕ್ತಿಗೂ ವೈಯಕ್ತಿಕ ಭೇದ, ವಿಶಿಷ್ಟತೆ ಇರುತ್ತದೆ. ಏಕೆಂದರೆ ಭಾಷೆ ರಕ್ತಗತವಾಗಿ ಬರುವುದಿಲ್ಲ, ಅನುಕರಣದಿಂದ ಕಲಿಕೆಯಿಂದ ಬರುವುದು. ಮಕ್ಕಳು ಅನುಕರಣೆಯಿಂದ ಮಾತು ಕಲಿಯುವಾಗ ಆಯಾ ಮಕ್ಕಳ ಕಂಠ, ದನಿ, ಸ್ಥಾಯಿಯನ್ನನುಸರಿಸಿ ಸೂಕ್ಷ್ಮ ವ್ಯತ್ಯಾಸಗಳಿರುತ್ತವೆ, ಆಗುತ್ತವೆ. ಪ್ರತಿಯೊಬ್ಬ ವ್ಯಕ್ತಿಯ ಮಾತಿನಲ್ಲೂ ವ್ಯತ್ಯಾಸ, ವೈಶಿಷ್ಟ್ಯ ಇರುತ್ತದೆ. ಇದನ್ನೇ 'ವ್ಯಕ್ತಿಭಾಷೆ' ಎನ್ನುವುದು. ಅಂದರೆ ಒಂದು ಸಮಾಜದಲ್ಲಿ ಇಂತಹ ವ್ಯಕ್ತಿಭಾಷೆಗಳೇ (ideolects) ಇರುವುದು. ಆದರೆ, ಸೂಕ್ಷ್ಮ ವ್ಯತ್ಯಾಸಗಳಿದ್ದರೂ ಒಂದೇ ಮನೆಯ ವಾತಾವರಣದ ಪ್ರಭಾವದಿಂದ ಸ್ವಲ್ಪ ಏಕರೂಪತೆಯೂ ಇರುತ್ತದೆ. ಹಿರಿಯರನ್ನು ಅನುಸರಿಸಿ ತಿದ್ದಿಕೊಳ್ಳುವುದು ಇದಕ್ಕೆ ಕಾರಣ. ಅಂತೆಯೇ ಕೆಲವು ಕುಟುಂಬಗಳ ಸಮುದಾಯದ, ಕೇರಿ ಮೊಹಲ್ಲಾಗಳ, ಕೊನೆಗೆ ಒಂದೊಂದು ಊರಿನ ಭಾಷೆಯಲ್ಲೂ ಏಕರೂಪತೆ ಇರುತ್ತದೆ. ಅದು ಹರಡಿ ಒಂದು ಜಿಲ್ಲೆ, ಆ ಪ್ರದೇಶದ ಭಾಷೆಯಲ್ಲೂ ಏಕರೂಪ ಲಕ್ಷಣಗಳು ಕಾಣಬರುತ್ತವೆ. ಆದರೆ ಏಕರೂಪತೆಗೆ ಭಂಗ ಬರುವ ಸಂದರ್ಭಗಳೂ, ಕಾರಣಗಳೂ ಉಂಟು. ಒಂದೇ ಭಾಷೆಯನ್ನಾಡುವ ವಿಸ್ತಾರ ಪ್ರದೇಶದಲ್ಲಿ ಸಂಪರ್ಕ ಕಡಮೆಯಾದಷ್ಟೂ ಭಾಷೆಯ ವ್ಯತ್ಯಾಸಗಳು ಹೆಚ್ಚಾಗುತ್ತವೆ, ಸ್ಪಷ್ಟವಾಗಿ ಗೋಚರಿಸತೊಡಗುತ್ತವೆ. ಕಾಲಕ್ರಮೇಣ ಈ ವ್ಯತ್ಯಾಸ ಅಥವಾ ವೈಶಿಷ್ಟ್ಯಗಳ ಮೊತ್ತವೇ ಆ ಒಂದು ಭಾಷೆಯ 'ಉಪಭಾಷೆ' (dialect) ಯಾಗಲು ಕಾರಣವಾಗುತ್ತದೆ. ಅಂತಹ ಉಪಭಾಷೆಗಳು ವಿಸ್ತಾರವಾದ ಪ್ರದೇಶವನ್ನುಳ್ಳ ಎಲ್ಲ ಭಾಷೆಗಳಿಗೂ ಇರುತ್ತವೆ.

ವ್ಯಕ್ತಿಭಾಷೆ ಕೇರಿ-ಊರುಗಳ ಭಾಷಾ ವೈಶಿಷ್ಟ್ಯಕ್ಕೆ ಕಾರಣವಾದರೆ, ಸಂಪರ್ಕ ಕಡಮೆಯಾಗುವುದು ಬಾಹ್ಯಕಾರಣಗಳಿಂದ. ಒಂದೇ ಭಾಷೆಯನ್ನಾಡುವ ಜನರಲ್ಲಿ ಸಂಪರ್ಕ ಹೆಚ್ಚಿಗೆ ಇದ್ದಷ್ಟೂ ಏಕರೂಪತೆ ಇರುತ್ತದೆ; ಸಂಪರ್ಕ ಕಡಮೆಯಾದಷ್ಟೂ ಭಿನ್ನತೆ ಹೆಚ್ಚುತ್ತದೆ. ಸಂಪರ್ಕ ಕಡಮೆಯಾಗಲು ನಾಲ್ಕು ಕಾರಣಗಳನ್ನು ಹೆಸರಿಸಬಹುದು. ೧. ದೇಶದ ವಿಸ್ತಾರ. ದೇಶ ವಿಸ್ತಾರವಾಗಿದ್ದಷ್ಟೂ ಎಲ್ಲ ಭಾಗದ ಜನರೊಂದಿಗೂ ಪರಸ್ಪರ ಸಂಪರ್ಕ ಅಸಾಧ್ಯವಾಗಿ, ವ್ಯಾಪಾರ ವ್ಯವಹಾರ ವಿಕೇಂದ್ರೀಕರಣವಾಗುತ್ತದೆ. ದೇಶ ಚಿಕ್ಕದಿದ್ದಷ್ಟೂ (ಒಂದೇ ಭಾಷೆಯ) ಸಂಬಂಧ ಹೆಚ್ಚು, ಏಕರೂಪತೆ ಸಾಧ್ಯ. ಅಮೆರಿಕಾದಲ್ಲಿ ಇಂಗ್ಲಿಷ್ ಮಾತನಾಡಿದರೂ ಅಮೆರಿಕದ ಇಂಗ್ಲಿಷನ್ನು ಅಮೆರಿಕನ್ ಎನ್ನುತ್ತಾರೆ. ಅಲ್ಲೂ ಪ್ರಾಂತ್ಯಪ್ರಾಂತ್ಯಕ್ಕೂ ವ್ಯತ್ಯಾಸಗಳಿವೆ. ಇಂಡಿಯಾದ ಇಂಗ್ಲಿಷನ್ನು ಇಂಡಿಯನ್ ಇಂಗ್ಲಿಷ್ ಎನ್ನುತ್ತಾರೆ. ಬ್ರಿಟನ್ನಿನಲ್ಲೆ ಪ್ರಾದೇಶಿಕ ವೈಲಕ್ಷಣ್ಯಗಳಿವೆ, ಸಮಾಜ ಮತ್ತು ವರ್ಗಭೇದಗಳಿಂದ ಭಾಷೆಯಲ್ಲೂ ವ್ಯತ್ಯಾಸ ಕಂಡುಬರುತ್ತದೆ. ೨. ನೈಸರ್ಗಿಕ ಅಡೆತಡೆಗಳು ಜನಸಂಪರ್ಕಕ್ಕೆ ನಿರ್ಬಂಧ ಒಡ್ಡುತ್ತವೆ. ನದಿ, ಪರ್ವತ, ಸಮುದ್ರಗಳ ಅಡಚಣೆಯಿಂದ ಪರಸ್ಪರ ಸಂಪರ್ಕಕ್ಕೆ ನಿರ್ಬಂಧ ಉಂಟಾಗುತ್ತದೆ. ೩. ಒಂದೇ ಭಾಷೆ

ಯನ್ನಾಡುವ ಪ್ರದೇಶದ ಬೇರೆ ಬೇರೆ ಭಾಗಗಳು ಬೇರೆ ಬೇರೆ ರಾಜ್ಯಕ್ಕೆ, ಆಧಿಪತ್ಯಕ್ಕೆ, ಆಡಳಿತಕ್ಕೆ ಒಳಪಟ್ಟಾಗ ಆಯಾ ಆಡಳಿತ ಕೇಂದ್ರ, ವ್ಯವಹಾರ ಕೇಂದ್ರದ ಸುತ್ತಮುತ್ತ ಸಂಪರ್ಕ ಹೆಚ್ಚಾಗುತ್ತದೆ, ಉಳಿದ ಭಾಗದ ಸಂಪರ್ಕ ಕಡಿಯುತ್ತದೆ. ಕರ್ನಾಟಕದಲ್ಲಿ ಹೀಗಾಗಿದೆ. ಉತ್ತರದಲ್ಲಿ ಹಿಂದಿ ಮಾತನಾಡುವ ಪ್ರದೇಶಗಳಲ್ಲಿ ಸಹ ಇದೇ ಪರಿಸ್ಥಿತಿ ಕಾಣಬರುತ್ತದೆ. ೪. ಗಡಿ ಪ್ರಾಂತ್ಯಗಳ ಭಿನ್ನಭಾಷಾ ಪ್ರಭಾವ. ಗಡಿಯಾಚೆ ಬೇರೆ ಭಾಷೆಯಾಡುವ ಜನರಿದ್ದರೆ ಅವರ ಪ್ರಭಾವದಿಂದ ಉಚ್ಚಾರಣೆ, ಶಬ್ದಕೋಶಗಳ ಮೇಲೆ ಪರಿಣಾಮ ಉಂಟಾಗಿ ಅಂತಹ ಪ್ರದೇಶಗಳಲ್ಲಿ ವೈಲಕ್ಷಣ್ಯಗಳು ತಲೆದೋರುತ್ತವೆ. ಹೀಗೆ ಒಂದೇ ಭಾಷೆಯನ್ನಾಡುವ ಪ್ರದೇಶದಲ್ಲೂ ಪ್ರಾಂತಭೇದಗಳು ಉಂಟಾಗುತ್ತವೆ. ಇವುಗಳೇ ಉಪಭಾಷೆಗಳಿಗೆ ಕಾರಣವಾಗುತ್ತವೆ. ಶತಮಾನಗಳವರೆಗೆ ಹೀಗೇ ಮುಂದುವರೆದರೆ ಉಪಭಾಷೆಗಳೇ ಪ್ರತ್ಯೇಕ ಸ್ವತಂತ್ರ ಭಾಷೆಗಳಾಗಬಹುದು. ಮೂಲದ್ರಾವಿಡದಿಂದ ದ್ರಾವಿಡ ಭಾಷೆಗಳೂ, ಪ್ರಾಕೃತದಿಂದ ಉತ್ತರ ಭಾರತದ ಭಾಷೆಗಳೂ ಕವಲೊಡೆದು ಸ್ವತಂತ್ರಭಾಷೆಗಳಾಗಿ ರೂಪು-ಗೊಂಡದ್ದು ಹೀಗೆಯೆ.

**ಕನ್ನಡದ ಉಪಭಾಷೆಗಳು :** ಮೇಲೆ ವಿವರಿಸಿದ ನಾಲ್ಕು ಕಾರಣಗಳು ಕನ್ನಡ ನಾಡಿನ ಮೇಲೆ, ಕನ್ನಡ ಭಾಷೆಯ ಮೇಲೆ ಪರಿಣಾಮ ಉಂಟುಮಾಡಿವೆ. ಅದರಿಂದ ಕನ್ನಡ ನಾಡಿನಲ್ಲೂ ಪ್ರಾಂತ ಭೇದಗಳು ಉಂಟಾಗಿವೆ.

(೧) ಕನ್ನಡನಾಡು ಪ್ರಾಚೀನ ಕಾಲದಿಂದಲೂ ಗೋದಾವರಿಯಿಂದ ಕಾವೇರಿಯವರೆಗೆ ಹರಡಿದ್ದ ವಿಸ್ತಾರವಾದ ನಾಡು. ಆದ್ದರಿಂದ ದಕ್ಷಿಣದ ಜನರಿಗೆ ಉತ್ತರದ ಕಡೆಯ ಜನರ ಸಂಪರ್ಕ ಕಡಮೆ. (೨) ಕನ್ನಡ ನಾಡಿನಲ್ಲಿ ಪರ್ವತಾವಳಿಗಳಿವೆ, ಮಲೆನಾಡಿದೆ, ಬೆಂಗಾಡಿದೆ, ಬಯಲು ಪ್ರದೇಶವಿದೆ. ಪಶ್ಚಿಮ ಘಟ್ಟಗಳು ಕರಾವಳಿ ಪ್ರದೇಶವನ್ನು ಮೈಸೂರಿನ ಬಯಲು ಪ್ರದೇಶದಿಂದ ಬೇರೆ ಮಾಡುತ್ತವೆ. ಪ್ರಯಾಣದ ಅಡಚಣೆಯಿಂದ ಸಂಪರ್ಕ ಕಡಿದುಹೋಗದಿದ್ದರೂ ಕಡಮೆ ಎನ್ನಬಹುದು. (೩) ಅಖಂಡ ಕರ್ನಾಟಕ, ಒಬ್ಬಿಬ್ಬರು ಚಕ್ರವರ್ತಿಗಳ ಕಾಲದಲ್ಲಿ ಹೊರತು, ಇತ್ತೀಚಿನವರೆಗೂ ಬೇರೆ ಬೇರೆ ಆದಿಪತ್ಯಕ್ಕೆ ಒಳಪಟ್ಟಿತ್ತು. ರಾಜಕೀಯ ವಿಭಜನೆಯಿಂದ ಪ್ರಾಂತಭೇದ ಹೆಚ್ಚಿತು. ಮುಂಬಯಿ ಕರ್ನಾಟಕ, ಹೈದರಾಬಾದ್ ಕರ್ನಾಟಕ, ಮದರಾಸು ಕರ್ನಾಟಕ ಇತ್ಯಾದಿ ಅಂತರ್ಭೇದಗಳು ಉಂಟಾದುವು. ಜನ ವ್ಯಾಪಾರಕ್ಕೆ, ಭೂಮಿ ಕಾಣಿ ವ್ಯವಹಾರಕ್ಕೆ ಆಯಾ ಪ್ರಾಂತದ ರಾಜಧಾನಿಯೊಡನೆ ಸಂಪರ್ಕ ಹೊಂದಬೇಕಾಗಿದ್ದುದರಿಂದ ಸಹಜವಾಗಿ ಬೇರೆ ಬೇರೆ ಭಾಷಾ ಪ್ರಭಾವಗಳಿಗೆ ಒಳಗಾದರು. ಧಾರವಾಡ ಕನ್ನಡ, ಬಿಜಾಪುರ ಕನ್ನಡ, ಮೈಸೂರು ಕನ್ನಡ, ಮಂಗಳೂರು ಕನ್ನಡ ಹೀಗೆ ಆದುವು. (೪) ಕನ್ನಡಿಗರಿಗೆ ಗಡಿ ಪ್ರಾಂತಗಳಾಗಿ ಕೇರಳ, ಮಹಾರಾಷ್ಟ್ರ, ಗೋವ, ಆಂಧ್ರ, ತಮಿಳುನಾಡುಗಳಿವೆ

ಆ ಪ್ರಾಂತಗಳ ಭಾಷೆಗಳು (ಆಡಳಿತ ಭಾಷೆಗಳು) ಬೇರೆಯಾಗಿವೆ. ಹೀಗಾಗಿ ಗಡಿ ಪ್ರದೇಶದ ಕನ್ನಡಿಗರ ಮೇಲೆ ಮರಾಠಿ, ಉರ್ದು, ತೆಲುಗು, ತಮಿಳು, ಮಲೆಯಾಳಂ ಗಳ ಪ್ರಭಾವವನ್ನು ಕಾಣಬಹುದು. ಈಗ ಕರ್ನಾಟಕ ಏಕೀಕರಣವಾದ ನಂತರ, ಬೆಂಗಳೂರು ರಾಜಧಾನಿಯಾಗಿ, ಆಡಳಿತ ವ್ಯವಹಾರ ಕೇಂದ್ರವಾಗಿ ಬರವಣಿಗೆಯಲ್ಲಿ ಹೆಚ್ಚಾಗಿ ಏಕರೂಪತೆ ಮೂಡಲು ಸಾಧ್ಯವಾಗಿದೆ. ಆಡುನುಡಿಯಲ್ಲಿ ಮಾತ್ರ ಪ್ರಾಂತಭೇದಗಳು ಉಳಿದೇ ಇವೆ.

ಕನ್ನಡದಲ್ಲಿ ಸ್ಥೂಲವಾಗಿ (ಪ್ರಧಾನವಾಗಿ ಕಾಣುವ) ನಾಲ್ಕು ಉಪಭಾಷೆ ಗಳನ್ನು ಗುರುತಿಸಬಹುದು. ಮೈಸೂರು, ಧಾರವಾಡ, ಹೈದರಾಬಾದ್ ಮತ್ತು ಮಂಗಳೂರು ಉಪಭಾಷೆಗಳು. ಹೈದರಾಬಾದ್ ಕನ್ನಡ ಪ್ರದೇಶದ ಕೇಂದ್ರ ಗುಲ್ಬರ್ಗಾ. ಆದ್ದರಿಂದ ಗುಲ್ಬರ್ಗಾ ಉಪಭಾಷೆ ಎನ್ನಬಹುದೆಂದು ಡಾ|| ಎಂ. ಚಿದಾನಂದಮೂರ್ತಿ ಹೇಳುತ್ತಾರೆ. ಬಿಜಾಪುರ ಕನ್ನಡ ಎಂದು ಹೇಳುವುದುಂಟು. ಗುಲ್ಬರ್ಗಾ-ಬಿಜಾಪುರ ಕನ್ನಡಗಳಲ್ಲಿ ಆ ಮಟ್ಟದ ವ್ಯತ್ಯಾಸವಿದೆಯೇ ಎಂಬುದಿನ್ನೂ ಸ್ಪಷ್ಟವಿಲ್ಲ. ಸದ್ಯಕ್ಕೆ ಎರಡೂ ಹೆಸರುಗಳನ್ನು ವಿದ್ವಾಂಸರು ಬಳಸುತ್ತಿದ್ದಾರೆ ಎನ್ನ ಬಹುದು. ಮಂಗಳೂರು ಕನ್ನಡದಲ್ಲಿ ಹವ್ಯಕ ಉಪಭಾಷೆ ಭಿನ್ನ ಲಕ್ಷಣಗಳನ್ನು ಹೊಂದಿದೆ ಎಂಬುದು ಗಮನಾರ್ಹ. ಪ್ರಾಂತಭೇದ ಅಥವಾ ಉಪಭಾಷೆಗಳ ಸ್ವರೂಪವನ್ನು ತಿಳಿಯಲು, ವೈಲಕ್ಷಣ್ಯಗಳು ಹೇಗೆ ಕಾಣಿಸಿಕೊಳ್ಳುತ್ತವೆ ಎಂಬು ದನ್ನು ತಿಳಿಯಲು ಮೈಸೂರು ಧಾರವಾಡ ಕನ್ನಡಗಳನ್ನು ಗಮನಿಸಬಹುದು.

ಮೈಸೂರು–ಧಾರವಾಡ ಕನ್ನಡ :

(೧) ಮೈಸೂರು ಕಡೆಯ ಪದಾಂತ್ಯ ಸ್ವರ ಎ>ಇ ಎಂದು ಧಾರವಾಡದ ಕಡೆ ಕಂಡುಬರುತ್ತದೆ. ಉದಾ : ಮನೆ–ಮನಿ, ಆನೆ–ಆನಿ, ಕುದುರೆ–ಕುದುರಿ, ಒಂಟೆ–ಒಂಟಿ ಇತ್ಯಾದಿ.

(೨) ಮೈಸೂರು ಕನ್ನಡ ವ್ಯಂಜನಾಂತಗಳಿಗೆ ಹತ್ತುವ ಉ>ಅ ಎಂದಾಗಿ ಧಾರವಾಡ ಕನ್ನಡದಲ್ಲಿ ಕಾಣಬರುತ್ತದೆ. ಉದಾ : ಇಂಗ್ಲೆಂಡು>ಇಂಗ್ಲೆಂಡ, ಕಾಲೇಜು–ಕಾಲೇಜ, ಬಟ್ಟಲು–ಬಟ್ಟಲ, ಹೋಟೆಲು–ಹಾಟೆಲ. ಹೋಟೆಲ್, ಉಪಾಹಾರ ಗೃಹಗಳೇ ಅಲ್ಲದೆ ಅಲ್ಲಿಗೇ ವಿಶಿಷ್ಟವಾದ ಖಾನಾವಳಿ ಶಬ್ದ ಹೆಚ್ಚು ಬಳಕೆಯಲ್ಲಿದೆ.

(೩) ಮೈಸೂರು ಕಡೆಯಲ್ಲಿ ಇದೆ, ಇವೆ ಕ್ರಿಯಾಪದಗಳು ರೂಢಿಯಲ್ಲಿದ್ದರೆ, ಅವುಗಳದೇ ಆದ ಬೇರೆ ರೂಪಗಳು ಅದೆ, ಅವೆ ಧಾರವಾಡದ ಕಡೆ ಬಳಕೆಯಲ್ಲುಂಟು. ಉದಾ : ಮೈ—ಹುಡುಗ ಬಹಳ ಚುರುಕಾಗಿದ್ದಾನೆ.

ಧಾ—ಬಾಳಕ ಬಾಳ ಶಾಣ್ಯಾ ಅದಾನ.

(೪) ಮೈಸೂರು ಕನ್ನಡದಲ್ಲಿ ನಪುಂಸಕಲಿಂಗದಲ್ಲಿ ಉದು, ಉವು>ಅದು, ಅವು ಎಂದು ಧಾರವಾಡ ಕನ್ನಡದಲ್ಲಿ ಕಾಣಬರುತ್ತವೆ.

(೫) ಕೆಲವು ಶಬ್ದಗಳು ರೂಢಿಯ ಕಾರಣ ಒಂದೊಂದು ಪ್ರದೇಶದಲ್ಲಿ ಒಂದೊಂದು ಅರ್ಥದಲ್ಲಿ ಪ್ರಯೋಗವಾಗುತ್ತಿವೆ. 'ತಿಂಡಿ' ಎಂದರೆ ಆಹಾರ, ತಿನಿಸು ಎಂದರ್ಥ ಮೈಸೂರು ಕಡೆ, ಧಾರವಾಡದ ಕಡೆ ತೀಟಿ ಎಂದರ್ಥ, ಅದೇ ತಿನಿಸು ಎಂದರೆ ಮೈಸೂರು ಕನ್ನಡದಲ್ಲಿ ತೀಟೆ ಎಂದರ್ಥ, ಧಾರವಾಡದ ಕಡೆ ತಿಂಡಿ ಎಂದರ್ಥ. ಮೈಸೂರು ಕಡೆ ಬಚ್ಚಲು ಎಂದರೆ ಚರಂಡಿ ಎಂದರ್ಥ, ಧಾರವಾಡದ ಕಡೆ ಸ್ನಾನದ ಮನೆ ಎಂಬ ಅರ್ಥ. ಬಚ್ಚಲುಮನೆ ಎಂದರೆ ಮೈಸೂರು ಕಡೆ ಸ್ನಾನದ ಮನೆ ಎಂಬರ್ಥವಾಗುತ್ತದೆ. 'ಅಮ್ಮ' ಎಂಬುದು ಮೈಸೂರು ಕಡೆ ಶಿಷ್ಟಸಮಾಜದಲ್ಲಿ ತಾಯಿ ಎಂಬರ್ಥ ಕೊಡುವುದಲ್ಲದೆ, ಸ್ತ್ರೀಯರ ಬಗ್ಗೆ ಗೌರವ ಸಂಬೋಧನೆ ಯಾಗಿಯೂ ಬಳಕೆಯಾಗುತ್ತದೆ. ಅವ್ವ ಎಂಬುದು ಸಾಮಾನ್ಯವಾಗಿ ಗ್ರಾಮ್ಯ ಬಳಕೆ. ಆದರೆ ಧಾರವಾಡದ ಕಡೆ ಅಮ್ಮ ಎಂದರೆ ವಿಧವೆ. ಅವ್ವ ತಾಯಿಗೆ, ಇತರ ಸ್ತ್ರೀಯರಿಗೆ ಗೌರವದಿಂದ ಕರೆಯುವ ಶಬ್ದ.

(೬) ಅನ್ಯಭಾಷೆಯ ಒಂದೇ ಅರ್ಥದ ಶಬ್ದಗಳಲ್ಲಿ ಕೆಲವು ಮೈಸೂರು ಕಡೆಯೂ ಮತ್ತೆ ಕೆಲವು ಧಾರವಾಡ ಕಡೆಯೂ ರೂಢಿಯಲ್ಲಿವೆ. ಉದಾ : ಹರಾಜು (ಮೈ)–ಲಿಲಾವು (ಧಾ), ಆಮಂತ್ರಣ–ನಿಮಂತ್ರಣ, ಪ್ರಯಾಣ–ಪ್ರವಾಸ ಇತ್ಯಾದಿ.

(೭) ವಾಕ್ಯಗಳ ರಚನೆಯಲ್ಲೂ ವ್ಯತ್ಯಾಸವನ್ನು ಗಮನಿಸಬಹುದು :

ಮೈ—ಇದನ್ನು ಹೋಟಿಲೆನ್ನುತ್ತಾರೆ
ಧಾ—ಇದಕ್ಕೆ ಖಾನಾವಳಿಯೆನ್ನುತ್ತಾರ.
ಮೈ—ನೀನು ಬೊಂಬಾಯಿಗೆ ಹೋಗಲೇಬೇಕು
ಧಾ—ನೀ ಮುಂಬೈಗೆ ಹೋಗಲಿಕ್ಕೆಬೇಕು.

(೮) ಮೈಸೂರಿನ ಕಡೆ ಕಾಣಬರದ, ಬಹುಶಃ ಮರಾಠಿ ಪ್ರಭಾವದಿಂದ ಆಗಿರ ಬಹುದಾದ ಸ್ವರದ ಎಳೆತ, ಒಂದು ಬಗೆಯ ರಾಗ ಧಾರವಾಡದ ಮಾತಿನಲ್ಲಿ ಗಮನಿಸ ಬಹುದು. ಬರ್ರಲಾs, ಯಾಕೋs ತಮ್ಮಾs ಇತ್ಯಾದಿ. ಮೈಸೂರು ಪ್ರದೇಶದ ನಂಜನಗೂಡು, ಚಾಮರಾಜನಗರಗಳ ಕಡೆಯೂ ಅಂತಿಮಸ್ವರವನ್ನು ದೀರ್ಘವಾಗಿ ಎಳೆದು ಹೇಳುವುದು ರೂಢಿಯಲ್ಲಿದೆ.

ಮೈಸೂರು–ಮಂಗಳೂರು ಕನ್ನಡ :

ಮೈಸೂರು–ಮಂಗಳೂರು ಕನ್ನಡಗಳಲ್ಲಿ ಮೇಲಿನಂತೆ ಸ್ಪಷ್ಟವ್ಯತ್ಯಾಸಗಳಿಲ್ಲ ದಿದ್ದರೂ ಮಂಗಳೂರು ಕನ್ನಡ ಖಚಿತ, ಸ್ಪಷ್ಟ ಉಚ್ಚಾರಣೆಯುಳ್ಳದ್ದು, ಗ್ರಂಥ-ಭಾಷೆ ಎನ್ನುವಷ್ಟರಮಟ್ಟಿಗೆ. ಇದಕ್ಕೆ ಮಿಷನರಿಗಳ ವಿದ್ಯಾಭ್ಯಾಸಕ್ರಮ,

ಕಾನ್ವೆಂಟುಗಳ ಪ್ರಭಾವ ಕಾರಣವಿರಬಹುದು. ಆದರೆ ತುಳುವಿನ ಪ್ರಭಾವದ ಕಾಕು ಸಹ ಉಂಟು. ಮಾರಾಯರೇ, ಮಾರಾಯ ಎಂಬುದನ್ನು ಹೆಚ್ಚು ಬಳಸಿದರೂ ಧಾರವಾಡಕ್ಕಿಂತ ಭಿನ್ನ. ಎಂಥದು, ಉಂಟು, ಅಲ್ಲವೋ ಮುಂತಾದ ಶಬ್ದಗಳು ವಾಕ್ಯದಲ್ಲಿ ಸೇರಿರುತ್ತವೆ. ಮೈಸೂರಿನ ಕಡೆ ಅಕ್ಷರಗಳನ್ನು ನುಂಗುವುದುಂಟು, ಮಂಗಳೂರು ಕಡೆ ಹಾಗಲ್ಲ. ಮಂಗಳೂರಿನ ಕಡೆಯ ಹವ್ಯಕ ಕನ್ನಡದಲ್ಲಿ ಭಿನ್ನತೆ ಕಂಡುಬರುತ್ತದೆ. ಬರವಣಿಗೆಯಲ್ಲಿ 'ಇ'ಕಾರ ಇರುವ ಕಡೆ ಮಾತಿನಲ್ಲಿ 'ಎ'ಕಾರವೂ, 'ಉ' ಇರುವ ಕಡೆ ಮಾತಿನಲ್ಲಿ 'ಒ' ಆಗಿರುವುದು ಗಮನಾರ್ಹ. ಉದಾ: ಇರುವೆ–ಎರುಗು, ಕಿವಿ–ಕೆಮಿ, ಇದಿರು (ಎದುರು ಸಹ)–ಎದುರು, ಬಿಳಿ–ಬೆಳಿ, ಬಿಸಿ–ಬೆಶಿ, ಉಳಿ–ಒಳಿ, ಕುದಿ–ಕೊದಿ, ತುಟಿ–ತೊಡಿ (ಮೈಸೂರುಕಡೆ ತೊಡೆ ಆಡುನುಡಿಯಲ್ಲಿ ತೊಡಿ ಆಗಿದೆ), ಸುಲಿ–ಸೊಲಿ, ತುಳಿ–ತೊಳಿ ಎಂದಾಗಿವೆ. ಆಡುನುಡಿಯ ಪದಾಂತ್ಯದ ಸ್ವರ ಮೈಸೂರು ಕಡೆ ಹೆಚ್ಚಾಗಿ 'ಇ' ಆದರೆ ಹವ್ಯಕದಲ್ಲಿ 'ಎ' ಆಗಿಯೇ ಉಳಿದಿದೆ. ಉದಾ: ಅಡಕ್ಕೆ (ಅಡಿಕಿ, ಅಡಕೆ), ಕೆಪ್ಪೆ (ಕಪ್ಪೆ), ಕಾಕೆ (ಕಾಗೆ), ಬೆಣ್ಣೆ, ನಡೆ (ನಡಿ), ಹೊಳೆ (ಹೊಳಿ), ಬರೆ (ಬರಿ), ಕೊಳೆ ಇತ್ಯಾದಿ. ಪದಾದಿಯಲ್ಲಿ ಬರುವ 'ಎ'ಕಾರ, 'ಒ'ಕಾರಗಳು ಮೈಸೂರು ಧಾರವಾಡ ಗುಲ್ಬರ್ಗಾಗಳ ಕಡೆ 'ಯ', 'ವ'ಗಳಾಗಿ ಪರಿವರ್ತಿತವಾಗಿದ್ದರೆ, ಹವ್ಯಕದಲ್ಲಿ ಎ, ಒ ಗಳಾಗಿಯೇ ಉಳಿದಿವೆ. ಉದಾ: ಒಣಕ್ಕೆ (ಒನಕೆ>ವನ್ಕೆ), ಓಲೆ (ಓಲೆ>ವಾಲೆ), ಎದೆ (ಎದೆ>ಯದಿ), ಓರೆ (ಓರೆ>ವಾರಿ) ಇತ್ಯಾದಿ ಹವ್ಯಕಭಾಷೆಯಲ್ಲಿ ಹಳಗನ್ನಡದಲ್ಲಿದ್ದ ದೀರ್ಘಸ್ವರ ಶಬ್ದಗಳಲ್ಲಿ ಮತ್ತು ಮೂರುಅಕ್ಷರ ಶಬ್ದಗಳಲ್ಲಿ ಬಿಂದುಲೋಪವಾಗದೆ ಹಾಗೇ ಉಳಿದು ಬಂದಿದೆ. ಉದಾ: ದಾಂಟು, ನೂಂಕು, ಅವುಂಕು, ಮುರುಂಟು. ಇಲ್ಲಿ ಬಿಂದು ಅನುನಾಸಿಕದ ಉಚ್ಚಾರಣೆ ಪಡೆಯುತ್ತದೆ.

ಮೈಸೂರು–ಗುಲ್ಬರ್ಗಾ ಕನ್ನಡ:

ಬಿಜಾಪುರದಿಂದ ಆಚೆಗೆ ಗುಲ್ಬರ್ಗಾ ಕಡೆ ಉರ್ದುವಿನ ಪ್ರಭಾವದಿಂದ ಆ ಭಾಷೆಯ ಶಬ್ದಗಳು ಕನ್ನಡದ ಜೊತೆ ಹೆಚ್ಚಾಗಿ ಸೇರಿ ಪ್ರಯೋಗವಾಗುತ್ತವೆ. ಧಾರವಾಡದಂತೆ ಪದಾಂತ್ಯ ಸ್ವರ ಇಕಾರವಾಗಿರುತ್ತವೆ. ಉದಾ: ಅಡಕೆ–ಅಡ್ಕಿ, ಕಾಗೆ–ಕಾಗಿ, ಬೆಣ್ಣೆ–ಬೆಣ್ಣಿ, ಹೊಳೆ–ಹ್ವಳಿ, ಕೊಳೆ–ಕ್ವಳಿ ಇತ್ಯಾದಿ. ಮೂರಕ್ಷರಗಳುಳ್ಳ ಶಬ್ದಗಳಲ್ಲಿ ಎರಡನೆಯ ಸ್ವರ ಲೋಪವಾಗಿರುವುದು ಹೆಚ್ಚಾಗಿ ಗುಲ್ಬರ್ಗಾ ಕನ್ನಡದಲ್ಲಿ ಕಂಡುಬರುತ್ತದೆ. (ಮೈಸೂರು-ಮಂಡ್ಯ ಕಡೆಯೂ ಇದು ಉಂಟು). ಉದಾ: ಹಗಲು–ಹಗ್ಲ (ಇಲ್ಲಿ ಪದಾಂತ್ಯ ಸ್ವರ ಉ>ಅ ಆಗಿದೆ), ಬಾಗಿಲು–ಬಾಗ್ಲ, ಕುದುರೆ–ಕುದ್ರಿ, ಅಡಿಕೆ–ಅಡ್ಕಿ, ಸಾಸಿವೆ–ಸಾಸ್ವಿ, ಹೆಂಡತಿ–ಹೆಂತ್ತಿ, ಹೆಗ್ಗಣ–ಹೆಗ್ಣ, ಅತ್ತಿಗೆ–ಅತ್ಗಿ, ತಕ್ಕಡಿ–ತಕ್ಡಿ. ಮೈಸೂರು ಮಂಡ್ಯ ಕಡೆಯೂ ಇದುಂಟು, ಜೊತೆಗೆ ಹಕಾರ ಉಚ್ಚಾರಣೆಯೇ ಇರುವುದಿಲ್ಲ. ಮಂಡ್ಯ ಕನ್ನಡದಲ್ಲಂತೂ 'ಹ'

ಸಂಪೂರ್ಣ ಲೋಪವಾಗಿದೆ. ಹೆಗ್ಗಣ–ಎಗ್ಣ, ಹಣ್ಣು–ಅಣ್ಣು, ಹುತ್ತ–ಉತ್ತ, ಹಕ್ಕಿ–ಅಕ್ಕಿ, ಹೆಂಡತಿ–ಎಣ್ತಿ, ಹಾಲು–ಆಲು, ಹಗಲು–ಅಗ್ಲು, ಹೊತ್ತಾರೆ–ಒತ್ತಾರೆ, ಹೋಗು–ಓಗು ಇತ್ಯಾದಿ. ಗುಲ್ಬರ್ಗಾ ಕನ್ನಡದಲ್ಲೂ ಒ>ವ ಆಗಿದೆ. ಉದಾ: ಒನಕೆ–ವಣ್ಕಿ, ಒಳಗೆ–ವಳ್ಗ, ಒಲೆ–ವಾಲಿ. 'ಮ'ಕಾರದ ಮುಂದೆ ಬರುವ ಒ, ಓ ಗಳು ಅ, ಆ ಗಳಾಗಿವೆ. ಮೊಳಕೆ–ಮಳ್ಕೆ, ಮೊಲ–ಮಲ, ಮೊರ–ಮರ, ಮೋಡ–ಮಾಡ, ಮೋಸ–ಮಾಸ, ಮೋರೆ–ಮಾರಿ ಇತ್ಯಾದಿ. ಮೈಸೂರು–ಮಂಡ್ಯ ಕಡೆ ಈ ಬದಲಾವಣೆ ಕ್ವಚಿತ್ತಾಗಿ ನಡೆದಿದೆ. ಇನ್ನು ಕೆಲವು ವಿಶಿಷ್ಟ ಬದಲಾವಣೆಗಳು ನಿಯತವೆಂಬಂತೆ ಕಾಣಬರುತ್ತವೆ. ಹಿಂದೆ ಹೇಳಿದಂತೆ ಮೂರಕ್ಷರದ ಶಬ್ದಗಳಲ್ಲಿ ಎರಡನೆಯ ವ್ಯಂಜನ 'ರ'ಕಾರವಾಗಿದ್ದರೆ, ಮೂರನೆಯದು 'ಡ'ಕಾರವಾಗಿದ್ದರೆ ಅವು ಬಳ್ಳಾರಿ ಕಡೆ ರ>ಳ ಆಗುತ್ತದೆ, ಗುಲ್ಬರ್ಗಾ ಕಡೆ ದ್ವಿತ್ವ 'ಡ' ಆಗುತ್ತದೆ, ಮಂಡ್ಯ ಕಡೆ ರ>ಅನುಸ್ವಾರ ಆಗುತ್ತದೆ. ಉದಾ:

| | | | |
|---|---|---|---|
| ಕುರುಡ | ಕುಳ್ಡ (ಬ) | ಕುಡ್ಡ (ಗು) | ಕುಂಡ (ಮಂಡ್ಯ) |
| ಕರಡಿ | ಕಳ್ಡಿ | ಕಡ್ಡಿ | ಕಲ್ಡಿ |
| ಬುರುಡೆ | ಬುಳ್ಡೆ | ಬುಡ್ಡಿ | ಬುಂಡೆ |
| ಹೊರಡು | ವಳ್ಡು | — | ವಂಡು |
| ಎರಡು | ಯಳ್ಡು | ಯಡ್ಡು | ಯಳ್ಡು |

ಬಳ್ಳಾರಿ, ಗುಲ್ಬರ್ಗಾ ಕಡೆ ವ್ಯವಸ್ಥಿತವಾಗಿ ಈ ವ್ಯತ್ಯಾಸಗಳು ಕಾಣಬಂದರೆ ಮಂಡ್ಯದ ಕಡೆ ಮಿಶ್ರರೂಪಗಳು ಕಂಡುಬರುತ್ತವೆ. ಡಿ. ಎನ್. ಶಂಕರಭಟ್ಟರು ಇನ್ನೂ ವಿಸ್ತಾರವಾಗಿ ಹವ್ಯಕ, ಬಿಜಾಪುರ, ಬಳ್ಳಾರಿ, ಗುಲ್ಬರ್ಗಾ, ಮೈಸೂರು, ನಂಜನಗೂಡು, ಕೆ. ಆರ್. ನಗರ ಮುಂತಾದ ಕಡೆಯ ಕನ್ನಡಗಳ ವೈಲಕ್ಷಣ್ಯಗಳನ್ನೂ, ವ್ಯಾಕರಣದಲ್ಲಾಗಿರುವ ಮಾರ್ಪಾಟುಗಳನ್ನೂ ಗುರುತಿಸಿದ್ದಾರೆ.

**ಪ್ರಾಚೀನ ಕನ್ನಡದಲ್ಲಿ ಉತ್ತರ ದಕ್ಷಿಣ ಮಾರ್ಗಗಳು :**

ಈಗಿನಂತೆ ಪ್ರಾಚೀನ ಕಾಲದಲ್ಲಿಯೂ ಕನ್ನಡದಲ್ಲಿ ಪ್ರಾದೇಶಿಕ ಭೇದಗಳು ಇದ್ದಿರಬಹುದು. ಆಗಲೂ ಕರ್ನಾಟಕ ವಿಸ್ತಾರವಾಗಿದ್ದ ಪ್ರದೇಶವಾಗಿದ್ದು ಬೇರೆ ಬೇರೆ ಆಧಿಪತ್ಯ ಹಾಗೂ ಭಾಷಾ ಪ್ರಭಾವಗಳಿಗೆ ಒಳಗಾಗಿತ್ತು. ಪಂಪನೇ ಪುಲಿಗೆಱೆ, ಒಂಕುಂದಗಳ ನಡುವಿನ ಕನ್ನಡವನ್ನು ತಿರುಳ್ಗನ್ನಡ ಎಂದು ಕರೆದಿದ್ದಾನೆ. ಅದಕ್ಕೂ ಹಿಂದೆ ಕವಿರಾಜಮಾರ್ಗಕಾರ 'ಕನ್ನಡಂಗಳೊಳ್' ಎಂದು ಬಹುವಚನದಲ್ಲಿ ಹೇಳಿದ್ದಾನೆ, ಅಲ್ಲದೆ 'ದೇಶಿ ಬೇಱೆವೇಱಪ್ಪುದಱಿಂ' ಎಂದಿದ್ದಾನೆ. ಆದರೆ ಬೇರೆ ಸಂದರ್ಭದಲ್ಲಿ ಆತ ಹೇಳುವ ದಕ್ಷಿಣೋತ್ತರ ಮಾರ್ಗಗಳಿಗೂ ಈ 'ಕನ್ನಡಂಗಳ್'ಗೂ ಸಂಬಂಧವಿದೆಯೇ ಎಂಬುದು ಸಾಕಷ್ಟು ವಾದವಿವಾದಕ್ಕೆ ಅವಕಾಶ ಮಾಡಿಕೊಟ್ಟಿದೆ.

ಕವಿರಾಜಮಾರ್ಗಕಾರ ತನ್ನ 'ಕವಿರಾಜಮಾರ್ಗ'ದ ಎರಡನೆಯ ಪರಿಚ್ಛೇದದಲ್ಲಿ ಕಾವ್ಯದ ಗುಣಗಳನ್ನು ಕುರಿತು ಚರ್ಚಿಸುವಾಗ 'ಮಾರ್ಗ'ಗಳ ಬಗ್ಗೆ ಹೇಳಿದ್ದಾನೆ. ದಂಡಿಯ 'ಕಾವ್ಯಾದರ್ಶ'ದಲ್ಲಿ ಬರುವ ಸಂಸ್ಕೃತ ಕಾವ್ಯಗಳಿಗೆ ಸಂಬಂಧಿಸಿದ ಗೌಡೀ, ವೈದರ್ಭೀ ಮಾರ್ಗಗಳನ್ನು ಕುರಿತು ಹೇಳುತ್ತ ಕನ್ನಡದಲ್ಲಿಯೂ ಹಾಗೆಯೇ ದಕ್ಷಿಣೋತ್ತರ ಮಾರ್ಗಗಳಿವೆ ಎಂದು ತಿಳಿಸುತ್ತಾನೆ. ಇನ್ನೊಂದೆಡೆ ಅದೇ ಪರಿಚ್ಛೇದದಲ್ಲಿ ಆ ಮಾರ್ಗಗಳ ವೈಶಿಷ್ಟ್ಯ ಮತ್ತು ವ್ಯತ್ಯಾಸಗಳನ್ನು ತಿಳಿಸುತ್ತಾನೆ:

| | ದಕ್ಷಿಣ ಮಾರ್ಗ | ಉತ್ತರ ಮಾರ್ಗ | ಉತ್ತರೋತ್ತರ ಮಾರ್ಗ |
|---|---|---|---|
| ೧. | ನೋಟಪ್ಪೆನ್, ಬೇಟಪ್ಪೆನ್ | ನೋಡುವೆನ್, ಬೇಡುವೆನ್ | — |

ಆದರೆ ಈ ನಿಯಮ ಎಲ್ಲ ಶಬ್ದಗಳಿಗೂ ಅನ್ವಯಿಸುವುದಿಲ್ಲ. ಎಲ್ಲ ಮಾರ್ಗಗಳಲ್ಲೂ ಸೂಡುವೆನ್, ಕೂಡುವೆನ್, ಕಾಡುವೆನ್, ತೋಡುವೆನ್ ಎನ್ನಬೇಕೇ ಹೊರತು, ಸೂಟಪ್ಪೆನ್ ಕೂಟಪ್ಪೆನ್ ಕಾಟಪ್ಪೆನ್ ತೋಟಪ್ಪೆನ್ ಎನ್ನಬಾರದು. ಅಂದರೆ ಡ>ಟ ಎಲ್ಲ ಕಡೆ ಮಾಡಬಾರದು—ಎಂದಿದ್ದಾನೆ.

| | | | |
|---|---|---|---|
| ೨. | ಬರಿಸುವೆನ್, ಇರಿಸುವೆನ್, ತರಿಸುವೆನ್. | ಬರಿಪೆನ್, ಇರಿಪೆನ್, ತರಿಪೆನ್. | ಬರಿಪ್ಪೆನ್, ಇರಿಪ್ಪೆನ್, ತರಿಪ್ಪೆನ್. |

ಆದರೆ ಈ ನಿಯಮದಂತೆ ಎಲ್ಲ ಮಾರ್ಗಗಳಲ್ಲಿಯೂ ಪರಸು, ಬೆರಸುಗಳನ್ನು ಪ್ರಯೋಗಿಸಬಾರದು. ಅಂದರೆ ನಿಯತವಾಗಿ ಎಲ್ಲೆಡೆ ಪರಸುವೆನ್, ಬೆರಸುವೆನ್ ಎಂದು ಬರುತ್ತವೆಯೇ ಹೊರತು ಪರಪೆನ್, ಬೆರಪೆನ್ ಎಂದು ಮಾಡಲಾಗದು—ಎನ್ನುತ್ತಾನೆ.

ಕವಿರಾಜಮಾರ್ಗಕಾರನಲ್ಲದೆ ಭಟ್ಟಾಕಳಂಕ ತನ್ನ 'ಶಬ್ದಾನುಶಾಸನ'ದಲ್ಲಿ ದಕ್ಷಿಣೋತ್ತರ ಮಾರ್ಗಗಳುಂಟೆಂದು ಒಪ್ಪಿ ಕೊಡುವ ಉದಾಹರಣೆಗಳು ಇವು:

| | | |
|---|---|---|
| ಆನ್, ಆಮ್ (ಸರ್ವನಾಮ ಉತ್ತಮಪುರುಷ) | ನಾನ್, ನಾಮ್ | — |

ಮಾರ್ಗಭೇದ ಉಂಟು ಎನ್ನುವವರ ವಾದ: ಮೇಲಿನ ಕವಿರಾಜಮಾರ್ಗಕಾರ ಹಾಗೂ ಭಟ್ಟಾಕಳಂಕರ ನಿರೂಪಣೆ, ಉದಾಹರಣೆಗಳು ವಿವಾದಕ್ಕೆ ಎಡೆಗೊಟ್ಟುವು. ವಿದ್ವಾಂಸರಲ್ಲಿ ಎರಡು ಬಗೆಯ ಅಭಿಪ್ರಾಯ ಉಂಟಾದುವು. ಮಾರ್ಗಭೇದ ಉಂಟು ಎನ್ನುವವರು ಭಾಷಾಶಾಸ್ತ್ರ ದೃಷ್ಟಿಯಿಂದ ವಿವರಣೆ, ಸಮರ್ಥನೆ ನೀಡುವ ಪ್ರಯತ್ನ ಮಾಡಿದ್ದಾರೆ. ಅವರ ಪ್ರಕಾರ ತಮಿಳು-ತೆಲುಗುಗಳ ಪ್ರಭಾವ ಮಾರ್ಗಭೇದ ಆಗಲು ಕಾರಣ. 'ಟ'ಕಾರ ತಮಿಳಿನಲ್ಲಿದೆ, ತೆಲುಗಿನಲ್ಲಿಲ್ಲ. ತಮಿಳಿನಲ್ಲಿ ವ್ಯಂಜನಾಂತ ಶಬ್ದಗಳಿರುವ ಕಾರಣ ನೋಡು+ವ+ಎನ್ ಸೇರಿದಾಗ ದಕ್ಷಿಣಮಾರ್ಗದಲ್ಲಿ ತಮಿಳಿನ ಪ್ರಭಾವದಿಂದ 'ಡ'ಕ್ಕೆ 'ಟ' ಆದೇಶವಾಗಿ ಡ>ಟ ಆಗುತ್ತದೆ, ನೋಟಪ್ಪೆನ್

ಎಂದಾಗುತ್ತದೆ. ಅಲ್ಲಿ 'ನೋಡು'ವಿನ 'ಉ' ಸ್ವರಲೋಪವಾಗುತ್ತದೆ. ತೆಲುಗಿನಲ್ಲಿ ಸ್ವರಾಂತ ಶಬ್ದಗಳು ಹೆಚ್ಚು. ಆದ್ದರಿಂದ 'ಉ' ಉಳಿದು, ತೆಲುಗಿನಲ್ಲಿ 'ಟಿ' ಇಲ್ಲವಾದ ಕಾರಣ, ಆ ಪ್ರಭಾವದಿಂದ, ಉತ್ತರಮಾರ್ಗದಲ್ಲಿ ನೋಡುವೆನ್ ಎಂದಾಗುತ್ತದೆ. ಹಾಗೇ ತಮಿಳಿನ ಪ್ರಭಾವದಿಂದ ದಕ್ಷಿಣಮಾರ್ಗದಲ್ಲಿ 'ಆನ್' ಎಂದೂ, ತೆಲುಗಿನ ಪ್ರಭಾವದಿಂದ ಉತ್ತರಮಾರ್ಗದಲ್ಲಿ ನಾನ್ ಎಂದೂ ಆಗುತ್ತದೆ. ಆದರೆ ಉಳಿದ ಕೆಲವು ಶಬ್ದಗಳಾದ ಬರಿಸುವೆನ್, ಬರಿಪೆನ್, ಬರಿಪ್ಪೆನ್ ಹೇಗೆ ಆದುವು ಎಂಬುದನ್ನು ಈ ವಾದ ಮಂಡಿಸುವವರು ವಿವರಿಸುವುದಿಲ್ಲ.

ಮಾರ್ಗಭೇದ ಇಲ್ಲ ಎನ್ನುವವರ ವಾದ: ಕವಿರಾಜಮಾರ್ಗಕಾರನಿಗೂ ಹಿಂದೆ ಮಾರ್ಗಭೇದ ಇತ್ತೊ ಇಲ್ಲವೊ ತಿಳಿಯುವುದಿಲ್ಲ. ಅವನ ಕಾಲದಲ್ಲಿ ಮತ್ತು ಅವನ ಅನಂತರದ ಕವಿಗಳ ಕಾಲದಲ್ಲಿ ಕೃತಿಗಳಲ್ಲಿ ಈ ವ್ಯತ್ಯಾಸ ಕಾಣಬರುವುದಿಲ್ಲ. 'ಪಂಪ ಭಾರತ'ದಲ್ಲಿ ನೋಟ್ಟಿ, ಮಾಟ್ಟಿ ರೂಪಗಳಿವೆ. ಹಾಗಾದರೆ ಉತ್ತರದ ಪಂಪ ದಕ್ಷಿಣ ಮಾರ್ಗಕ್ಕೆ ಸೇರಬೇಕಾಗುತ್ತದೆ. ಅವನ 'ಆದಿಪುರಾಣ'ದಲ್ಲಿ 'ಶೋಕಿಪ್ಪ' ರೂಪವಿದೆ. ಈಗ ಆತ ಉತ್ತರೋತ್ತರ ಮಾರ್ಗಕ್ಕೆ ಸೇರಬೇಕೆ? ಅಲ್ಲದೆ, ಶಿವಮೊಗ್ಗದ ಒಂದು ಶಾಸನದಲ್ಲಿ 'ಪುರುಡಿಪ್ಪ' ರೂಪವಿದೆ. ಶಿವಮೊಗ್ಗ ಎಲ್ಲಿದೆ? 'ಪಂಪರಾಮಾಯಣ' ದಲ್ಲಿ ನಮಗೆ, ಎಮ್ಮೊಳ್ ಎರಡೂ ರೂಪಗಳಿವೆ. ಇನ್ನು ಭಾಷಾಶಾಸ್ತ್ರದ ದೃಷ್ಟಿ ಯಿಂದ ಹೇಳುವುದಾದರೆ ತೆಲುಗಿನಲ್ಲಿ ಈ 'ಟಿ' ಇಲ್ಲದಿರಬಹುದು. ಕವಿರಾಜಮಾರ್ಗ ಕಾರನ ಕಾಲಕ್ಕೆ ಇದ್ದಿರಬೇಕು. ಪೂರ್ವಚಾಲುಕ್ಯರಾಜ ಯುದ್ಧಮಲ್ಲನ (ಕ್ರಿ.ಶ. ೯೨೭-೯೩೪) ಬೆಜವಾಡದ ತೆಲುಗು ಶಾಸನದಲ್ಲಿ 'ಟಿ' ಪ್ರಯೋಗವಿದೆ. ತೆಲುಗಿನಲ್ಲಿ 'ನೇನು' ಎಂದು ಒಂದೇ ರೂಪವಲ್ಲ 'ಏನು' (ಆನ್ ಎಂಬುದಕ್ಕೆ ಸಮ) ಎಂಬುದೂ ಇದೆ. ದಕ್ಷಿಣಮಾರ್ಗಕ್ಕೆ ಸೇರಬೇಕಾದ ಕವಿಗಳ ಕೃತಿಗಳಲ್ಲಿ 'ನಾನ್' ರೂಪ ಸಿಗುತ್ತದೆ. ಆದ್ದರಿಂದ ಭಾಷಾಶಾಸ್ತ್ರದ ದೃಷ್ಟಿಯಿಂದ ತಮಿಳು-ತೆಲುಗುಗಳ ಪ್ರಭಾವ ದಿಂದ ದಕ್ಷಿಣೋತ್ತರ ಮಾರ್ಗಗಳಾದುವೆಂದು ಸಾಧಿಸುವುದು ಸರಿಯಲ್ಲ.

ಈ ಎರಡೂ ಪಕ್ಷದ ವಾದಗಳಲ್ಲದೆ ಬೇರೆ ಅಭಿಪ್ರಾಯಗಳೂ ವ್ಯಕ್ತವಾಗಿವೆ. ಆರ್. ರಘುನಾಥರಾಯರು ಇಲ್ಲಿ ಹೇಳಿರುವ ದಕ್ಷಿಣ ಮಾರ್ಗವೆಂದರೆ ಹಳಗನ್ನಡ, ಉತ್ತರ ಮಾರ್ಗವೆಂದರೆ ಹೊಸಗನ್ನಡ; ಅಥವಾ ಇವು ಪ್ರದೇಶಭೇದವಾದುದರಿಂದ ತಮಿಳುಮಾರ್ಗದ ಕನ್ನಡ, ತೆಲುಗುಮಾರ್ಗದ ಕನ್ನಡ ಎಂದೂ ಹೇಳಬಹುದು ಎನ್ನುತ್ತಾರೆ. ಅಲ್ಲದೆ ಕ್ರಿ.ಶ. ೧೪ನೇ ಶತಮಾನದಿಂದೀಚೆಗೆ ಮಿಶ್ರಮಾರ್ಗವಿತ್ತೆಂದೂ, ಕುಮಾರವ್ಯಾಸ ಲಕ್ಷ್ಮೀಶರು ಈ ಮಾರ್ಗಕ್ಕೆ ಸೇರುತ್ತಾರೆಂದೂ ಹೇಳುತ್ತಾರೆ. ಪ್ರ. ಗೋ. ಕುಲಕರಣಿಯವರು ಉತ್ತರಮಾರ್ಗದ ಬರಿಪೆನ್, ಇರಿಪೆನ್, ತರಿಪೆನ್ ಗಳು ತಮಿಳಿಗೆ ಸಮೀಪವಾದವುಗಳು, ಉತ್ತರೋತ್ತರಮಾರ್ಗದವೆಂದು ಹೇಳುವ ಬರಿಪ್ಪೆನ್, ಇರಿಪ್ಪೆನ್, ತರಿಪ್ಪೆನ್‌ಗಳೂ ತಮಿಳಿನ ರೂಪಗಳೇ ಆಗಿವೆ; ತೆಲುಗಿನ

ಪ್ರಭಾವದ ಪ್ರದೇಶಗಳಲ್ಲಿ ಈ ರೂಪಗಳು ಹೇಗೆ ಬಂದುವು? ಆದ್ದರಿಂದ ಕವಿರಾಜಮಾರ್ಗಕಾರನ ದಕ್ಷಿಣೋತ್ತರ ಮಾರ್ಗಕ್ಕೂ ತಮಿಳು–ತೆಲುಗುಗಳಿಗೂ ಸಂಬಂಧವಿಲ್ಲ ಎನ್ನುತ್ತಾರೆ. ಅಲ್ಲದೆ ಕನ್ನಡದಲ್ಲಿ ಆನ್, ನಾನ್ ಎರಡೂ ರೂಪಗಳಿದ್ದುವು, ತಮಿಳಿನಲ್ಲೂ ಯಾನ್, ನಾನ್‌ಗಳಿವೆ, ಹಾಗೇ ತೆಲುಗಿನಲ್ಲೂ ಏನು, ನೇನು ಎರಡೂ ರೂಪಗಳಿವೆ. ಆದ್ದರಿಂದ ಇದು ಭಾಷಾ ಪ್ರಭಾವಕ್ಕೆ ಸಂಬಂಧಿಸಿದ್ದಲ್ಲ ಎನ್ನಬಹುದು. ಕವಿರಾಜಮಾರ್ಗಕಾರ ಆನ್, ನಾನ್‌ಗಳನ್ನು ಉಲ್ಲೇಖಿಸಿಯೂ ಇಲ್ಲ.

ಇಲ್ಲಿ ಮುಖ್ಯ ಗಮನಿಸಬೇಕಾದ ಅಂಶ ಕವಿರಾಜಮಾರ್ಗಕಾರ ವ್ಯಾಕರಣ ವಿಷಯವನ್ನು ಹೇಳುತ್ತಿಲ್ಲ ಎಂಬುದು. 'ಕವಿರಾಜಮಾರ್ಗ' ಭಾಮಹನ 'ಕಾವ್ಯಾಲಂಕಾರ' ಮತ್ತು ದಂಡಿಯ 'ಕಾವ್ಯಾದರ್ಶ'ಗಳ ಬಹುಪಾಲು ಅನುಸರಣೆಯೇ ಆಗಿದೆ, ಅನುವಾದ ಎಂದೇ ಹೇಳಬಹುದು. ದಂಡಿ ಕಾವ್ಯದ ದಶಗುಣಗಳನ್ನು ಹೇಳುವಾಗ ಯಾವ ಯಾವ ಗುಣಗಳು ಯಾವ ಯಾವ 'ರೀತಿ'ಗಳಲ್ಲಿ ಹೆಚ್ಚು ಪ್ರಚುರ ಎಂದು ತಿಳಿಸುತ್ತಾ, ವೈದರ್ಭೀ–ಗೌಡೀ ರೀತಿಗಳ ವ್ಯತ್ಯಾಸವನ್ನು ವಿವರಿಸಿದ್ದಾನೆ. ಕವಿರಾಜಮಾರ್ಗಕಾರ ಇದನ್ನನುಸರಿಸಿ ಹೇಳುವಾಗ ಕನ್ನಡದಲ್ಲೂ ಕಾವ್ಯ ರೀತಿ ಅಥವಾ ಮಾರ್ಗಭೇದಗಳನ್ನು ಹೇಳಲೇಬೇಕೆಂಬ ಕಾರಣವೋ, ಅಥವಾ ಕರ್ನಾಟಕದ ಉತ್ತರ ಮತ್ತು ದಕ್ಷಿಣದಲ್ಲಿ ಸ್ಥೂಲವಾಗಿ ರೂಢಿಯಲ್ಲಿದ್ದ ಪ್ರಾಂತಭಾಷಾ ವೈಲಕ್ಷಣ್ಯಗಳನ್ನು ಗಮನಿಸಿಯೋ ಅದನ್ನೇ ಅಲಂಕಾರ ಶಾಸ್ತ್ರದ ರೀತಿಭೇದಕ್ಕೆ ಅನ್ವಯಿಸಲು ಹೋಗಿ ಗೊಂದಲಕ್ಕೀಡಾಗಿದ್ದಾನೆ. ದಕ್ಷಿಣೋತ್ತರ ಮಾರ್ಗಭೇದ ತಿಳಿಸಲು ಅವನೇ ಕೊಡುವ ಉದಾಹರಣೆಯ ಈ ವೃತ್ತ ನೋಡಿ:

ತ್ರಿದಶಗಣೇಶಮೌಳಿಮಣಿಪೀಠನಿಷೇವಿಗಳೊಳ್ ಮುನೀಂದ್ರನಾ
ಪದಯುಗಳಂಗಳೊಳ್ ಮುದದೆ ಬಾಗುವೆನೆಂಬುದು ದಕ್ಷಿಣಾಯನಂ
ವಿದಿತಸುರಾಧಿರಾಜಮುಕುಟಾಗ್ರ ಸಮರ್ಪಿತದೊಳ್ ಮುನೀಂದ್ರನಾ
ಪದಯುಗದೊಳ್ ಮನೋಮುದದೆ ಬಾಗುವೆನೆಂಬುದಿದುತ್ತರಾಯಣಂ

ಕವಿರಾಜಮಾರ್ಗ (ದ್ವಿ.ಪ. ೯೯ನೇ ಪದ್ಯ)

ಮೊದಲೆರಡು ಸಾಲು ದಕ್ಷಿಣಮಾರ್ಗಕ್ಕೂ, ಮೂರು ನಾಲ್ಕನೆಯ ಸಾಲುಗಳು ಉತ್ತರಮಾರ್ಗಕ್ಕೂ ಅನ್ವಯವಾಗುತ್ತವೆ, ವಿಷಯ ಒಂದೇ, ಮುನಿಪಾದಗಳಿಗೆ ಎರಗುವುದು; ಹೇಳುವ ರೀತಿ ಬೇರೆ. ಎರಡೂ ಕಡೆ 'ಬಾಗುವೆನ್' ಬಂದಿದೆ. ಆದ್ದರಿಂದ ಅಲ್ಲಿ ಭೇದವಿಲ್ಲ. ಉಳಿದ ಶಬ್ದಪ್ರಯೋಗದಲ್ಲಿ ಅಂದರೆ ಶೈಲಿಯಲ್ಲಿ, ರೀತಿಯಲ್ಲಿ ವ್ಯತ್ಯಾಸವಿದೆ. ಆದ್ದರಿಂದ ಇಲ್ಲಿ ಕವಿರಾಜಮಾರ್ಗಕಾರನ ಉದ್ದೇಶ ಕಾವ್ಯರೀತಿ, ಮಾರ್ಗಭೇದ ತಿಳಿಸುವುದೇ ಹೊರತು ಪ್ರಾಂತಭೇದವಲ್ಲ. ಎರಡನೆಯದಾಗಿ ಜೋಡಿ ಶಬ್ದರೂಪಗಳಲ್ಲಿ ಒಂದು ಉತ್ತರದಲ್ಲೂ ಇನ್ನೊಂದು ದಕ್ಷಿಣದಲ್ಲೂ ರೂಢಿಯಾಗಿವೆ ಎಂದು ಹೇಳಿದ್ದರೂ ಅವು ಎಲ್ಲ ಕಡೆ ಪ್ರಯೋಗಗೊಂಡಿರುವುದು ಕಾವ್ಯಗಳಿಂದ ಸ್ಪಷ್ಟ.

ಇದಕ್ಕೆ ಇನ್ನೊಂದು ಸಮರ್ಥನೆ ಕೊಡಬಹುದು. ನಾಗವರ್ಮನ ಕಾವ್ಯಾವಲೋಕನದಲ್ಲಿ ದಂಡಿಯ ಕಾವ್ಯಾದರ್ಶದ ಪದ್ಯಗಳನ್ನೇ ಅನುವಾದ ಮಾಡುವಾಗ ಮಾರ್ಗವಿಭಾಗ ಹೇಳಿದ್ದಾನೆ. ಆದರೆ ಅವನು ಹೇಳುವ ಮಾರ್ಗಗಳು ದಕ್ಷಿಣೋತ್ತರ ಮಾರ್ಗಗಳಿಗೆ ಅನ್ವಯಿಸದೆ ಗೌಡೀ, ವೈದರ್ಭೀಗಳಿಗೆ ಅನ್ವಯಿಸುತ್ತವೆ. ನಾಗವರ್ಮ ವೈಯಾಕರಣನೂ ಅಹುದು. ಈ ಬಗ್ಗೆ ಕೇಶಿರಾಜ ಏನೂ ಹೇಳುವುದಿಲ್ಲ. ಭಟ್ಟಾಕಳಂಕನ ಕಾಲಕ್ಕೆ ಕನ್ನಡದಲ್ಲಿ ಪ್ರಾಂತವೈಲಕ್ಷಣ್ಯವಿದ್ದಿರಬೇಕು. ಆದರೆ ಅದನ್ನು ಸ್ಪಷ್ಟವಾಗಿ ತಿಳಿಸಲಾರದೆ ಕವಿರಾಜಮಾರ್ಗಕಾರನಂತೆ ಹೇಳಲು ಹೋಗಿ ಅವನೂ ಗೊಂದಲಕ್ಕೆ ಒಳಗಾಗಿದ್ದಾನೆ.

*

## ೧೨. ಭಾಷೆಯ ಬೆಳವಣಿಗೆ: ಭಾಷಾ ವ್ಯತ್ಯಾಸ

ಜೀವಂತ ಸಮಾಜದ ಪ್ರತಿಬಿಂಬ ಜೀವಂತ ಭಾಷೆ. ಮಾನವನ ಜೀವನ ಅಂತೆಯೆ ಸಮಾಜ ನಿತ್ಯಪರಿವರ್ತಶೀಲ, ಎಷ್ಟೇ ಸಂಪ್ರದಾಯಬದ್ಧ ಎಂದು ಹೇಳಿದರೂ ಸಹ. ಒಂದು ಸಮಾಜ ಎಲ್ಲ ಬಗೆಯ ಸಂಪರ್ಕ ಕಡಿದುಕೊಂಡು ಇದ್ದಾಗ ಮಾತ್ರ ಭಾಷೆಯಲ್ಲಿ ವ್ಯತ್ಯಾಸ, ಬದಲಾವಣೆ ಕಡಿಮೆ. ಆದರೆ ಆಗಲೂ ಸಹ, ಆ ಸಣ್ಣ ಸಮಾಜದಲ್ಲಿಯೇ ವ್ಯಕ್ತಿ ವೈಚಿತ್ರ್ಯಗಳು, ಉಚ್ಚಾರಣೆ ಇತ್ಯಾದಿ ಇಡೀ ಭಾಷೆಯ ಮೇಲೆ ತಿಳಿದೋ ತಿಳಿಯದೆಯೋ ಪ್ರಭಾವ ಬೀರುವುದುಂಟು. ಆಡುನುಡಿಯನ್ನು ಆಡುವ ಪ್ರತಿಯೊಬ್ಬ ವ್ಯಕ್ತಿಯೂ ಅರಿತೊ ಅರಿಯದೆಯೋ ಹೊಸ ಶಬ್ದಗಳನ್ನು ಸೃಷ್ಟಿಸುತ್ತಾನೆ, ಹೊಸ ಉಚ್ಚಾರಣೆಯನ್ನು ನೀಡುತ್ತಾನೆ ಅಥವಾ ಹೊಸ ಅರ್ಥವನ್ನು ಕೊಡುತ್ತಾನೆ. ಅವು ಚಲಾವಣೆಗೆ ಬಂದು ನಿಲ್ಲಬಹುದು, ಇಲ್ಲವೆ ನಶಿಸಬಹುದು. ಹೀಗಾಗಿ ಭಾಷೆಯಲ್ಲಿ ವ್ಯತ್ಯಾಸಗಳು ಮೈದೋರಿ ಶಬ್ದಕೋಶವೂ ಬೆಳೆಯುತ್ತದೆ, ಆಗ ಭಾಷೆಯೂ ಬೆಳೆಯುತ್ತದೆ. "Language is not substance of a finished work but action" ಎಂದು ಒಬ್ಬಾತ ಹೇಳಿದ್ದಾನೆ. ಈ ವ್ಯತ್ಯಾಸಗಳನ್ನು ವಿಕೃತಿ, ವಿಕಾರ, ವಿರೂಪ, ಪರಿವರ್ತನೆ ಎಂದು ವಿಧವಿಧವಾಗಿ ಹೇಳಬಹುದು. ವ್ಯಾಕರಣಕ್ಕೆ ಇಂತಹ ಪರಿವರ್ತನೆಯನ್ನು ತಡೆಯಲು ಸಾಧ್ಯವಿಲ್ಲವಾದರೂ ಒಂದು ಬಿಗಿಯನ್ನು ತರುತ್ತದೆ. ಕೇಶಿರಾಜ ಹಳಗನ್ನಡ ಸ್ವರೂಪ ಉಳಿಸುವ ಪ್ರಯತ್ನಮಾಡಿ ವಿಫಲನಾದ.

ಈ ವ್ಯತ್ಯಾಸಗಳು ನಿಯಮಬದ್ಧ ಎಂಬಂತೆ ನಡೆಯುವುದನ್ನು ಗಮನಿಸಬಹುದು. ಪ್ರಪಂಚದ ಭಾಷೆಗಳ ಅಧ್ಯಯನದಿಂದ ಭಾಷಾವಿಜ್ಞಾನಿಗಳು ಇವುಗಳಿಗೆ ಸೂತ್ರಗಳನ್ನು ರೂಪಿಸಿದ್ದಾರೆ. ಭಾಷೆಯಲ್ಲಿ ಹೀಗೆ ವ್ಯತ್ಯಾಸಗಳು ನಡೆಯಲು ಹಲವು ಕಾರಣಗಳನ್ನು ಹೇಳುತ್ತಾರೆ. ಸೋಮಾರಿತನ, ಸೌಲಭ್ಯಾಕಾಂಕ್ಷೆ, ಉಚ್ಚಾರಣೆಯ ಕಷ್ಟ, ಅಜ್ಞಾನ, ಭ್ರಮೆ, ಸುಧಾರಣೆಗಳು, ನಾಗರಿಕತೆ, ಹೊಸ ಆವಿಷ್ಕಾರಗಳು ಇತ್ಯಾದಿ ಮುಖ್ಯ ಕಾರಣಗಳು. ಹಳಗನ್ನಡ ಹೊಸಗನ್ನಡಕ್ಕೆ ತಿರುಗಿದಾಗ ಆದ ಬದಲಾವಣೆಗಳನ್ನು ಹಿಂದೆ ಹೇಳಿದೆ. ೞ>ಳ, ಱ>ರ, ಪ>ಹ, ವ್ಯಂಜನಾಂತ>ಸ್ವರಾಂತ, ವಿಜಾತೀಯ ಸಂಯುಕ್ತಾಕ್ಷರ>ಸಜಾತೀಯ ಸಂಯುಕ್ತಾಕ್ಷರ, ಲಾಂತ>ಳಾಂತ, ಬಿಂದುಲೋಪ, ಅ-ಎ>ಯಾ, ಓ>ವಾ ಇತ್ಯಾದಿ. ಇವೂ ಸಹ ಭಾಷಾವ್ಯತ್ಯಾಸಗಳಲ್ಲಿಯೇ ಸೇರುತ್ತವೆ. ಇಲ್ಲಿ ಮುಂದೆ ಧ್ವನಿಯಲ್ಲಾಗುವ ವ್ಯತ್ಯಾಸಗಳು, ಅರ್ಥದಲ್ಲಾಗುವ ವ್ಯತ್ಯಾಸಗಳು, ಸಾದೃಶ್ಯಕಾರಣ ಭ್ರಮೆಯಿಂದಾಗುವ ವ್ಯತ್ಯಾಸಗಳನ್ನು ವಿವರಿಸಿದೆ. ಶಬ್ದಕೋಶದ ಬೆಳವಣಿಗೆಯಲ್ಲಿ ಇತರ ಪ್ರಭಾವಗಳನ್ನು, ಪರಭಾಷಾ ಸ್ವೀಕರಣಗಳನ್ನು, ಪ್ರತ್ಯೇಕವಾಗಿ ವಿವೇಚಿಸಲಾಗುವುದು.

## ಧ್ವನಿ ವ್ಯತ್ಯಾಸ

ಭಾಷೆಯಲ್ಲಿ ನಡೆಯುವ ಧ್ವನಿಗಳಿಗೆ ಸಂಬಂಧಿಸಿದ ವ್ಯತ್ಯಾಸಗಳನ್ನು ಧ್ವನಿ ವ್ಯತ್ಯಾಸಗಳು ಎನ್ನುತ್ತಾರೆ. ಭಾಷೆಗಳ ಇತಿಹಾಸವನ್ನು ಗಮನಿಸಿದರೆ ಬಳಕೆಯಲ್ಲಿದ್ದ ಒಂದು ಧ್ವನಿ ಅಥವಾ ಧ್ವನಿಗಳ ಗುಂಪು ಬೇರೆ ಧ್ವನಿ ಅಥವಾ ಧ್ವನಿಗುಂಪಾಗಿ ಮಾರ್ಪಾಟಾಗಿರುವುದನ್ನು ಗುರುತಿಸಬಹುದು. ಈ ಬದಲಾವಣೆಗಳನ್ನು ಧ್ವನಿ ನಿಯಮ (phonetic law) ಎಂದು ಸಾಮಾನ್ಯವಾಗಿ ಕರೆಯಲಾಗಿದೆ. ಈ ಧ್ವನಿ ವ್ಯತ್ಯಾಸ ಕಾರ್ಯವು ಗಮನಕ್ಕೆ ಬಾರದಂತೆ ನಡೆಯುತ್ತದೆ. ಕೆಲವರ ಮಾತಿನಲ್ಲಿ ಹೀಗೆ ಆದ ಬದಲಾವಣೆ ಕ್ರಮೇಣ ಎಲ್ಲ ಕಡೆಗೂ ಹರಡಿಕೊಂಡು ಕೊನೆಗೆ ನಿಯತ ವಾದ ಬದಲಾವಣೆ ಹೊಂದಿಬಿಡುತ್ತದೆ. ಇಲ್ಲಿ ಧ್ವನಿ ವ್ಯತ್ಯಾಸವಾಗುತ್ತದೆಯೇ ಹೊರತು ಅರ್ಥವ್ಯತ್ಯಾಸವಲ್ಲ. ಈ ಧ್ವನಿ ಬದಲಾವಣೆಯನ್ನು ನಿಯಮ ಎಂದು ಕರೆದರೂ ಇದು ದಿಕ್ಸೂಚಿ ತತ್ತ್ವ ಮಾತ್ರ. ಉದಾ: ಇಂಗ್ಲಿಷಿನಲ್ಲಿ [o] ಧ್ವನಿ [u] ಧ್ವನಿಯಾಯಿತು. Cool, moon, doom. ಇಲ್ಲೆಲ್ಲ ಉಚ್ಚಾರಣೆ u ಆದರೂ ಬರವಣಿಗೆಯಲ್ಲಿ o ಉಳಿದಿದೆ. ಈ ಬದಲಾವಣೆಗಳು ಭೌತವಿಜ್ಞಾನದ ನಿಯಮಗಳಂತಲ್ಲ. ಊಹೆಯಾದರೂ ತರ್ಕಬದ್ಧವಾಗಿರುತ್ತವೆ. ಅಪವಾದಗಳಿದ್ದರೆ ಕಂಡುಹಿಡಿಯಲು ನೆರವಾಗುತ್ತವೆ.

೧. ಮಿತವ್ಯಯಾಸಕ್ತಿ (Economy of effort): ಸೌಲಭ್ಯಾಕಾಂಕ್ಷೆ ಎಂದೂ ಹೇಳಬಹುದು. ಉಚ್ಚಾರಣೆಯಲ್ಲಿ ಕಷ್ಟನಿವಾರಣೆ ಮಾಡಿಕೊಂಡು ಸುಲಭ ಗೊಳಿಸಿಕೊಳ್ಳುವುದು. ದೀರ್ಘಶಬ್ದಗಳನ್ನು ಮೊಟಕುಗೊಳಿಸಿಕೊಳ್ಳುವುದು, ಮಹಾಪ್ರಾಣದ ಉಚ್ಚಾರಣೆಯನ್ನು ಅಲ್ಪಪ್ರಾಣ ಮಾಡಿಕೊಳ್ಳುವುದು ಇದರ ಪರಿಣಾಮ. ಉದಾ: ಸ್ನೇಹ>ನೇಹ, ಸ್ತಂಭ>ಕಂಬ, ಎಳ್‌ನೆಯ್>ಎಣ್ಣೆ, ಪೊಸಂತಿಲ್>ಹೊಸಲು (ಪೊಸಂತು+ಇಲ್>ಪೊಸ್ತಿಲ್>ಹೊಸ್ತಿಲು>ಹೊಸಲು. ಇಲ್=ಮನೆ. ಪೊಸಂತು=ಹೊಸದು. ಹಾಗೇ 'ಹಿತ್ತಲು' ಎಂದಾಗ 'ಇಲ್' ಮನೆಯ 'ಪಿಂತು' ಹಿಂಭಾಗ ಎಂದರ್ಥ). ಚರ್ಮಪಟ್ಟಿಕಾ>ಚಮ್ಮಟಿಗೆ> ಚಾವಟಿ>ಚಾಟಿ, ತಣ್+ಕೊಟ್-ತಣ್ಗೊಟ್>ತಂಗಳ್, ಶ್ರೀನಿವಾಸ>ಸೀನ, ಬಂದಿತು>ಬಂತು, ಉಪಾಧ್ಯಾಯ>ಉವಜ್ಝಾಯ>ಉವಜ>ಓಜ, ಕಮ್ಮಾರ, ಚಮ್ಮಾರ (<ಕರ್ಮಕಾರ, ಚರ್ಮಕಾರ) ಇತ್ಯಾದಿ.

೨. ಸ್ವರ ಪ್ರಾರಂಭ (Prosthesis): ಸಂಯುಕ್ತಾಕ್ಷರ ಅಥವಾ ವ್ಯಂಜನ ಗಳಿಂದ ಪ್ರಾರಂಭವಾಗುವ ಶಬ್ದಗಳ ಮೊದಲು ಸ್ವರ ಸೇರಿಸುವುದು. ಇದಕ್ಕೆ ಉಚ್ಚಾರಣೆಯ ಅನುಕೂಲವೇ ಕಾರಣ. ಉದಾ: ಸ್ಕೂಲ್>ಇಸ್ಕೂಲು, ಇಸ್ಕ್ರೂ, ಇಸ್ಟಾಪ್, ಇಸ್ಪಾನರ್ ಇತ್ಯಾದಿ. ಉರ್ದುವಿನಲ್ಲಿ ಸಂಯುಕ್ತಾಕ್ಷರ ಗಳಿಂದ ಶಬ್ದ ಪ್ರಾರಂಭದ ರೂಢಿ ಇಲ್ಲ. ಆದ್ದರಿಂದ ಉರ್ದು ಮಾತನಾಡುವವರಲ್ಲಿ

ಈ ಬಗೆಯ ಉಚ್ಚಾರಣೆ ಹೆಚ್ಚು. ತಮಿಳಿನಲ್ಲಿ ಯ, ರ, ಲ ಗಳಿಂದ ಪ್ರಾರಂಭವಾಗುವ ಶಬ್ದಗಳ ಮೊದಲು ಸ್ವರ ಸೇರುತ್ತದೆ. ರಾಜನ್>ಅರ್ಶನ್ (>ಅರಸ, ಕನ್ನಡಕ್ಕೆ ತಮಿಳು ಮೂಲಕ ಬಂದದ್ದು), ಲೋಕಂ>ಉಲೋಕಂ>ಉಲಗಂ, ರಾಮಂ>ಇರಾಮಂ, ಲಕ್ಷಣ>ಇಲಕ್ಕಣಂ ಇತ್ಯಾದಿ. ಮರಾಠಿಯಲ್ಲಿ ಸ್ನಾನ> ಅಸ್ನಾನ ಆಗಿದೆ.

೩. ಅವಧಾರಣೆ (Emphasis) : ಕೆಲವು ಶಬ್ದಗಳಲ್ಲಿ ಅನಾವಶ್ಯಕವಾಗಿ ಹೊಸ ಅಕ್ಷರ ಸೇರಿಸಿ ಅವಧಾರಣೆ ತರುವುದುಂಟು. ಇದರ ಹಿಂದೆ ಅರ್ಥವನ್ನೋ ಉಚ್ಚಾರಣೆಯನ್ನೋ ಸುಸ್ಪಷ್ಟಪಡಿಸಬೇಕು ಎಂಬ ಮನೋಭಾವ ಇರುವಂತೆ ತೋರುತ್ತದೆ. ಇಂಗ್ಲಿಷಿನಲ್ಲಿ soun> sound, len> lend ಆಗಿವೆ, d ಹೊಸ ಅಕ್ಷರ. Passage, message ಶಬ್ದಗಳು ವ್ಯಾಕರಣ ನಿಯಮ ಪ್ರಕಾರ passager, messager ಆಗಬೇಕು ; ಆದರೆ ನಡುವೆ ಅವಧಾರಣೆಗಾಗಿ 'n' ಸೇರಿ passenger, messenger ಆಗಿವೆ. Admiral ಗೆ ಮೂಲ ಪಾರಸಿ 'ಅಮೀರ' ಶಬ್ದ. ಹಳೆಯ ಇಂಗ್ಲಿಷ್‌ನಲ್ಲಿ Ammiral ಎಂದೇ ಇದೆ. ಆದರೆ ಅನಂತರ 'd' ಸೇರಿ Admiral ಆಯಿತು. 'ದೊಡ್ಡ' ಗುಣವಚನಕ್ಕೆ 'ತನ' ಪ್ರತ್ಯಯ ಸೇರಿಸಿ ಭಾವನಾಮ ಮಾಡಿದರೆ (ಪೆಣ್+ತನ=ಪೆಣ್ತನ ಎಂಬಂತೆ) ದೊಡ್ಡತನ ಆಗಬೇಕು. ಅವಧಾರಣೆ ಕಾರಣ ದೊಡ್ಡಸ್ತನ, ದೊಡ್ಡಸ್ತಿಕೆ ಆಗಿವೆ. ಸಂಸ್ಕೃತದ ಉಷ್ಟ್ರ ತದ್ಭವವಾದಾಗ 'ಒಟ್ಟೆ'ಯಾಗಬೇಕು (ವಡ್ಡಾರಾಧನೆಯಲ್ಲಿ 'ಒಟ್ಟೆಯ ಸೇರಿ' ಪ್ರಯೋಗವಿದೆ), ಆದರೆ 'ಒಂಟೆ'ಯಾಗಿ ರೂಢಿಯಾಯಿತು. ಇಲ್ಲಿ ಅನುನಾಸಿಕ ಅವಧಾರಣೆಯಾಗಿ ಬಂದಿದೆ. ಇಷ್ಟಿಕಾ> ಇಟ್ಟಿಗೆ ಎಂಬುದು ಕೆಲವೆಡೆ 'ಇಟ್ಟಂಗಿ'ಯಾಗಿ ರೂಢಿಯಲ್ಲಿದೆ. ಸುಟ್ಟುರೆಗಾಳಿ> ಸುಂಟರಗಾಳಿ, ಕುಟ್ಟನಿ ('ಕುಟ್ಟನೀಮತ')> ಕುಂಟನಿಯಾಗಿವೆ. ರಾ. ನರಸಿಂಹಾಚಾರ್ಯರು ಪೆಣ್+ತಿ= ಪೆಣ್ತಿಯಾಗಬೇಕು, ಹೆಂಡತಿಯಾಗಿದೆ ; 'ಡ' ಅವಧಾರಣೆ ಎನ್ನುತ್ತಾರೆ.

೪. ಪರಿಹಾರದೀರ್ಘ (Compensatory lengthening) : ದುರ್ಬಲವಾದ ವ್ಯಂಜನ ಲೋಪವಾಗುವುದುಂಟು. ಆಗ ಅದಕ್ಕೆ ಪರಿಹಾರವೆಂಬಂತೆ ಹಿಂದಿನ ಸ್ವರ ದೀರ್ಘವಾಗುತ್ತದೆ. ಉಚ್ಚಾರ ಸೌಲಭ್ಯ ಇದಕ್ಕೆ ಕಾರಣ. ಕನ್ನಡದಲ್ಲಿ ಸ್ವರಾಘಾತ (accent) ಮೊದಲ ಸ್ವರದ ಮೇಲೆ ಬೀಳುವುದೂ ಕಾರಣವೆನ್ನಬಹುದು. ಮಯಣ> ಮೇಣ, ಮಯೂರ> ಮೋರ, ಇಪ್ಪು> ಈಟು, ಎಪ್ಪು> ಏಟು ಇತ್ಯಾದಿ. ತೆಲುಗಿನಲ್ಲಿ $v_1c_1v_2$—ಸೂತ್ರದಂತೆ ಈ ಕಾರ್ಯ ನಡೆಯುತ್ತದೆ. ಸ್ವರಾದಿ ಶಬ್ದದ ಮೊದಲ ಸ್ವರ ವ್ಯಂಜನದ ಮುಂದೆ ಬಂದು ದೀರ್ಘವಾಗುತ್ತದೆ— ಎರಗು> ರೇಗು, ಒರಲ್> ರೋಲು, ಅವರು> ವಾರು, ಉಗುರು> ಗೋರು (ಇಲ್ಲಿ ಉ> ಓ) ಆಗಿವೆ. ಕನ್ನಡದ ಗ್ರಹಚಾರ> ಗಾಚಾರ ಆಗಿರುವುದೂ ಹೀಗೆ.

೫. ರೂಪಸಾಮ್ಯ (Analogy) : ಸೋಮಾರಿತನ, ಸೌಲಭ್ಯಾಕಾಂಕ್ಷೆಗಳಿಂದ ಶಬ್ದಗಳು ಸವೆದು ನಶಿಸುತ್ತವೆಯಾದರೆ, ರೂಪಸಾಮ್ಯ ಅಥವಾ ಸಾಮ್ಯ-ರೂಪದಿಂದ, ಭ್ರಮಾಮೂಲವಾಗಿ ಅಜ್ಞಾನ ಕಾರಣವಾಗಿ ಹೊಸ ಶಬ್ದಗಳು ಸೃಷ್ಟಿಯಾಗುತ್ತವೆ. ಶಬ್ದದ ಸ್ವರೂಪ ಹಾಗೂ ಅರ್ಥವನ್ನು ಎಚ್ಚರಿಕೆಯಿಂದ ತಿಳಿದು ಶಬ್ದ ಸೃಷ್ಟಿಸುವ ಬದಲು ಸಾದೃಶ್ಯ ನೋಡಿ ಯಾವುದೊ ಶಬ್ದದಂತೆ ಮತ್ತೊಂದು ಶಬ್ದ ಸೃಷ್ಟಿಸುವುದು ಸಾಮ್ಯರೂಪ ಶಬ್ದಗಳಿಗೆ ಕಾರಣ. ಹೊದೆದು ಅಥವಾ ಹೊದ್ದು ಕ್ರಿಯಾಪದದ ಮೂಲ ಧಾತು 'ಹೊದಿ' ಅಥವಾ 'ಹೊದೆ' ಎಂದು. ಅದರ ಸಾಮ್ಯದಿಂದ ಕದ್ದು ಎಂಬುದರ ಧಾತು 'ಕಳ್' ಆದರೂ 'ಕದಿ' ಧಾತುವನ್ನು ಸೃಷ್ಟಿಸಲಾಗಿದೆ. ಹಾಗೇ 'ಗೆದ್ದು'ವಿನ ಮೂಲಧಾತು 'ಗೆಲ್'> ಗೆದಿ ಆಗಿದೆ (ಮನೆ ಗೆದ್ದು ಮಾರು ಗೆದಿಬೇಕು). ನಿಲ್ > ನಿಂತು, ಅದರಂತೆ 'ಕೂರು' ಕುಳಿತು ಆಗಬೇಕಿದ್ದುದು 'ಕುಂತು' ಆಗಿದೆ. ದಿವಸ್ಪತಿಯ ಭ್ರಮೆಯಿಂದ 'ವನಸ್ಪತಿ' ಸಿದ್ಧವಾಗಿದೆ. ಬಾ, ಬರ್‌ಗಳ ಗೌರವ ರೂಪ 'ಬನ್ನಿ', ಅದರಂತೆ ಸಲ್ > ಸನ್ನಿ ಗೌರವ ರೂಪ ಬಂದಿದೆ. (ಬಡಭಕ್ತರು ಬಂದರೆ ಎಡೆ ಇಲ್ಲಮಯ್ಯ, ಅತ್ತ ಸನ್ನಿ ಎಂಬರು—ಬಸವಣ್ಣ) ಮದುವೆಯ ಕರೆಯೋಲೆಯಲ್ಲಿ 'ಸೌ||' ಎಂದರೆ ಸೌಭಾಗ್ಯವತಿ. ಇಂಗ್ಲಿಷಿನಲ್ಲಿ ಇದನ್ನು ಅನುಕರಣೆಯ ಭ್ರಮೆಯಿಂದ 'Sow' ಎಂದು ಮುದ್ರಿಸುತ್ತಾರೆ. Sow ಎಂದರೆ ಹೆಣ್ಣು ಹಂದಿ ಎಂದರ್ಥ.

೬. ಸಮರೂಪಧಾರಣೆ (Assimilation) : ಉಚ್ಚಾರಣೆಯ ತೊಂದರೆ ಇದಕ್ಕೆ ಕಾರಣ. ಒಂದು ಶಬ್ದದಲ್ಲಿ ಎರಡು ಬಗೆಯ ಸ್ವರೋಚ್ಚಾರ ಅಥವಾ ವ್ಯಂಜನೋಚ್ಚಾರ ಇದ್ದಲ್ಲಿ ಎರಡು ಬಗೆಯ ಸ್ವರ ಅಥವಾ ವ್ಯಂಜನ ಒಂದೇ ರೂಪಧಾರಣೆ ಮಾಡುವುದು. ಇಲ್ಲಿ ವಿಜಾತೀಯ ಸಂಯುಕ್ತಾಕ್ಷರಗಳು ಸಜಾತೀಯವಾಗುತ್ತವೆ. ಗಱ್ದೆ > ಗರ್ದೆ > ಗದ್ದೆ, ಪೊಱ್ತು > ಪೊರ್ತು > ಪೊತ್ತು > ಹೊತ್ತು, ಕೊೞ್ಬು > ಕೊಬ್ಬು, ಪುೞ್ಗಿ > ಪುಗ್ಗಿ > ಹುಗ್ಗಿ. ಕೊಸ್ತುಂಬರಿ > ಕೊತ್ತುಂಬರಿ, ಕೞುಪು > ಕಳುಹು, ಹಸಿರು > ಹಸುರು, ಬಿರಿಕು > ಬಿರುಕು, ಉಸಿರು > ಉಸುರು, ಮುರಿಕು > ಮುರುಕು, ಚೆದರು > ಚೆದುರು ಇತ್ಯಾದಿ.

೭. ಅಕ್ಷರ ಪಲ್ಲಟ (Metathesis) : ಇದನ್ನು ವರ್ಣಪಲ್ಲಟ, ವರ್ಣವ್ಯತ್ಯಯ ಎಂದೂ ಕರೆಯುತ್ತಾರೆ. ಹಳಗನ್ನಡ–ಹೊಸಗನ್ನಡಗಳನ್ನು ಹೋಲಿಸಿದಾಗ, ಈ ವ್ಯತ್ಯಾಸ ಸ್ಪಷ್ಟವಾಗುತ್ತದೆ. ಸ್ವರ ಅಥವಾ ವ್ಯಂಜನಗಳು ಪಲ್ಲಟ ಅಥವಾ ಸ್ಥಳಾಂತರಗೊಳ್ಳುವುದು. ಅಲರ್ > ಅರಲ್, ಅಸಗ > ಅಗಸ, ವಾರಣಾಸಿ > ಬಾರಣಾಸಿ > ಬನಾರಸ್, ಎಲರ್ > ಎರಲ್, ಮಲರ್ > ಮರಲ್, ಮಱಲ್ > ಮರಳ್ (ಮರಳು, ಮಳಲು, ಮಣಲು), ಕೊಪ್ಪುಳ್ > ಪೊಕ್ಕುಳ್ (ಹೊಕ್ಕಳು), ಪಡರ್ > ಹರಡು, ನಾಲಿಕೇರ > ನಾರಿಕೇಲ, ಅಹುದು > ಹಉದು > ಹೌದು,

ಎಹಗೆ>ಹೇಗೆ, ಫಲಾಹಾರ>ಫರಾಳ, ಪಾದರಸ>ಪಾರದ, ಕಾಗದ>ಕಾದಗ, ಕಾಗಜ್>ಕಾಜಗ ಇತ್ಯಾದಿ.

೮. ಏಕವರ್ಣಲೋಪ (Haplology) : ಸದೃಶಾಕ್ಷರ ಲೋಪವೆಂದೂ ಹೇಳಬಹುದು. ಒಂದು ಶಬ್ದದಲ್ಲಿ ಒಂದೇ ಧ್ವನಿಯ ಅಕ್ಷರಗಳು ಬಂದಾಗ ಒಂದು ಅಕ್ಷರ ಬಿಟ್ಟುಹೋಗುತ್ತದೆ. ಬೆಳಕು+ಕಿಂಡಿ>ಬೆಳಕಿಂಡಿ, ವೀರರಾಜಪೇಟೆ> ವಿರಾಜಪೇಟೆ, ಚೆನ್ನಪ್ಪಪಟ್ಟಣ>ಚೆನ್ನಪಟ್ಟಣ, ಬೀಸಿ+ಇಡು>ಬೀಸಿಡು> ಬಿಸುಡು ಇತ್ಯಾದಿ.

೯. ದ್ವಿರುಕ್ತಿ–ಪುನರುಕ್ತಿ (Tautology) : ಒಂದು ಶಬ್ದದ ಅರ್ಥವು ಅಸ್ಪಷ್ಟವಾದಾಗ, ತಿಳಿಯದಾಗ ಅದೇ ಅರ್ಥದ ಅನ್ಯಭಾಷೆಯ ಶಬ್ದವನ್ನು ಅದರೊಂದಿಗೆ ಸೇರಿಸುವುದು. ಇದು ಅಜ್ಞಾನದಿಂದಾಗುವಂಥದು, ಆದರೂ ರೂಢಿಯಲ್ಲಿ ಅಂಥ ಶಬ್ದಗಳು ಇವೆ. ಕವಿರಾಜಮಾರ್ಗಕಾರ ಇದನ್ನು ಪುನರುಕ್ತದೋಷ ಎಂದಿದ್ದಾನೆ. ಇದನ್ನು ಪ್ರತಿಧ್ವನಿರೂಪಸಮಾಸ (Echo compounds) ಎಂದೂ ಕರೆಯುತ್ತಾರೆ. ಅವಳಿಜವಳಿ, ಕೂಡಲಸಂಗಮ, ಹಳದೀಪೀತಾಂಬರ (ಪೀತ= ಹಳದಿ), ಎಳ್ಳೆಣ್ಣೆ (ಎಳ್+ಎಳ್+ನೆಯ್=ಜಿಡ್ಡು, ತುಪ್ಪ), ಅರೆಬಂಡೆ (ಅಱೆ= ಬಂಡೆ), ಹುಳುಹುಪ್ಪಟೆ, ಅಮಾವಾಸ್ಯೆಕತ್ತಲು, ತಲೆಶಿರೋಭಾರ, ತಿಂಡಿತಿನಿಸು, ಕಾಂಪೌಂಡುಗೋಡೆ, ಗೇಟ್‌ಬಾಗಿಲು, ಪದಚರಣ, ಹಾಲುಖೀರು (ಕ್ಷೀರ>ಖೀರು ಖೀರುವಿಗೆ ಈಗ ಅರ್ಥ ಬೇರೆ). ಇಂಥವು ಎಲ್ಲ ಭಾಷೆಗಳಲ್ಲೂ ಕಾಣಬರುತ್ತವೆ. ಸಂಸ್ಕೃತದಲ್ಲಿ ಮಲಯಪರ್ವತ, ಮಲಯಗಿರಿ ಇವೆ. ಮಲಯ<ಮಲೈ(ದ್ರಾವಿಡ) ದಿಂದ ಬಂದದ್ದು. ತಂಗಳನ್ನ ತಣ್+ಕೂಳ್+ಅನ್ನದಿಂದ ಆದದ್ದು (ಕೂಳ್= ಅನ್ನ). ಹಣ್ಣುಹಂಪಲದಲ್ಲಿ ಹಣ್ಣು+ಹಣ್ (<ಪಣ್)+ಫಲ ಸೇರಿವೆ. ರೋಗ ರುಜಿನ, ನಡುಮಧ್ಯೆ, ಕಾಗದಪತ್ರ, ಗೊಡ್ಡುಹರಟೆ (ಗೊಡ್ಡು=ಹರಟೆ ಎಂದರ್ಥ. ಗೋಷ್ಠಿ>ಗೊಟ್ಟಿ>ಗೊಡ್ಡು. ಪಂಪಭಾರತದಲ್ಲಿ ಗೊಟ್ಟಿ, ಗೊಡ್ಡು ಎರಡು ಪ್ರಯೋಗಗಳೂ ಇವೆ. 'ಮಿಟ್ತಿಗೊಡ್ಡು' ಎಂಬುದನ್ನು fatal talk ಎಂಬರ್ಥದಲ್ಲಿ ಪ್ರಯೋಗಿಸಿದ್ದಾನೆ).

೧೦. ತಪ್ಪು ಸಾಹಚರ್ಯ (False association) : ಬೇರೆ ಭಾಷೆಯ ಶಬ್ದಗಳು ಕಿವಿಗೆ ಬಿದ್ದಾಗ, ಅವನ್ನು ಸರಿಯಾಗಿ ಕೇಳಿಸಿಕೊಳ್ಳದೆಯೋ, ಸರಿಯಾಗಿ ಉಚ್ಚರಿಸಲು ಬಾರದೆಯೋ ಆ ಅರ್ಥವನ್ನೇ ಹೇಳಬೇಕಾದಾಗ, ತಾವು ಕೇಳಿದ್ದ ಶಬ್ದದ ಸಮೀಪ ಉಚ್ಚಾರಣೆಯನ್ನೋ ಅಥವಾ ಆ ಶಬ್ದರೂಪದ ಅನುಕರಣೆಯನ್ನೋ ಮಾಡುವುದುಂಟು. ಇದರಿಂದ ಅನೇಕ ಹೊಸ ಶಬ್ದಗಳು ರೂಢಿಗೆ ಬರುತ್ತವೆ. ಜನ್ಮ>ಜಲ್ಮ, ನೋಟೀಸು>ಲೋಟೀಸು, ನೋಟು>ಲೋಟು, ನರ್ಸ್>ನರಶಿ–ನರಸಮ್ಮ, ಡ್ರೆಸ್>ದಿರಿಸು, ಬ್ರಷ್>ಬುರುಸು. Sovereign

ಎಂಬ ಶಬ್ದ ಮೂಲತಃ ಇಟಾಲಿಯನ್ Sovran ಶಬ್ದ. ಎಂದರೆ ಸಾರ್ವಭೌಮ, ಆಳುವವನು. ಆಳುವುದು ಎಂಬರ್ಥದ reign ಶಬ್ದ ಇಂಗ್ಲಿಷ್‌ನಲ್ಲಿದೆ. ತಪ್ಪು ಸಾಹಚರ್ಯದಿಂದ Sovran ಗೂ reign ಗೂ ಸಂಬಂಧ ಉಂಟಾಗಿ Sovereign ಆಯಿತು. ಮೇರಿ, ಮರಿಯಾ > ಮರಿಯಮ್ಮ, ಮಾರಿಯಮ್ಮ ಸಹ ಉಂಟು. ಇದಕ್ಕೆ ಕನ್ನಡ ಮರಿ, ಮಾರಿ ಶಬ್ದಗಳ ತಪ್ಪು ಸಾಹಚರ್ಯ ಕಾರಣ. ಗ್ಲೋಬ್ > ಗುಳಾಪು ಆಗಿದೆ.

೧೧. ಅಂತ್ಯಾಕ್ಷರ ಲೋಪ (Apocope) : ಅನೇಕ ಶಬ್ದಗಳಲ್ಲಿ ಅವುಗಳ ಕೊನೆಯ ಅಕ್ಷರ ಬಿಟ್ಟುಹೋಗುವುದುಂಟು. ಬಂದನು > ಬಂದ, ತಂದನು > ತಂದ, ಅವನು > ಅವ, ಇವನು > ಇವ (ಇಲ್ಲಿ 'ವ' ಅನುನಾಸಿಕೋಚ್ಚಾರಣೆ ಪಡೆವುದೂ ಉಂಟು). ಇಲ್ಲಿ ಪುಲ್ಲಿಂಗ ಶಬ್ದಗಳೇ ಹೀಗಾಗಿವೆ. ಸ್ತ್ರೀಲಿಂಗ ಶಬ್ದಗಳ ಅಂತ್ಯಾಕ್ಷರ ಲೋಪವಾದರೆ ಅರ್ಥ ಅಸ್ಪಷ್ಟವಾಗುತ್ತದೆ. ಆದ್ದರಿಂದ ಅವು ಬಂದ್ಲು, ಹೋದ್ಲು, ಅವ್ಳು ಆಗುತ್ತವೆ. ಇನ್ನು ಕೆಲವು : ಉಪದ್ರವ > ಉಪದ್ರ, ತಾಪತ್ರಯ > ತಾಪತ್ರೆ, ಬೆಳ್ + ನೆಯ್ > ಬೆಣ್ಣೆ.

೧೨. ಪದಮಧ್ಯಾಕ್ಷರ ಲೋಪ (Syncope) : ಮಿತವ್ಯಯಾಸಕ್ತಿ ಕಾರಣ ಶಬ್ದದ ಮಧ್ಯಾಕ್ಷರ ಬಿಟ್ಟುಹೋಗುತ್ತದೆ. ಬಂದಿತು > ಬಂತು, ಬೀಟ್ ಧಾತುವಿನಿಂದ ಬಿಟ್ಟಿದು > ಬಿಟ್ಟಿತು > ಬಿತ್ತು, ಇರುಳು > ಇಳ್ಳು, ಮಹಾಸತಿ > ಮಾಸತಿ > ಮಾಸ್ತಿ, ಮಹದೇವ > ಮಾದೇವ, ನೆನಪು > ನೆಪ್ಪು, ಪಂಕ್ತಿ > ಪಂತಿ > ಹಂತಿ, ಆವು+ಕಳ್ > ಆಕಳು (ಕಳ್, ಗಳ್ ಬ.ವ. ಪ್ರತ್ಯಯ, ಆವು=ಹಸು) ಇತ್ಯಾದಿ.

೧೩. ಆದಿಸ್ವರಲೋಪ (Aphoersis or Procope) : ಆದಿಯ ಸ್ವರ ಅಥವಾ ಅಕ್ಷರ ಬಿಟ್ಟುಹೋಗುವುದು. ಆಚಾರ್ಯ > ಆಚಾರಿ > ಚಾರಿ ಇತ್ಯಾದಿ

೧೪. ಸ್ವರಭಕ್ತಿ (Anaptyxis) : ದ್ವಿತ್ವಾಕ್ಷರಗಳ ನಡುವೆ ಉಚ್ಚಾರಣಾ ಸೌಲಭ್ಯದಿಂದ ಸ್ವರ ಆಗಮವಾಗಿ, ಶಬ್ದವನ್ನು ವಿರಳಗೊಳಿಸಿ ಹೇಳುವುದು. ಖಡ್ಗ > ಖಡುಗ, ಯುಕ್ತಿ > ಯುಕುತಿ, ದುರ್ಗ > ದುರುಗ, ಭಕ್ತಿ > ಭಕುತಿ, ಹರ್ಷ > ಹರುಷ, ಬ್ರಹ್ಮ > ಬ್ರಮ್ಮ > ಬರುಮ ಇತ್ಯಾದಿ.

೧೫. ಧ್ವನಿಜಾರು (Glide) : ಮೇಲಿನ ಸ್ವರಭಕ್ತಿಯಲ್ಲಿ ಸ್ವರಬಂದು ಶಬ್ದ ವಿರಳವಾದರೆ ಇಲ್ಲಿ ಹೊಸಧ್ವನಿ ಆಗಮವಾಗಿ, ಆದೇಶವಾಗಿ ಬರುವುದುಂಟು. ಉಚ್ಚಾರಸೌಲಭ್ಯ ಇದಕ್ಕೆ ಕಾರಣ. ಅಂ+ಪಡೆ > ಅಂಬೊಡೆ, ತಾಮ್ರ > ತಾಂಬ್ರ, ಶವ > ಶ್ರವ, ತೊಂಬತ್ತು > ತ್ರೊಂಬತ್ತು. ಉಣ್+ಪಳಿ > ಉಂಬಳಿ.

ಇವೇ ಅಲ್ಲದೆ ಇನ್ನೂ ಹಲವು ಬಗೆಯ ಧ್ವನಿವ್ಯತ್ಯಾಸಗಳನ್ನು ಗುರುತಿಸಬಹುದು. ದಂತ > ಜಂತ, ಗೆಳೆಯ > ಗೆಣೆಯ > ಗೆಣ್ಯಾ, ಡಾಬು > ದಾಬು,

ಬಹಳ > ಬಾಳ (phonetic shift), ಮಲಗಿ > ಮನಗಿ ಇತ್ಯಾದಿ. ಧ್ವನಿವ್ಯತ್ಯಾಸ ಕಾರಣವಾಗಿ ಹಳಗನ್ನಡದ ಅಕ್ಷರಗಳೂ ಬಿಟ್ಟುಹೋಗಿವೆ. ಱ, ೞ ಗಳಿಂದ ಕೂಡಿದ ಶಬ್ದಗಳು ಳ, ರ ಜೊತೆ ಸೇರಿಹೋಗಿದ್ದರೂ ಕೆಲವು ಶಬ್ದಗಳು ಮೂಲದ ಅರ್ಥ ಸಮೇತ ಮರೆಯಾಗಿವೆ.

### ಅರ್ಥವ್ಯತ್ಯಾಸ

ಇದುವರೆಗೆ ಭಾಷಾವ್ಯತ್ಯಾಸದಲ್ಲಿ ಮುಖ್ಯವಾಗಿ ಧ್ವನಿವ್ಯತ್ಯಾಸಗಳನ್ನು ತಿಳಿಸಲಾಯಿತು. ಈಗ ಅರ್ಥವ್ಯತ್ಯಾಸವನ್ನು ಗಮನಿಸಬಹುದು. ಭಾಷೆಯ ಹುಟ್ಟನ್ನು ಕುರಿತು ಹೇಳುವಾಗ ಶಬ್ದಕ್ಕೂ ಅರ್ಥಕ್ಕೂ ಇರುವ ಸಂಬಂಧದ ಬಗ್ಗೆ ಇರುವ ವಾದ, ಚರ್ಚೆಗಳನ್ನು ಉಲ್ಲೇಖಿಸಿದೆ. ಒಂದು ಶಬ್ದಕ್ಕೆ ಇದೇ ಅರ್ಥ ಎಂದು ಹೇಗೆ ಆಯಿತು? ಶಬ್ದಕ್ಕೂ ಅರ್ಥಕ್ಕೂ ಆಂತರಿಕ ಸಂಬಂಧವಿದೆಯೇ? ಇದ್ದರೆ ಅದು ತಾತ್ಕಾಲಿಕವೆ, ನಿತ್ಯವೆ? ಈ ಪ್ರಶ್ನೆಗಳಿಗೆ ಪ್ರಾಚೀನ ಭಾರತೀಯರು ಹಾಗೂ ಆಧುನಿಕ ಭಾಷಾವಿಜ್ಞಾನಿಗಳು ಬೇರೆಬೇರೆ ಉತ್ತರ ನೀಡಿದ್ದಾರೆ. ಶಬ್ದದ ಅರ್ಥ ಹೊಳೆಯುವ ಬಗೆಯನ್ನು ಪ್ರಾಚೀನ ಭಾರತೀಯ ವಿದ್ವಾಂಸರು ಸ್ಫೋಟವಾದದಲ್ಲಿ ಹೇಳಿದ್ದಾರೆ. ಆ ಅರ್ಥ ಹೊಳೆಯಲು ಸಂಪ್ರದಾಯ ಪ್ರಜ್ಞೆ ಆವಶ್ಯಕ ಎನ್ನುತ್ತಾರೆ. ಅಂದರೆ ರೂಢಿ ಎಂದೇ ಆಗುತ್ತದೆ. ಆಧುನಿಕರಲ್ಲಿ 'ಅರ್ಥವಿಜ್ಞಾನ' (Semantics) ಪ್ರತ್ಯೇಕ ಶಾಖೆಯಾಗಿ ಬೆಳೆದಿದೆ. ಭಾಷೆ ಅನುಕರಣವೆ, ಯಾದೃಚ್ಛಿಕವೆ ಎಂಬ ಚರ್ಚೆಗಳೂ ಆಗಿವೆ. ಶಬ್ದ–ಅರ್ಥ ಸಂಬಂಧ ಸಹಜವಲ್ಲ, ಆಂತರಿಕವಲ್ಲ, ನಿತ್ಯವಲ್ಲ ಎಂದು ಕೆಲವರ ಅಭಿಪ್ರಾಯ. ಅವರ ಪ್ರಕಾರ 'ಭಾಷೆ' ಎಂಬುದು ಒಂದು ಸಾಮಾಜಿಕ ಒಪ್ಪಂದ (ಅಂದಾಕ್ಷಣ ಜನ ಸೇರಿ ಒಪ್ಪಿ ತೀರ್ಮಾನಿಸಿದರು ಎಂದಲ್ಲ, ರೂಢಿಗೆ ಸಂಬಂಧಿಸಿದ್ದು). ಒಂದು ಸಂಕೇತಕ್ಕೆ ಒಂದು ಅರ್ಥ. ಪರಂಪರೆಯಿಂದ ಸಂಕೇತ ಅರ್ಥ ಬಂದಿರಬಹುದು. ಯಾದೃಚ್ಛಿಕ (Arbitrary) ಎಂದರೆ ಒಪ್ಪಿ ಸ್ವೀಕರಿಸಿದ್ದು; ನೇರ, ಆಂತರಿಕ ಸಂಬಂಧ ಇಲ್ಲದ್ದು.*

* ಉದಾಹರಣೆಗೆ ಮನೆಯ ಮಕ್ಕಳನ್ನು ಗಮನಿಸಿ. ಸಮಾಜದ ಭಾಷೆಯಂತೆ ಮನೆಯಲ್ಲಿ ಮಕ್ಕಳದೇ ಒಂದು ಭಾಷೆ ಇರುತ್ತದೆ. ಬಹುವಾಗಿ ಅನುಕರಣ ಶಬ್ದಗಳಿದ್ದು, ಯಾದೃಚ್ಛಿಕ ಅರ್ಥ ಉಳ್ಳವೂ ಇರುತ್ತವೆ. ಅದನ್ನು ಗಮನಿಸಿದರೆ ಭಾಷೆಯ ಹುಟ್ಟು ಸ್ಪಷ್ಟವಾಗಬಹುದು. ಗ್ರೀಷ್ಮ ಒಂದೂವರೆ ವರ್ಷದ ಮಗು. ಮಾತು ಬರತೊಡಗಿದೆ. ಒಂದೊಂದೇ ಶಬ್ದದಿಂದ ಇಡೀ ವಾಕ್ಯದ ಅರ್ಥ ಸೂಚಿಸಬಲ್ಲುದು. ಅದರದೇ ಪದಕೋಶ ಪ್ರಾರಂಭವಾಗುತ್ತದೆ. ಮಿಯಾವ್, ಬೌಬೌ, ಕಾ ಕಾ, ಅಂಬಾ ಮುಂತಾದ ಅನುಕರಣ ಶಬ್ದಗಳ ಜೊತೆಗೆ ಊಟ, ಜಜ್ಜ, ಕಕ್ಕ, ಛೀ, ಗುಮ್ಮ, ತಾಚಿ, ಮಮ್ಮ, ಪಪ್ಪ ಮುಂತಾದ ಶಬ್ದಗಳನ್ನು ಹಿರಿಯರೂ ಮಗುವಿನೊಂದಿಗೆ ಬಳಸುತ್ತಾರೆ. ಒಂದೊಂದು ಮನೆಯಲ್ಲೂ ಬೇರೆ ಬೇರೆ ಶಬ್ದಗಳಿರಬಹುದು. ಆದರೆ ಆಯಾ ಮನೆಯ ಮಗುವಿಗೆ ಅರ್ಥವಾಗುತ್ತೆ. ಮಗು ಬೆಳೆಯುವವರೆಗೂ ಅದರ ಜೊತೆಗೆ ಮನೆಯವರೆಲ್ಲ ಅದರ ಭಾಷೆಯನ್ನೇ ಬಳಸುತ್ತಾರೆ. ಗ್ರೀಷ್ಮಳಿಗೆ ಟಿ.ವಿ. ವಾರ್ತೆಯ ಪ್ರಾರಂಭದ ಸಂಗೀತ ತುಂಬ ಇಷ್ಟ. ಆಕಸ್ಮಿಕವಾಗಿ

ಒಂದು ಶಬ್ದ ಒಂದು ಸನ್ನಿವೇಶದಲ್ಲಿ ಒಂದು ಅರ್ಥ ಪಡೆದಿದ್ದು, ಕೆಲಕಾಲಾನಂತರ ಬೇರೊಂದು ಸನ್ನಿವೇಶದಲ್ಲಿ ಬೇರೆ ಅರ್ಥ ಪಡೆಯಬಹುದು. ಶಬ್ದದ ಅರ್ಥ ವಿಸ್ತರಿಸಬಹುದು, ಸಂಕುಚಿತವಾಗಬಹುದು. ಆದ್ದರಿಂದ ಶಬ್ದದ ಅರ್ಥ ನಿತ್ಯವೂ ಅಲ್ಲ ಎನ್ನಬಹುದು. ಹೀಗೆ ಶಬ್ದದ ಅರ್ಥಗಳಲ್ಲಿ ಕಾಣಬರುವ ಬದಲಾವಣೆಯನ್ನು 'ಅರ್ಥವ್ಯತ್ಯಾಸ' ಎನ್ನುವುದು. ಉದಾ : ಕನ್ನಡದಲ್ಲಿ 'ಅಮ್ಮ' ಶಬ್ದಕ್ಕೆ ತಂದೆ ಎಂಬ ಅರ್ಥವಿತ್ತು ಈಗ ತಾಯಿ ಎಂದಾಗಿದೆ. ಅಮ್ಮನ ಗಂಧವಾರಣ, ಕೃಷ್ಣಮಾಚಾರಿ ಶಬ್ದಗಳಲ್ಲಿ ಅಪ್ಪ ಎಂದೇ ಅರ್ಥ. ಸೀರೆ ಎಂದರೆ ವಸ್ತ್ರ ಸಾಮಾನ್ಯ. ಕುಮಾರವ್ಯಾಸ 'ಕೃಷ್ಣನ ಸೀರೆ'ಯನ್ನು ಹೇಳುತ್ತಾನೆ. ಈಗ ಹೆಂಗಸರು ಉಡುವುದಕ್ಕೆ ಮಾತ್ರ ಅರ್ಥಸೀಮಿತವಾಗಿದೆ. ಹೀಗೆ ಆಗುವ ಅರ್ಥವ್ಯತ್ಯಾಸಗಳಿಗೆ ನಿಯಮ ಹೇಳುವುದು ಸಾಧ್ಯವಿಲ್ಲವಾದರೂ ಕೆಲವು ಬಗೆಗಳನ್ನು ವಿಂಗಡಿಸಿ ವಿವರಿಸಲು ಸಾಧ್ಯವಿದೆ.

೧. ಸೌಮ್ಯೋಕ್ತಿ, ಭಾಷಾಗೌರವ (Euphemism): ಅಮಂಗಳ, ಅಶುಭ, ಅಸಹ್ಯ, ಕೆಟ್ಟದನ್ನು ಬಳಸಾಗಿ ಹೇಳುವುದು ಸೌಮ್ಯೋಕ್ತಿ. ಸ್ತ್ರೀಯರು ಇಂತಹ ಶಬ್ದಗಳನ್ನು ಹೆಚ್ಚು ಪ್ರಯೋಗಿಸುತ್ತಾರೆ; ಸೃಷ್ಟಿಸುತ್ತಾರೆ ಎನ್ನಲೂಬಹುದು.

ಮರಣಹೊಂದು ಎನ್ನುವುದನ್ನು ಕೈಲಾಸವಾಸಿಯಾಗು, ಸ್ವರ್ಗಸ್ಥನಾಗು, ದಿವಂಗತ, ಕೀರ್ತಿಶೇಷ, ಬಯಲಾಗು, ಮುಕ್ತಿಹೊಂದು, ವೈಕುಂಠವಾಸಿಯಾಗು, ಪರಮಪದ ಸೇರು, ಸಾಯುಜ್ಯಹೊಂದು ಇತ್ಯಾದಿಯಾಗಿ ಹೇಳಬಹುದು. ಇಂಗ್ಲಿಷಿನಲ್ಲಿ ವ್ಯಂಗ್ಯವಾಗಿ kicked the bucket ಎಂಬುದಿದೆ. ಹೆಣ್ಣುಮಕ್ಕಳು ಬಳೆ ಒಡೆದಾಗ ಬಳೆ ಹೆಚ್ಚಿತು ಎನ್ನುತ್ತಾರೆ. ಕುಂಕುಮ ಹೆಚ್ಚಿತು ಎಂದರೆ ಮುಗಿಯಿತು ಎಂದರ್ಥ. ಊಟಕ್ಕೆ ಕುಳಿತಾಗ ಅಥವಾ ಶುಭಕಾರ್ಯ ನಡೆಸುವಾಗ ದೀಪಶಾಂತವಾಗುತ್ತದೆ, ಆರುವುದಿಲ್ಲ. ಹಾವು ಕಚ್ಚಿತು ಎಂಬುದನ್ನು ಹುಳು ಮುಟ್ಟಿತು ಎನ್ನುತ್ತಾರೆ. ಕ್ಷೌರಿಕನನ್ನು ನಾಪಿತ, ಹಜಾಮ ಎಂದು ಹೇಳುವ ಬದಲು ಹೆಸರಿಲ್ಲದವನು, ಕೆಲಸಿಗ ಎನ್ನುತ್ತಿದ್ದರು, ಈಗ ಬಾರ್ಬರ್ ಎಂದು ಇಂಗ್ಲಿಷ್ ಬಳಸುತ್ತಾರೆ.

---

ಫ್ರೆಂಡು ಶಬ್ದ ಕಿವಿಗೆ ಬಿತ್ತು. ಆ ಸಂಗೀತವನ್ನು ಅವರಿಂದಲೇ ಗುರುತಿಸುವುದು ರೂಢಿಯಾಗುತ್ತದೆ. ನಿನ್ನ ಫ್ರೆಂಡು ಬರುತ್ತೆ ಎಂದರೆ ಟಿ.ವಿ. ಮುಂದೆ ಹಾಜರು, ಸಂಕೇತ (ಸಿಗ್ನಲ್) ಸಂಗೀತ ಕೇಳಲು. ಮಗು ಬೆಳೆದಂತೆ ಮುಂದೆ ಫ್ರೆಂಡ್ (ವಾಸ್ತವವಾಗಿ ಫ್ರೆಂಡ್ ಎಂದರೆ ಪ್ರೀತಿಸು. ಪ್ರೀತಿ ಎಂದರ್ಥ. ಹಳೆಯ ಇಂಗ್ಲಿಷ್‌ನ freon ನಿಂದ (ಪ್ರೀತಿಸು) ಬಂದದ್ದು. ಮಿತ್ರ ಎಂಬುದರ ಅರ್ಥ ವಿಸ್ತರಣೆ.) ಶಬ್ದ ಬೇರೆ ಸನ್ನಿವೇಶದ ಅರ್ಥ ನೀಡತೊಡಗುತ್ತೆ. ಸಮಾಜದ ಬಳಕೆಯ. ರೂಢಿಯ ಶಬ್ದಗಳನ್ನು ತನ್ನ ಭಾಷೆಯ ಶಬ್ದಗಳಿಗೆ ಬದಲಾಗಿ ಬಳಸುವುದನ್ನು ಆ ಮಗುವೂ ಕಲಿಯುತ್ತದೆ. ಅಂದರೆ, ಮಗುವಿನ ಭಾಷೆಗೂ ಆಯಾ ವಸ್ತು, ಕ್ರಿಯೆಗೂ ಯಾವ ನೇರ, ಆಂತರಿಕ ಅರ್ಥಸಂಬಂಧವೂ ಇಲ್ಲ. ಮಗು ಮತ್ತು ಆ ಮನೆಯವರಿಗೆ ಮಗು ಬಳಸುವ ಶಬ್ದಗಳ ಅರ್ಥ ಯಾದೃಚ್ಛಿಕ. ಮನೆಯವರೆಲ್ಲ ಸ್ವೀಕರಿಸಿ ಒಪ್ಪಿ ಬಳಸಿದ್ದು.

ಹಳ್ಳಿಗಳಲ್ಲಿ ಹಿಂದಿನ ರೀತಿಯೇ ಉಳಿದಿದೆ. ತಮಿಳಿನಲ್ಲಿ, 'ಅಂಬಟ್ಟನ್' ಎನ್ನುತ್ತಾರೆ. ಅವಕ್ಕೆ ವೈದ್ಯ ಎಂದರ್ಥ, ಕ್ಷೌರಿಕನಿಗೆ ಬಳಸುತ್ತಾರೆ. ಸೌಮ್ಯವಾಗಿ ಹೇಳಲು ನೀರು ಹಾಕಿಕೊ, ಹೊರಗಾಗು ಶಬ್ದಗಳು ರೂಢಿಗೆ ಬಂದಿವೆ. ಒಂದಕ್ಕೆ, ಎರಡಕ್ಕೆ ಹೋಗು, ವಿದ್ಯಾರ್ಥಿಗಳಲ್ಲಿ ಚಾಲ್ತಿಯಲ್ಲಿರುವ ಲಂಡನ್‌ಗೆ ಹೋಗು, ಭಾರತ ಓದು ಇತ್ಯಾದಿ ಸಹ ಅಷ್ಟೆ. ಅಮಂಗಳ ದಿನ ಮಂಗಳವಾರವಾಗುತ್ತದೆ. ವಿಧವೆ ದೀರ್ಘ ಸುಮಂಗಲಿ, ವೇಶ್ಯೆ ನಿತ್ಯಸುಮಂಗಲಿಯರಾಗುತ್ತಾರೆ. ಕ್ಷೌರಮಾಡಿಸಿಕೊಳ್ಳುವುದು ಪಟ್ಟಾಭಿಷೇಕವಾಗುತ್ತದೆ. ವ್ಯಂಗ್ಯವಾಗಿ, ತಲೆಬೋಳಿಸಿಕೊಳ್ಳುವುದನ್ನು ಕಲಾಯ್ ಎನ್ನುವುದುಂಟು.

೨. ವ್ಯಂಗ್ಯೋಕ್ತಿ : Euphemism ವರ್ಗಕ್ಕೇ ಸೇರಿದರೂ ಇಲ್ಲಿ ವ್ಯಂಗ್ಯ ಪ್ರಧಾನ. ಒಳ್ಳೆಯ ಅರ್ಥದ ಶಬ್ದಗಳನ್ನು ಅದರ ವಿರುದ್ಧಾರ್ಥದಲ್ಲಿ ಪ್ರಯೋಗಿಸುವುದು. ಅವನೊಬ್ಬ ಬೃಹಸ್ಪತಿ, ಪಂಡಿತಪುತ್ರ, ಸರಸ್ವತೀ ಮುರುಕು ಎಂದಾಗ ದಡ್ಡ ಎಂದರ್ಥ. ಅಶೋಕನ ಶಾಸನಗಳ 'ದೇವಾನಾಂ ಪ್ರಿಯ' ಶಬ್ದ ಸಹ ಮೂರ್ಖ ಅರ್ಥದಲ್ಲಿ ಪ್ರಯೋಗವಾಗತೊಡಗಿತು. ಪುರಂದರ ದಾಸರು ಬರುತ್ತಿದ್ದಾರೆ ಎಂದಾಗ ಕಡುಬಡವ ಎಂದೇ ಅರ್ಥ. ಕಡಲೆಕಾಯಿ ಬಡವರ ಬಾದಾಮಿ. ಧರ್ಮದ ಗೊಡ್ಡು, ಕರ್ಣನ ತುಂಡು, ಹರಿಶ್ಚಂದ್ರನ ಮಗ ಇವೆಲ್ಲ ವ್ಯಂಗ್ಯಾರ್ಥ ಸೂಚಕವೇ ಆಗಿವೆ.

೩. ಅವಧಾರಣೆಯ ಅತಿಶಯೋಕ್ತಿ: ಇದೂ ವ್ಯಂಗ್ಯೋಕ್ತಿಗೆ ಹತ್ತಿರವಾದದ್ದು ಆದರೆ ಇಲ್ಲಿ ವ್ಯಂಗ್ಯಕ್ಕಿಂತ ಒತ್ತಿ ಹೇಳುವುದು ಮುಖ್ಯ. ಸಣ್ಣ, ಸಾಮಾನ್ಯವಿಷಯವನ್ನು ಅತಿಮಾಡಿ ಹೇಳುವುದು. ಅದಕ್ಕಾಗಿ ದೊಡ್ಡ ವಿಶೇಷ ಶಬ್ದಗಳನ್ನು ಬಳಸುವುದು. ಜಗಳ, ಕಲಹ ಎಂಬರ್ಥದಲ್ಲಿ, ಕುರುಕ್ಷೇತ್ರ ಪ್ರಾರಂಭವಾಯಿತು ಎನ್ನುವುದು ಹಿಂದೆ ಹೇಳಿದಂತೆ ಇಸ್ಪೀಟಾಟಕ್ಕೆ ಭಾರತ ಓದುವುದು, ಗೀತಾ ಪಾರಾಯಣ ಇತ್ಯಾದಿ ಬಳಸುವುದುಂಟು. ಅಶ್ವಮೇಧ ಎಂದರೆ ಕುದುರೆ ಜೂಜು. ಅವರ ಮನೆಯಲ್ಲಿ ಇಂದು ಕುಕ್ಕುಟಯಾಗ ಎಂದರೆ ಕೋಳಿ ಅಡಿಗೆ ಎಂದರ್ಥ. ಸಸ್ಯಾಹಾರಿಗಳೆದುರು ಮಾಂಸಾಹಾರಿಗಳು ಮಾತನಾಡುವಾಗ ಇಂಥ ಸಂಕೇತ ಶಬ್ದಗಳು ಹೆಚ್ಚು. ಸೈಕಲ್ ಎಂದರೆ ಕೋಳಿ, ಕಾರ್—ಕುರಿ, ಸಬ್‌ಮೆರೀನ್—ಮೀನು ಇತ್ಯಾದಿ.

೪. ಆಲಂಕಾರಿಕ ಭಾಷೆ: ಅರ್ಥದ ಸ್ಪಷ್ಟತೆಗಾಗಿ, ಆಡಂಬರಕ್ಕಾಗಿ ಚಾತುರ್ಯದ ಮಾತಿಗಾಗಿ ಅಲಂಕಾರಗಳನ್ನು ಮಾತಿನಲ್ಲಿ ಬಳಸುವುದುಂಟು. ಹೆಚ್ಚು ರೂಢಿಯಲ್ಲಿರುವ ಅಲಂಕಾರವೆಂದರೆ ರೂಪಕ (Metaphor). ಇವು ವ್ಯಂಗ್ಯಾರ್ಥವಿಲ್ಲದೆಯೂ ತೀರ ಸಹಜವಾಗಿ ಸಂಭಾಷಣೆಯಲ್ಲಿ ಸೇರಿರುವುದುಂಟು. ಭಗೀರಥ ಪ್ರಯತ್ನ ಒಂದು ರೂಪಕವಾಗಿ ವ್ಯಕ್ತಿ ಕೆಲಸ ಸಾಧಿಸಲು ಪಡುತ್ತಿರುವ ಕಷ್ಟವನ್ನು ತಿಳಿಸುತ್ತದೆ. ಹಿತ್ತಾಳೆ ಕಿವಿ, ಬಂಗಾರ ಮನುಷ್ಯ, ಹೂವಿನ ಸರ ಎತ್ತಿದಂತೆ

ಉದರ ವೈರಾಗ್ಯ, ಬೆಣ್ಣೆಯಲ್ಲಿ ಕೂದಲು ತೆಗೆ, ಮೊಸರಲ್ಲಿ ಕಲ್ಲು ಇತ್ಯಾದಿ ಈ ವರ್ಗಕ್ಕೆ ಸೇರುತ್ತವೆ.

ಇನ್ನೊಂದು ವರ್ಗದ ಶಬ್ದಗಳಿವೆ. ತಮ್ಮ ಕೋಶಾರ್ಥ ಬಿಟ್ಟು ಬೇರೆ ಬೇರೆ ಅರ್ಥಗಳಲ್ಲಿ ಪ್ರಯೋಗವಾಗುತ್ತವೆ. ಮುಂದೆ ಅಂತಹ ಶಬ್ದಗಳಿಗೆ ಅರ್ಥ ದೃಷ್ಟಿಯಿಂದ ಉಂಟಾಗುವ ವಿವಿಧ ಅವಸ್ಥೆ ಅಥವಾ ಅರ್ಥವ್ಯತ್ಯಾಸವನ್ನು ಗಮನಿಸಬಹುದು. ಈ ವರ್ಗದಲ್ಲಿ ಐದು ಬಗೆಗಳಿವೆ: ಅರ್ಥವಿಕಾಸ, ಅರ್ಥಸಂಕೋಚ, ಉತ್ತಮಾರ್ಥ ಅಥವಾ ಅರ್ಥಶ್ರೀಮಂತಿಕೆ, ಹೀನಾರ್ಥ ಅಥವಾ ಅಪಕರ್ಷ ಅಥವಾ ಅಪಮೌಲ್ಯ, ಕೊನೆಯದು ಅರ್ಥಾಂತರ.

೧. ಅರ್ಥವಿಕಾಸ (Widening or extension of meaning): ಒಂದು ಶಬ್ದಕ್ಕೆ ಮಿತವಾದ ಖಚಿತವಾದ ನಿರ್ದಿಷ್ಟವಾದ ಅರ್ಥವಿದ್ದು ಕಾಲಕ್ರಮೇಣ ಅದು ವಿಕಾಸ ಹೊಂದಿ ವಿಶಾಲಾರ್ಥ ಪಡೆಯಬಹುದು.

ಎಣ್ಣೆ ಎಂಬುದು ಎಳ್+ನೆಯ್‌ನಿಂದಾದದ್ದು. ಎಳ್ಳಿನ ಜಿಡ್ಡು ಎಂಬರ್ಥವಿತ್ತು. ಈಗ ಎಣ್ಣೆ=ಜಿಡ್ಡು ಎನ್ನುವ ವಿಶಾಲಾರ್ಥ ಪಡೆದಿದೆ. ಬೇವಿನೆಣ್ಣೆ, ಹೊಂಗೆಯೆಣ್ಣೆ, ಕಡಲೆಕಾಯೆಣ್ಣೆ, ಕೊಬ್ಬರಿಯೆಣ್ಣೆ ಇತ್ಯಾದಿ. ಸಾಲದ್ದಕ್ಕೆ 'ಎಣ್ಣೆ'ಯ ಮೂಲ 'ಎಳ್' ಎಂಬುದು ಮರೆತು ಹೋಗಿ ಎಳ್ಳೆಣ್ಣೆ, ಹುಚ್ಚೆಳ್ಳೆಣ್ಣೆ, ಅಚ್ಚೆಳ್ಳೆಣ್ಣೆ ಪ್ರಯೋಗದಲ್ಲಿವೆ. ಆಗ ಎಳ್+ಎಳ್+ನೆಯ್=ಎಳ್ಳೆಣ್ಣೆ ಆಗುತ್ತದೆ. ಹಾಗೇ 'ಓಲೆ' ಶಬ್ದ. ಓಲೆ ಎಂದರೆ ಎಲೆಯಿಂದ ಮಾಡಿದ, ಸುರುಳಿಸುತ್ತಿ ಮಾಡಿದ ಕಿವಿಯ ಆಭರಣ ಎಂದರ್ಥ. ಬೆಂಡು+ಓಲೆ=ಬೆಂಡೋಲೆ ಎಂಬಲ್ಲಿ ಬೆಂಡಿನಿಂದ ಮಾಡಿದ ಕಿವಿಯ ಆಭರಣ. ಈಗ ಎಲೆ, ಬೆಂಡುಗಳು ಮಾತ್ರವಲ್ಲದೆ ಚಿನ್ನದೋಲೆ, ವಜ್ರದೋಲೆಗಳಾಗಿವೆ. ಸಾಲದು ಎಂಬಂತೆ ಬೆಂಡನ್ನು ಸೇರಿಸಿ ಮುತ್ತಿನ ಬೆಂಡೋಲೆ, ವಜ್ರದ ಬೆಂಡೋಲೆ ಎನ್ನುವುದೂ ರೂಢಿಯಾಗಿದೆ. ನಿರ್ದಿಷ್ಟ ಅರ್ಥದ ಓಲೆ ವಿಶಾಲಾರ್ಥ ಪಡೆಯಿತು. ಓಲೆಗೆ ಕಿವಿಯ ಆಭರಣ ಅರ್ಥವಲ್ಲದೆ ಪತ್ರ–letter–ಅರ್ಥವೂ ಬಂದು (ಎಲೆಯ ಮೇಲೆ ಬರೆಯುತ್ತಿದ್ದುದರಿಂದ), ಮಾರೋಲೆ (reply) ಸುತ್ತೋಲೆ (circular) ಅರ್ಥಗಳಿಗೂ ವ್ಯಾಪಿಸಿದೆ.

ಚೊಂಬು ಶಬ್ದ ಸಹ ಅಷ್ಟೆ. ಚೆಂಬು <ಚೆನ್+ಪೊನ್‌ನಿಂದಾದ ಶಬ್ದ. ಚೆನ್ <ಕೆನ್ ಕೆಂಪಾದ ಎಂದರ್ಥ. ಪೊನ್ ಎಂದರೆ ಲೋಹಸಾಮಾನ್ಯ ಅರ್ಥವಿತ್ತು. ಚೆಂಬು ಶಬ್ದದಲ್ಲಿ ಎರಡು ಬಗೆಯ ಕ್ರಿಯೆ ನಡೆದಿದೆ. ಒಂದು: ಪೊನ್ ಎಂದರೆ ಲೋಹ ಎಂಬ ಸಾಮಾನ್ಯಾರ್ಥ, ವಿಶಾಲಾರ್ಥ ಇದ್ದುದು ಸಂಕುಚಿತವಾಗಿ 'ಚಿನ್ನ' ಎಂಬ ನಿರ್ದಿಷ್ಟ ಅರ್ಥ ಪಡೆದ ಕಾರಣ ಲೋಹ ಎಂಬರ್ಥ ಜನರ ಮನಸ್ಸಿನಿಂದ ಮರೆಯಾಯಿತು. ಎರಡು: ಚೆನ್ ಪೊನ್ ಎಂದರೆ ಕೆಂಪಾದ ಲೋಹ, ತಾಮ್ರ ಎಂಬರ್ಥವಿತ್ತು. ಅದರಿಂದ ಮಾಡಿದ ಪಾತ್ರೆ ಚೆಂಬು. ಮೂಲಾರ್ಥ ಮರೆಯಾಗಿ

ಅಥವಾ ಅರ್ಥ ವಿಕಾಸ ಹೊಂದಿ ಬೆಳ್ಳಿ ಚೆಂಬು, ಹಿತ್ತಾಳೆ ಚೆಂಬು, ಚಿನ್ನದ ಚೆಂಬು ಅನುವು. ಚೆಂಬು ಪಾತ್ರೆ ಎಂಬ ಸಾಮಾನ್ಯಾರ್ಥ ಪಡೆದುದರಿಂದ ತಾಮ್ರದ ಚೆಂಬು ಎಂದೂ ಹೇಳುತ್ತೇವೆ. ಇದು ದ್ವಿರುಕ್ತಿಯೂ ಆಗುತ್ತದೆ. ಚೆಂಬು> ಚೊಂಬು ಎಂದು ಸಮರೂಪಧಾರಣೆಯೂ (assimilation) ಮಾಡಿದೆ.

'ಪಾ' ಎಂದರೆ ರಕ್ಷಿಸು, ಪತಿ—ರಕ್ಷಕ. ಆದರೆ ಪ್ರಿಯ ಎಂಬರ್ಥ ಪಡೆದಿದೆ. ಇಂಗ್ಲಿಷಿನ virtue ಶಬ್ದ ಮೂಲತಃ ಶೌರ್ಯ ಎಂಬರ್ಥದ್ದು. ಮಿಲ್ಟನ್ ಸೈತಾನನ virtue ಹೇಳುತ್ತಾನೆ. Vir (ವೀರ) ಎಂಬ ಲ್ಯಾಟಿನ್ ಮೂಲದಿಂದ ಬಂದದ್ದು. ಈಗ ಸದ್ಗುಣ ಅರ್ಥ ಪಡೆದು ವಿಕಾಸ ಹೊಂದಿದೆ. Salaryಯ ಕಥೆ ತಮಾಷೆಯಾಗಿದೆ. "A salary is an allowance for 'Sal', 'Salt'". ಉಪ್ಪಿನ ಭತ್ಯ ಎಂಬುದು ಅರ್ಥವಿಕಾಸ ಹೊಂದಿ ಸಂಬಳ, ವೇತನ, ಪಗಾರವಾಯಿತು. ಮೈಸೂರು ಕಡೆ 'ಬೆರಕೆ' ಎಂದರೆ ಒಂದು ಬೈಗುಳ, ಬೇರೆ ಬೇರೆ ಜಾತಿಗೆ ಹುಟ್ಟಿದವನು ಎಂಬರ್ಥದಲ್ಲಿ. ಬೆರಸು-ಮಿಶ್ರಣ. ಉತ್ತರ ಕರ್ನಾಟಕದಲ್ಲಿ 'ಬೆರಕೆ' ಜಾಣ ಎಂಬರ್ಥ ಪಡೆದಿದೆ.

ಅರ್ಥ ವಿಕಾಸದಲ್ಲಿ ಇನ್ನೊಂದು ಗುಂಪಿನ ಶಬ್ದಗಳಿವೆ. ಅವು ವ್ಯಕ್ತಿನಾಮಜನ್ಯ ಶಬ್ದಗಳು. ಎಷ್ಟೋ ವ್ಯಕ್ತಿಗಳು ತಾವು ಸತ್ತನಂತರವೂ ತಮ್ಮ ವ್ಯಕ್ತಿತ್ವದ ಕಾರ್ಯದ ವೈಶಿಷ್ಟ್ಯ ಬಿಟ್ಟು ಹೋಗುತಾರೆ. ಅದು ಒಳ್ಳೆಯದಾಗಿರಬಹುದು, ಕೆಟ್ಟದಾಗಿರಬಹುದು. ಆ ಗುಣಕ್ಕೆ, ಆ ರೀತಿಗೆ ಅವರ ಹೆಸರೇ ರೂಢಿಯಾಗುತ್ತದೆ. ಹೊಸ ಅರ್ಥ ಪಡೆಯುತ್ತದೆ. ವಾತ್ಸ್ಯಾಯನ ಕಾಮಶಾಸ್ತ್ರ ಬರೆದವನು. ಕಾಮಶಾಸ್ತ್ರಕ್ಕೆ ವಾತ್ಸ್ಯಾಯನ ಹೆಸರು ಬಂದಿದೆ. ಹಾಗೇ ಶಾಲಿಹೋತ್ರ, ಪಾಲಕಾಪ್ಯ ಅಶ್ವಶಾಸ್ತ್ರ, ಗಜಶಾಸ್ತ್ರಗಳ ಹೆಸರಾಗಿವೆ. ಅವನೊಬ್ಬ ಚಾಣಕ್ಯ, ಶಕುನಿ, ಶಿಖಂಡಿ, ಮೀರ್‌ಸಾದಿಕ್ ಎನ್ನುತ್ತೇವೆ. ಶ್ರೀಮಂತ Sad ಎಂಬುವನಿಂದ Sadism (ದೈಹಿಕ ಹಿಂಸೆ ಮಾಡುವುದರಿಂದ ಸಂತೋಷ ಪಡೆಯುವುದು) ಬಂದಿದೆ. ತಾಟಕಿ, ಕೀಚಕ ಶಬ್ದಗಳೂ ಈ ಬಗೆಯವು.

೬. ಅರ್ಥಸಂಕೋಚ (Narrowing of meaning or contraction): ವಿಕಾಸಕ್ಕೆ ವಿರುದ್ಧವಾದುದು ಸಂಕೋಚ. ವಿಶಾಲಾರ್ಥ ಪಡೆದಿದ್ದ ಶಬ್ದಗಳು ಯಾವುದಾದರೂ ಒಂದು ವಿಶಿಷ್ಟ, ನಿರ್ದಿಷ್ಟ ಅರ್ಥದಲ್ಲಿ ಸೀಮಿತವಾಗಿ ಪ್ರಯೋಗವಾಗುತ್ತವೆ. ತಮಿಳಿನಲ್ಲಿ (ಕನ್ನಡದಲ್ಲೂ ಸಹ) 'ನೆಯ್' ಎಲ್ಲ ಜಿಡ್ಡು (oil)ಗಳಿಗೂ ಅನ್ವಯಿಸುತ್ತಿತ್ತು. ಈಗ ಹಸುವಿನ ತುಪ್ಪ ಎಂಬರ್ಥಕ್ಕೆ ಸೀಮಿತವಾಗಿದೆ. ಕನ್ನಡದಲ್ಲಿ ಎಣ್ಣೆ, ಬೆಣ್ಣೆ ಮುಂತಾದ ಸಮಾಸಪದಗಳಲ್ಲಿ ಮಾತ್ರ ಉಳಿದು, ಸ್ವತಂತ್ರ ಬಳಕೆಯಾಗಿ 'ನೆಯ್' ತಪ್ಪಿಹೋಗಿದೆ. ಸಂಧ್ಯಾ ಎಂದರೆ ಸಂಧಿ ಸಮಯ; ಪ್ರಾತಃಸಂಧ್ಯಾ, ಸಾಯಂಸಂಧ್ಯಾ ಎರಡಕ್ಕೂ ಅನ್ವಯಿಸುತ್ತಿತ್ತು.

ಈಗ ಸಾಯಂಕಾಲ, ಸಂಜೆ (<ಸಂಧ್ಯಾ) ಅರ್ಥದಲ್ಲಿ ಮಾತ್ರ ಬಳಸಲಾಗುತ್ತಿದೆ. ಹಿಂದೆ ತಿಳಿಸಿದಂತೆ 'ಪೊನ್' ಅರ್ಥ ಲೋಹ ಎಂಬುದು ಸೀಮಿತವಾಗಿ ಚಿನ್ನ, ಹೊನ್ನು ಎಂದಾಗಿದೆ. (ಕೆನ್>ಚೆನ್+ಪೊನ್ ಚೆಂಬೊನ್, ತಾಮ್ರ. ಕರ್+ಪೊನ್–ಕರ್ಪೊನ್, ಕಬ್ಬಿಣ)

'ಕೂಸು' ಎಂದರೆ ಮಗು, ಶಿಶು ಎಂಬರ್ಥ ಬಂದಿದೆ. ಹಿಂದೆ ಇದಕ್ಕೆ 'ಸ್ತ್ರೀ' ಎಂಬರ್ಥವಿತ್ತು. ಕೊಡಗೂಸಿನಲ್ಲಿ ಈಗಲೂ ಆ ಅರ್ಥವಿದೆ. ಕೊಡಲಿರುವ ಕೂಸು ಕೊಡಗೂಸು ಹೆಣ್ಣು. ಪೆಣ್+ಕೂಸು ಸೇರಿ ಪೆಣ್ಗೂಸು>ಹೆಂಗುಸು>ಹೆಂಗಸು ಆಗಿದೆ. ಇದು ದ್ವಿರುಕ್ತಿಯು. ವಡ್ಡಾರಾಧನೆ, ಪಂಪನ ಕೃತಿಗಳಲ್ಲೂ ಹರೆಯದ ಹುಡುಗಿ ಅರ್ಥವಿದೆ. ಶಬ್ದಮಣಿದರ್ಪಣಕಾಲಕ್ಕೆ ಚಿಕ್ಕದು, ಕಿರಿದು ಅರ್ಥ ಬಂದಿತು. "ಪ್ರಾಯಂ ಕೂಸಾದೊಡೆ ಅಭಿಪ್ರಾಯಂ ಕೂಸಕ್ಕುಮೆ".

ಸಂಸ್ಕೃತ 'ಚೀರ'ದ ತದ್ಭವ 'ಸೀರೆ'. ಚೀರವೆಂದರೆ ವಸ್ತ್ರಸಾಮಾನ್ಯ. ಕನ್ನಡದಲ್ಲಿ ಈಗ ಹೆಂಗಸರು ಉಡುವುದು ಮಾತ್ರವಾಗಿದೆ. "ಊರ ಸೀರೆಗೆ ಅಗಸ ತಡವಡಗೊಂಬಂತೆ", "ಒಂದು ದಮ್ಮಕ್ಕಾದೊಡಮ್ ಸೀರೆಯುಮ್ ಕುಡಿಯುಮ್" ಇತ್ಯಾದಿ ಸಾಮಾನ್ಯ ವಸ್ತ್ರ ಅರ್ಥದ ಪ್ರಯೋಗಗಳು. ಚೀರ>ಸೀರೆ, ಅರ್ಥ ಸಂಕುಚಿತವಾಯಿತು. ಅದರಂತೆ ಕುಪ್ಪಸ. ಸಂಸ್ಕೃತ ಕೂರ್ಪಾಸದಿಂದ ಬಂದದ್ದು. ಕವಚ ಎಂದರ್ಥ. ಯೋಧರು ಕುಪ್ಪಸ ಧರಿಸುತ್ತಿದ್ದರು. ಈಗ ಹೆಂಗಸರು ಧರಿಸುವುದು ಮಾತ್ರವಾಗಿದೆ. ಇಂಗ್ಲಿಷಿನಲ್ಲೂ ಸಹ ಹೆಚ್ಚು ಬಳಕೆಯ ಶಬ್ದಗಳೇ ಹೀಗಾಗಿವೆ. Meat ಎಂದರೆ ಆಹಾರ ಎಂಬ ವಿಶಾಲಾರ್ಥ (Sweet meat stall) ಇದ್ದುದು ಮಾಂಸ ಎಂದಾಗಿದೆ. Wife ಎಂದರೆ ಸ್ತ್ರೀ ಎಂಬ ವಿಶಾಲಾರ್ಥ, ಈಗ ಹೆಂಡತಿಗೆ ಸಂಕುಚಿತಗೊಂಡಿದೆ. ಈಗಲೂ housewife, midwifeಗಳಲ್ಲಿ ಹಿಂದಿನರ್ಥವಿದೆ. Deer ಎಂದರೆ ಪ್ರಾಣಿಸಾಮಾನ್ಯ, ಜಿಂಕೆ ಎಂದು ಅರ್ಥಸಂಕೋಚ ಪಡೆಯಿತು.

೨. ಉತ್ತಮಾರ್ಥ, ಅರ್ಥಶ್ರೀಮಂತಿಕೆ (Elevation of meaning or Amelioration): ಒಂದು ಕಾಲಕ್ಕೆ ಹೀನಾರ್ಥ, ಕೀಳು ಅರ್ಥ ಪಡೆದಿದ್ದ ಶಬ್ದಗಳು ಉತ್ತಮಾರ್ಥ ಪಡೆದು ರೂಢಿಯಲ್ಲಿವೆ. ಕೆಲವು ಶಬ್ದಗಳಿಗೆ ಒದಗುವ ಈ ಅರ್ಥಶ್ರೀಮಂತಿಕೆ ಅಪಮೌಲ್ಯಕ್ಕೆ ವಿರುದ್ಧವಾದುದು. 'ಪೊಂದು' ಎಂದರೆ ಸಾಯುವುದು ಎಂದರ್ಥವಿತ್ತು, ಹಳಗನ್ನಡದಲ್ಲಿ. ಈಗ ಪಡೆಯುವುದು ಎಂದಾಗಿದೆ. ತಮಿಳಿನ 'ಕಳಿಪ್ಪು' ಶಬ್ದಕ್ಕೆ ಸುರಾಪಾನದಿಂದಾಗುವ ಸಂತೋಷ ಎಂಬರ್ಥವಿತ್ತು. ಈಗ ಎಲ್ಲ ಬಗೆಯ ಸುಖ, ಸಂತೋಷ, ಭೋಗಕ್ಕೆ ಅನ್ವಯಿಸುತ್ತದೆ. ಸಭೆಯಲ್ಲಿರುವವನು 'ಸಭ್ಯ'. ಈಗ ಯೋಗ್ಯ, gentleman ಎಂಬರ್ಥ. ಪೀತಾಂಬರ ಎಂದರೆ ಹಳದಿ ವಸ್ತ್ರ ಮಾತ್ರವಾಗಿತ್ತು, ಈಗ ಶ್ರೀಮಂತರ ಜರಿ ಕೂಡಿದ ವಸ್ತ್ರ

ಅರ್ಥ ಪಡೆದಿದೆ. ಮೂಗುತಿ ಎಂದರೆ ಮೂಗು+ಕುತ್ತಿ=ಮೂಗು ಚುಚ್ಚಿ ಎಂದರ್ಥ. ಆದರೆ ಮೂಗಿನಲ್ಲಿ ತೊಡುವ ಒಡವೆಯಾಯಿತು. Lord ಮತ್ತು Lady ಎಂದರೆ ಬ್ರೆಡ್ಡು, ರೊಟ್ಟಿಯ ರಕ್ಷಕ, ರೊಟ್ಟಿ ನೀಡುವವಳು ಎಂಬರ್ಥವಿದ್ದದ್ದು ಶ್ರೀಮಂತ ಅರ್ಥ ಪಡೆಯಿತು. ಈಗ ಅವರು ರಾಜಮಾನ್ಯರು. Knight ಎಂದರೆ ಸೇವಕ ಎಂದು ಅರ್ಥವಿತ್ತು. ಈಗ ಶ್ರೇಷ್ಠ, ವೀರ ಎಂಬರ್ಥ ಪಡೆದು ಪ್ರಶಸ್ತಿಯ ಹೆಸರೂ ಆಗಿದೆ (Knighthood). ಮೂಲತಃ Fame ಎಂದರೆ ವರದಿ, ಈಗ ಪ್ರಸಿದ್ಧಿ, ಕೀರ್ತಿ. 'ಸಭಿಕ' ಎಂದರೆ ಕುಡುಕ ಎಂಬರ್ಥ ಹೋಗಿ ಈಗ ಸಭಾಸದ ಎಂದಾಗಿದೆ.

೮. ಹೀನಾರ್ಥ, ಅಪಮೌಲ್ಯ (Degeneration of meaning): ಒಂದು ಕಾಲಕ್ಕೆ ಉತ್ತಮ, ಶ್ರೇಷ್ಠ ಅರ್ಥ ಕೊಡುತ್ತಿದ್ದ ಶಬ್ದಗಳು ಕೀಳರ್ಥ, ಹೀನಾರ್ಥ ಪಡೆಯುವುದುಂಟು. ಇದನ್ನು ಶಬ್ದದ ಅಪಕರ್ಷ, ಅಪಮೌಲ್ಯ ಎನ್ನುತ್ತಾರೆ. ಇವುಗಳಲ್ಲಿ ಮೂರು ಬಗೆ ಉಂಟು. ಒಂದನೆಯದು: ಒಳ್ಳೆಯ ಅರ್ಥವನ್ನು ಕೊಡುತ್ತಿದ್ದ ಶಬ್ದಗಳು, ಪಡೆನುಡಿಗಳು ಲಕ್ಷಣಾರ್ಥ ಕಾರಣ ಅಣಕಕ್ಕೆ ಎಡೆಗೊಡುತ್ತವೆ. ಉದಾ: ಪೂಜೆಮಾಡು, ಮಂಗಳಾರತಿ ಆಗು, ಮೂರುನಾಮ ಹಾಕು, ಟೋಪಿ ಹಾಕು, ಕುಂಭಕೋಣಂ ಆಯಿತು, ತಿರುಪತಿ ಕ್ಷೌರ ಇತ್ಯಾದಿ. ಇವೆಲ್ಲ ನಿಂದನೆಗೆ, ಮೋಸಕ್ಕೆ, ವಂಚನೆಗೆ ಪ್ರಯೋಗವಾಗುತ್ತಿವೆ. ಯುದ್ಧದಲ್ಲಿ "ಶಂಖಂ ಪಾಂಚಜನ್ಯಂ ಪೂರಯಿತ್ವಾ" ಸಿಂಹನಾದ ಮಾಡುವುದು ಹೋಗಿ ಶಂಖ ಬಾರಿಸು ಎಂದರೆ ಬಾಯಿ ಬಡಿದುಕೊಂಡು ಅಳು, ತೀವ್ರ ದುಃಖ ಇತ್ಯಾದಿ ಅರ್ಥ ಬಂದಿದೆ. ಒಂದೇ ಅರ್ಥದ ಎರಡು ಶಬ್ದಗಳು ಇದ್ದಾಗ ಒಂದನ್ನು ಒಳ್ಳೆಯ, ಗೌರವದ ಅರ್ಥದಲ್ಲೂ ಇನ್ನೊಂದನ್ನು ಕೀಳು ಎಂಬಂತೆಯೂ ಬಳಸುವುದುಂಟು. ಆಫೀಸು–ಕಛೇರಿ, ಮನೆ–ರೊಪ್ಪ(?)ಸಡಿ, ಪರ್ವತ (ದೊಡ್ಡದು)–ಬೆಟ್ಟ (ಚಿಕ್ಕದು), ಅನ್ನ–ಕೂಳು, ಚಪ್ಪಲಿ–ಕೆರ ಇತ್ಯಾದಿ.

ಎರಡನೆಯದಾಗಿ, ಕೆಲವು ಶಬ್ದಗಳು ತದ್ಭವವಾದಾಗ ಅಪಕರ್ಷ ಹೊಂದುತ್ತವೆ. ತದ್ಭವ ಭಾಗದಲ್ಲಿ ಇದರ ವಿವರಣೆ ಬರುತ್ತದೆ. ಉದಾ: ಸಂಸ್ಥೆ–ಸಂತೆ, ಯಾತ್ರೆ–ಜಾತ್ರೆ, ಗೋಸ್ವಾಮಿ–ಗೋಸಾಯಿ, ರಘಟಾ–ರಗಳೆ (ರಘಟಾ ಛಂದಸ್ಸು ಕನ್ನಡದಲ್ಲಿ ರಗಳೆ ಛಂದಸ್ಸು ಆಗಿದ್ದುದು ಈಗ ರಗಳೆ ಎಂದರೆ ಹೀನಾರ್ಥ ಪಡೆದಿದೆ), ಪರಿಷತ್–ಪರಿಸೆ ಇತ್ಯಾದಿ.

ಮೂರನೆಯದಾಗಿ, ಉಳಿದ ಎಲ್ಲ ಶಬ್ದಗಳು; ನಿಯಮವನ್ನು ಹೇಳಲಾಗದುವು. ಶಬ್ದಗಳು ಭಾರತದ ರೂಪಾಯಿಯಂತೆ, ಮನುಷ್ಯನಂತೆ ಬೆಲೆ ಕಳೆದುಕೊಳ್ಳುತ್ತವೆ. Hooligan ಎಂಬುದು ಐರ್ಲೆಂಡಿನ ಒಂದು ಮನೆತನದ ಹೆಸರು. ಅವರು ಇತಿಹಾಸಕಾಲದಲ್ಲಿ ಗದ್ದಲ ಎಬ್ಬಿಸಿದವರು. ಇಂದು ಅದಕ್ಕೆ ಗೂಂಡಾ ಅರ್ಥ ಬಂದಿದೆ. ಗೂಂಡಾ ಶಬ್ದ ಸಹ ಪಾರಸಿ ಗುಂಡಾ, ಗುಂಡ್=ತಂಡ, ಜಂಗುಳಿ, ಸೈನ್ಯ

ಅರ್ಥವಿದ್ದುದು ಭಾರತದಲ್ಲಿ ಸೈನಿಕರು ಪುಂಡಾಟ ನಡೆಸಿದ್ದರಿಂದ ಪುಂಡರು ಅರ್ಥ ಪಡೆಯಿತು. Rivals ಎಂದರೆ ನದಿಯ ಆಚೆ-ಈಚೆ ದಡದವರು ಎಂಬರ್ಥವಿತ್ತು. ಈಗ ಪ್ರತಿಸ್ಪರ್ಧಿಗಳು, ವೈರಿಗಳು ಎಂದಾಗಿವೆ. God-sib ಎಂದರೆ ದೇವರಿಗೆ ಸಂಬಂಧಪಟ್ಟುದು, ಸುಖಪಾದದ್ದು. ಅದು gossip ಆಗಿ ಪಿಸುಮಾತು, ಹರಟೆಯಾಗಿದೆ. Lambart'la Begue ಎನ್ನುವವನು ಸ್ಥಾಪಿಸಿದ ಧರ್ಮ ಪಂಥದವನು beggar· ಈಗ ಭಿಕ್ಷುಕ.

'ಗವಾರ' ಎಂದರೆ ಹಳ್ಳಿಯವನು, ಆದರೆ ದಡ್ಡ, ಅಸಂಸ್ಕೃತ ಅರ್ಥ ಪಡೆದಿದೆ. ಆಳ್ ಎಂದರೆ ಮನುಷ್ಯ, ಶೂರ, ಯೋಧ ಮೊದಲಾದ ಅರ್ಥಗಳಿದ್ದುವು, ಈಗ ಸೇವಕ ಅರ್ಥ ಬಂದಿದೆ. ಸಂಸ್ಕೃತ ಶಬ್ದ ಅನ್ನ ರೂಢಿಗೆ ಬಂದಮೇಲೆ ಕನ್ನಡದ ಸಮಾನಾರ್ಥಕ ಶಬ್ದ ಕೂಳ್ ಬಳಕೆ ತಪ್ಪಿ, ಪಿಂಡ ಎಂಬರ್ಥದಲ್ಲಿ (ಹಿಂಡೀ ಕೂಳು) ಮತ್ತು ತಂಗಳನ್ನ (ತಣ್+ಕೂಳ್+ಅನ್ನ) ಎಂಬಲ್ಲಿ ಉಳಿದಿದೆ. ಓಜ< ಉಪಾಧ್ಯಾಯದಿಂದ ಬಂದದ್ದು. ಉವಜ್ಝಾಯ, ಒವಜ ಶಬ್ದಗಳಿವೆ. ಕವಿರಾಜ-ಮಾರ್ಗಕಾರ 'ಗುರು' ಅರ್ಥದಲ್ಲಿ ಬಳಸಿದ್ದಾನೆ. ಪಂಪ 'ಬಿಲ್ಲೋಜ' ಎಂದು ಗುರುಗಳನ್ನು ಕರೆದಿದ್ದಾನೆ. ಈಗ ಅಕ್ಕಸಾಲಿಗ, ಕಲ್ಲುಕುಟಿಗ ಆಗಿದೆ. ಹೊಯ್ಸಳರ ಕಾಲಕ್ಕೆ ದಾಸೋಜ ಮೊದಲಾದ ಶಿಲ್ಪಿಗಳ ಹೆಸರು ರೂಢಿಯಲ್ಲಿತ್ತು. ದೆವ್ವ, ದೇಗುಲ<ದೇವ, ದೇವಕುಲದಿಂದ ಬಂದುವು. ಬೇರೆಯೇ ಅರ್ಥ ಪಡೆದಿವೆ. ಕನ್ನಡದಲ್ಲಿ ನಾರು ಎಂದರೆ ಸುವಾಸನೆ, ಕಂಪು, ಪರಿಮಳ ಅರ್ಥವಿತ್ತು. ನರುಗಂಪು ಎಂಬಲ್ಲಿ ಈಗಲೂ ಈ ಅರ್ಥವಿದೆ. ಈಗ ನಾರುತ್ತದೆ ಎಂದರೆ ದುರ್ಗಂಧ. 'ನಾತ' ಎಂದರೂ ನಾರುವಿನಂತೆ ಸುವಾಸನೆಯೆ. ಅದೂ ಕೊಳೆತು ಕೆಟ್ಟನಾತ ಅರ್ಥ ಪಡೆದಿದೆ. ಕೊಳೆತ ಶಬ್ದಕ್ಕೂ ಆಗತಾನೆ ಬಿರಿದ, ಪರಿಮಳಯುಕ್ತ ತಾಜಾ ಅರ್ಥವಿತ್ತು. 'ಹಾರುವ'ನಿಗೆ ತುಂಬ ಗೌರವ ಇತ್ತು. ಪಾರ್=ನೋಡು, ಪಾರ್ವ=ನೋಡುವವನು, ದ್ರಷ್ಟಾರ. ಪ>ಹ ಆಯಿತು, ಜೊತೆಗೆ ಅರ್ಥವೂ ಬದಲಾಗಿ ಬಡಹಾರುವನಾದ. ಜಿನ್ನಾಣ<ವಿಜ್ಞಾನದ ತದ್ಭವ, ಜಿನ್ನಾಣಗಿತ್ತಿ ಎನ್ನುವಾಗ ಅಪಮೌಲ್ಯ ಹೊಂದಿತು. ಭೂರಿಭೋಜನದ 'ಭೂರಿ'ಗೆ ಉತ್ತರ ಕರ್ನಾಟಕದಲ್ಲಿ ಶ್ರಾದ್ಧದ ಊಟ ಎಂಬರ್ಥ ಬಳಕೆಯಲ್ಲಿದೆ. 'ಪುಣ್ಯತಿಥಿ'ಗೂ ಶ್ರಾದ್ಧ ಅರ್ಥ ಬಂದಿದೆ. ಶನಿ ಒಳ್ಳೆಯದನ್ನೂ ಮಾಡಬಲ್ಲ, ಆದರೂ ಶನಿಕಾಟ ಎಂಬ ಬಳಕೆಯೇ ಹೆಚ್ಚು. ಕಿರುಕುಳ ಎಂದರೆ ಸಣ್ಣ ತೆರಿಗೆ ಎಂಬರ್ಥವಿತ್ತು. ಬಹುಶಃ ಅಂಥ ಕಿರುಕುಳಗಳ ಹೊರೆ ಹೆಚ್ಚಾಗಿ ಹಿಂಸೆ ಅರ್ಥ ಬಂದಿರಬೇಕು. (ಈಗ ಧಾರವಾಡದ ಕಡೆ ಕಿರುಕುಳ ರಜೆ ಎಂದರೆ ಸಾಂದರ್ಭಿಕ ರಜೆ ಎಂದರ್ಥ) ಅಗ್ಗ<ಅರ್ಘದಿಂದ ಬಂದದ್ದು. ಅಗ್ಗಳ ಎಂದರೆ ಶ್ರೇಷ್ಠ ಎಂದರ್ಥ. ಶಬ್ದದ ಬೆಲೆಯೂ ಅಗ್ಗವಾಯಿತು. ವಿರಾಗಿ>ಬೈರಾಗಿಯಾಗಿದೆ, ಅರ್ಥ ಬೇರೆ. ಸಂಸ್ಕೃತದ ಹಲವು ಶಬ್ದಗಳು ಹೀಗೆ ಕನ್ನಡದಲ್ಲಿ ಹೀನಾರ್ಥ ಪಡೆದಿವೆ. ಮುಂಡ ಪದ

ಸಂಸ್ಕೃತದಲ್ಲಿ ಜನಾಂಗವಾಚಿ, ಕಾಬೂಲಿ, ಕಾಂಭೋಜದ ಜನರನ್ನು ತಲೆ ಬೋಳಿಸಿಕೊಂಡವರು ಎಂದು ಶಾಸನಗಳಲ್ಲಿ ಹೇಳಲಾಗಿದೆ. ಮಹಾಭಾರತದಲ್ಲೂ ಜನಾಂಗ ವಾಚಿಯಾಗಿ ಬಂದಿದೆ. ಅದರಿಂದ ಕನ್ನಡದ 'ಮುಂಡೆ' ತಲೆ ಬೋಳಿಸಿಕೊಂಡವಳು, ವಿಧವೆ ಎಂಬ ಅರ್ಥ ಬಂದಿರಬಹುದು. 'ಕೋರಿ'ಯ ಮೂಲ ಕೋಱ, 'ಉಡುಗೊಱೆ'ಯಲ್ಲಿದೆ. ಎಲ್ಲ ಬಗೆಯ ಅರಿವೆಗೆ, ವಸ್ತ್ರಕ್ಕೆ 'ಕೋರಿ' ಬಳಕೆಯಾಗುತ್ತಿತ್ತು, ಈಗ ಚಿಂದಿವಸ್ತ್ರ, ಕಂಬಳಿ ಅರ್ಥ ಬಂದಿದೆ. 'ಜಾರ' ಎಂದರೆ ಪ್ರಿಯ, ಓಪ, ಈಗ ಸ್ತ್ರೀಲಂಪಟ. ಹಡಪ ಎಂದರೆ ಸಂಚಿ ಸಾಮಾನ್ಯ ಚೀಲ, ಹಳಗನ್ನಡದಲ್ಲಿ ಉತ್ತಮ ಅರ್ಥವಿತ್ತು. ಈಗ ಹಡಪದವ ಎಂದರೆ ನಾಪಿತ, ಕ್ಷೌರಿಕ. ಅಬ್ಬಾ>ಅಬ್ಬೆ>ಅಜೆ=ತಾಯಿ ಅರ್ಥ. ಅಬ್ಬೇ ಎಂಬುದು ಹೀನಾರ್ಥದಲ್ಲಿ ಬಳಕೆಯಾಗುತ್ತಿದೆ. ಅಮ್ಮ ಎಂದರೆ ಹಳಗನ್ನಡದಲ್ಲಿ ತಂದೆ ಅರ್ಥವಿತ್ತು. "ಅಮ್ಮನ ಗಂಧವಾರಣ". ತಂದೆ ಅರ್ಥ ಹೋಗಿ ತಾಯಿ ಅರ್ಥ ಬಂದಿತು. ಉತ್ತರ ಕರ್ನಾಟಕದಲ್ಲಿ ವಿಧವೆ ಅರ್ಥ ಸೂಚಿಸುತ್ತದೆ. ಅಲ್ಲಿ 'ಅವ್ವ' ಗೌರವಾರ್ಥ ಕೊಡುತ್ತದೆ. ಕಾವಲಿ<ಕಾಲುವೆ ಅಕ್ಷರ ಪಲ್ಲಟವಾಗಿ ಆಗಿದೆ (ಕಾಲ್+ವಾಯ್=ಕಾಲುವೆ), ಉತ್ತರ ಕರ್ನಾಟಕದಲ್ಲಿ ಗಟಾರ ಅರ್ಥದಲ್ಲಿದೆ. ಮೈಸೂರು ಕಡೆ ದೋಸೆ ಹೆಂಚು. ಇಂದು ಅಡಕೆಯ ಬೆಲೆ ದುಬಾರಿ ಇರಬಹುದು. ಆದರೆ ಮಾತಿನಲ್ಲಿ ಅಡಕೆಗೆ ಹೋದ ಮಾನ, ಅಡಕೆ ಯೋಗ್ಯತೆಯೂ ಇಲ್ಲ ಎನ್ನುವಲ್ಲಿ ಕ್ಷುಲ್ಲಕಾರ್ಥ ಪಡೆಯುತ್ತದೆ.

೯. ಅರ್ಥಾಂತರ: ಕೆಲವು ಶಬ್ದಗಳು ಅರ್ಥದಲ್ಲಿ ವಿರಳಿತ ಪಡೆಯದೆ, ಅಂದರೆ ಉತ್ತಮಾರ್ಥ ಹೀನಾರ್ಥ ಪಡೆಯದೆ, ತಮ್ಮ ವಿಶಿಷ್ಟ ಅರ್ಥದ ಗುಣವನ್ನು ಪ್ರಕಾಶಿಸುವ ಬೇರೆ ಅರ್ಥವನ್ನು, ವಾಚ್ಯಾರ್ಥದ ಜೊತೆಗೆ ಸೂಕ್ಷ್ಮಾರ್ಥವನ್ನೂ ಕೊಡುತ್ತವೆ. ಇದಕ್ಕೆ ಅರ್ಥಾಂತರ ಎನ್ನುತ್ತಾರೆ. ಉದಾ: ಪಾದರಸ, ಆನೆ, ಕುಂಟುಕುದುರೆ, ಕತ್ತೆ, ಚೌಕಟ್ಟು, ಕತ್ತರಿ, ಕೊರಿ (bore), ವಕ್ರ, ಸಪ್ಪೆ ಊಟ, ಬರೆ ಎಳೆ, ಕೊಕ್ಕೆ, ನೇಣು, ಎತ್ತಂಗಡಿ ಇತ್ಯಾದಿ. ಇವುಗಳಲ್ಲಿ ವಾಚ್ಯಾರ್ಥವಲ್ಲದೆ ಸ್ವಭಾವ, ಗುಣ, ಕ್ರಿಯೆಗೆ ಸಂಬಂಧಿಸಿದಂತೆ ಸೂಕ್ಷ್ಮ ಅರ್ಥವೂ ಸೇರಿರುತ್ತದೆ. ಆನೆಯ ನಡಿಗೆ ನಿಧಾನ, ಪಾದರಸ ಚುರುಕು, ಚಂಚಲ, ಕತ್ತೆಯ ಮೊಂಡುತನ, ದಡ್ಡತನ, ಕತ್ತರಿಯ ಕ್ರಿಯಾರ್ಥ, ಖಾರದ ಊಟದಲ್ಲಿ ಮಾಂಸಾಹಾರ ಊಟದ ಖಾರ ಇತ್ಯಾದಿ ಸೂಕ್ಷ್ಮಾರ್ಥಗಳೂ, ವಿಶೇಷಾರ್ಥಗಳೂ ಸೂಚಿತವಾಗುತ್ತವೆ.

೧೦. ಪರಿಸರಾರ್ಥ ಮೌಲ್ಯ: ಸ್ಥಳ, ಪರಿಸರದ ಕಾರಣ ಕೆಲವು ಶಬ್ದಗಳು ಬೇರೆ ಅರ್ಥವನ್ನು ಪಡೆಯುತ್ತವೆ. ಉಷ್ಟ್ರ ಎಂದರೆ ಕಾಡುಕೋಣ. ಜನ ವಲಸೆ ಹೋದಾಗ ಅಲ್ಲಿಯ ಪ್ರಾಣಿಯನ್ನು ಉಷ್ಟ್ರ ಎಂದರು (ಉಷ್ಟ್ರ>ಒಂಟೆ). ಚರ್ಚಿನ ಆವರಣದಲ್ಲಿ ಫಾದರ್, ಮದರ್‌ಗೆ ಬೇರೆ ಅರ್ಥ ಸೂಚಿತ. ಆಸ್ಪತ್ರೆಯಲ್ಲಿ ಸಿಸ್ಟರ್

ಶಬ್ದಕ್ಕೂ ಅರ್ಥ ಬೇರೆ. ಓಲೆ, ಪತ್ರ ಎಂದರೆ ಎಲೆ (ಓಲೆಗರಿ, ಪದ್ಮಪತ್ರ). ಬರೆಯಲು ಬಳಸುವುದು. ಈಗ ಮೂಲಾರ್ಥ ಹೊಳೆಯುವುದೇ ಇಲ್ಲ. ಕಾಗದದ ಮುದ್ರಿತ ಕರೆಯೋಲೆಗಳು, ಪತ್ರ ಬರೆಯುವುದು ಇತ್ಯಾದಿ. ಹಾಗೇ ಅಮೂರ್ತ ಭಾವನೆಗಳನ್ನು ಮೂರ್ತ ಪದಗಳ ಮೂಲಕ ಸೂಚಿಸುವುದೂ ಪರಿಸರ ಮಹಿಮೆ ಯಿಂದಲೆ. ಉದಾ : ತೂಕದ ಮನುಷ್ಯ, ಜಿಲಿಯುಳ್ಳ ಮಾತು, ಹರಿತ ಬುದ್ಧಿ, ಮೆಂಕುಬುದ್ಧಿ, ವಕ್ರಬುದ್ಧಿ ಇತ್ಯಾದಿ.

ಮನುಷ್ಯನಂತೆ ಶಬ್ದಗಳಿಗೂ ಇತಿಹಾಸ ಉಂಟು, ಏರಿಳಿತ ಉಂಟು, ಬಣ್ಣ ಬದಲಾವಣೆ ಉಂಟು. ಆದ್ದರಿಂದಲೇ ಭಾಷೆಯು ಜೀವಂತ ಎನ್ನುವುದು.

*

## ೧೩. ಭಾಷೆಯ ಬೆಳವಣಿಗೆ: ಅನ್ಯಭಾಷಾ ಸ್ವೀಕರಣ

ಒಂದು ಭಾಷೆಯ ಬೆಳವಣಿಗೆಯನ್ನು ಅದರ ಶಬ್ದಕೋಶದಲ್ಲಿ ಗುರು
ಬಹುದು. ಪಾಶ್ಚಾತ್ಯ ವಿಶ್ವವಿದ್ಯಾಲಯ ಹಾಗೂ ಖಾಸಗಿ ಪ್ರಕಟನ ಸಂಸ್ಥೆಗ
ತಾವು ಪ್ರಕಟಿಸಿರುವ ನಿಘಂಟುಗಳಿಗೆ ಆಗಾಗ್ಗೆ ಸೇರ್ಪಡೆಯಾಗಬೇಕಾದ ಅನುಬ
ಗಳನ್ನು ಹೊರಡಿಸುತ್ತವೆ. ಪರಿಷ್ಕೃತ ಆವೃತ್ತಿಗಳನ್ನು ಪ್ರಕಟಿಸುತ್ತವೆ. ಅಂ
ಭಾಷೆಗೆ ಸದಾ ಹೊಸ ಶಬ್ದಗಳ ಸೇರ್ಪಡೆ ಆಗುತ್ತಲೇ ಇರುತ್ತೆ. ಈ ಶಬ್ದಗ
ಅನ್ಯ ಭಾಷೆಯ ಸ್ವೀಕರಣಗಳಾಗಿರಬಹುದು, ಹೊಸ ಸೃಷ್ಟಿಯಾಗಿರಬಹುದ
ಭಾಷೆ ಬೆಳೆಯುವುದು ಹೀಗೆ. ಭಾಷಾ ವ್ಯತ್ಯಾಸವೂ ಬೆಳವಣಿಗೆಯ ಸೂಚನೆ
ಎಂದು ನೋಡಿದ್ದೇವೆ. ಇಲ್ಲಿ ಅನ್ಯ ಭಾಷೆಗಳ ಪ್ರಭಾವದಿಂದ ಸೇರ್ಪಡೆಯಾಗು
ರೂಢಿಗೆ ಬರುವ ಶಬ್ದಗಳ ಬಗ್ಗೆ ವಿವೇಚಿಸಿದೆ.

ಸಾಮಾಜಿಕ, ರಾಜಕೀಯ, ವ್ಯಾಪಾರ ವ್ಯವಹಾರ, ಪ್ರವಾಸ ಸಂಬಂಧವಾ
ಸಂಪರ್ಕಗಳ ಪರಿಣಾಮವಾಗಿ ಹಲವಾರು ಭಾಷೆಯ ಶಬ್ದಗಳು ಒಂದು ಭಾಷೆಯ
ಬಂದು ಸೇರಿಕೊಳ್ಳುತ್ತವೆ. ಹೊಸ ವಸ್ತು ಅಥವಾ ಭಾವನೆಗಳು, ವಿಚಾರಗ
ಆ ಭಾಷೆಯಲ್ಲಿದ್ದಂತೆಯೋ, ಇಲ್ಲವೆ ಅಲ್ಪ ಸ್ವಲ್ಪ ಬದಲಾವಣೆಯೊಂದಿಗೆ ಇನ್ನೊಂ
ಭಾಷೆಗೆ ಬಂದು ಸೇರುತ್ತವೆ. ಅಂದರೆ ಸ್ವೀಕೃತವಾಗುತ್ತವೆ. ಎಷ್ಟೋ ವೆ
ತಮ್ಮಲ್ಲಿರುವ ಶಬ್ದಗಳನ್ನು ಬಿಟ್ಟು ಪರಭಾಷಾ ಶಬ್ದಗಳನ್ನೇ ಹೆಚ್ಚು ಬಳಸಬಹುದ
ಅದರಿಂದ ಮೂಲ ದೇಶೀ ಶಬ್ದಗಳು ಮರೆಯಾಗುತ್ತವೆ. ಉದಾ: ಅನ್ನ ಬಂ
ಕೂಳ್ ಮರೆಯಾಯಿತು, ಹೀಗೇ ಅರಿಲ್ (ನಕ್ಷತ್ರ), ನೇಸರ್ (ಸೂರ್ಯ), ಬಡಗ
(ಉತ್ತರ), ತೆಂಕಲು (ದಕ್ಷಿಣ) ಮೂಡಣ, ಪಡುವಣ ಬಳಕೆ ತಪ್ಪಿದುವು. ಹೊ
ಎಂದರೆ ಸೂರ್ಯ, ಈಗ time ಅರ್ಥದಲ್ಲಿ ಬಳಕೆಯಲ್ಲಿದೆ. ತಿಂಗಳು (ಚಂದ್ರ)
ಬೇರೆ ಅರ್ಥದಲ್ಲಿ ಬಳಕೆಯಲ್ಲಿದೆ.

ಅನ್ಯ ಭಾಷೆಯ ಶಬ್ದಗಳನ್ನು ಒಂದು ಭಾಷೆ ಪಡೆದು ಬಳಸುವುದಕ್ಕೆ ಎರವ
ಶಬ್ದಗಳು, ಸ್ವೀಕರಣ–ಸ್ವೀಕೃತ ಶಬ್ದಗಳು (Loan words) ಎನ್ನುತ್ತಾ
ಅವುಗಳಲ್ಲಿ ಮೂರು ಬಗೆಯಾಗಿ ಭಾಷಾವಿಜ್ಞಾನ ದೃಷ್ಟಿಯಿಂದ ವಿಂಗಡಿಸುತ್ತಾ
೧. ಸ್ವೀಕೃತ ಪದಗಳು: ಅನ್ಯಭಾಷೆಯ ಪದವನ್ನು ಹೆಚ್ಚು ಕಡಿಮೆ ಮೂಲಧ್
ಹಾಗೂ ಆಕೃತಿ ಅಥವಾ ರೂಪದಲ್ಲಿ ಪಡೆದರೆ ಸ್ವೀಕೃತ ಪದ (Loan word
ಎನಿಸಿಕೊಳ್ಳುತ್ತವೆ.* ೨. ಶಬ್ದಾರ್ಥ ಸ್ವೀಕರಣ: ಒಂದು ಭಾಷೆಯ ಒಂ
ಶಬ್ದರೂಪವನ್ನು ಅಥವಾ ಶಬ್ದಗುಚ್ಛವನ್ನು ಅನ್ಯಭಾಷಾಶಬ್ದದ ಅರ್ಥಕ್ಕೆ ಅನುಗು
ವಾಗಿ ಕೊಂಚ ಮಾರ್ಪಾಟು ಮಾಡಿಯೋ, ಇಲ್ಲವೆ ಹಾಗೆಯೋ ಬಳಸಿದಾ

---

* If a form is taken over directly (with more or less phon
logical and morphological adeptation) it is known as a 'Lo
word'.

ಬದ್ಧಾರ್ಥ ಸ್ವೀಕರಣ(Loan shift)ವಾಗುತ್ತದೆ.* ೩. ಸಂಯೋಜಿತ ಸ್ವೀಕರಣ : ಸ್ವೀಕರಿಸಿದ ಶಬ್ದದ ಭಾಗವನ್ನು ಸ್ವಕೀಯ ಭಾಷೆಯ ಶಬ್ದರೂಪಕ್ಕೆ ಹೊಂದುವಂತೆ ಮಾರ್ಪಡಿಸಿಕೊಂಡು ಸಂಯೋಜಿಸಿ ಬಳಸುವುದು.† ಕನ್ನಡದಲ್ಲಿ ಇದು ಪ್ರಾಚೀನ ಕಾಲದಿಂದಲೂ ನಡೆದು ಬಂದಿದೆ.

ಭಾಷಾಸ್ವೀಕರಣವನ್ನು ಇನ್ನೊಂದು ರೀತಿಯಲ್ಲಿ ಮೂರು ವರ್ಗವಾಗಿ ವಿಂಗಡಿಸುವುದೂ ಉಂಟು. ಒಂದು, ಸಾಂಸ್ಕೃತಿಕ ಸ್ವೀಕರಣ (Cultural borrowing). ಇದು ಸಮಾನ ಸ್ವತಂತ್ರ ಭಾಷೆಗಳ ನಡುವೆ ನಡೆಯುವ ಸ್ವೀಕರಣ ಅಥವಾ ಕೊಳುಕೊಡುಗೆ. ಎರಡು, ಏಕಪಕ್ಷೀಯ ಸ್ವೀಕರಣ (Intimate borrowing). ಇದೂ ಸಹ ಸ್ವತಂತ್ರ ಭಾಷೆಗಳ ನಡುವೆ ನಡೆಯುವುದಾದರೂ ಸ್ವೀಕರಿಸುವುದು ಏಕಪಕ್ಷೀಯವಾಗಿರುತ್ತದೆ. ಮೂರು, ಉಪಭಾಷಾಸ್ವೀಕರಣ (Dialect borrowing). ಯಾವುದೇ ಭಾಷೆಯ ಉಪಭಾಷೆಗಳ ನಡುವೆ ಪರಸ್ಪರ ನಡೆಯುವ ಶಬ್ದಗಳ ಕೊಳುಕೊಡುಗೆಗಳು.

ಕನ್ನಡ ದ್ರಾವಿಡ ಭಾಷಾವರ್ಗದ ಒಂದು ಭಾಷೆ. ಅದಕ್ಕೆ ಅದರದೇ ಆದ ಮೂಲ ಶಬ್ದಭಂಡಾರವಿದೆ. ಈ ಮೂಲಶಬ್ದ ಭಂಡಾರಕ್ಕೆ ಕಾಲಕ್ರಮೇಣ ಸಂಸ್ಕೃತ, ಪ್ರಾಕೃತ, ತಮಿಳು, ತೆಲುಗು, ಮರಾಠಿ, ಪೋರ್ಚುಗೀಸ್, ಅರೇಬಿಕ್, ಪಾರಸಿ, ಹಿಂದೂಸ್ತಾನಿ, ಹಿಂದಿ, ಇಂಗ್ಲಿಷ್ ಮುಂತಾದ ಭಾಷೆಗಳ ಶಬ್ದಗಳು ಬಂದು ಸೇರಿದುವು. ಹಾಗೆಯೇ ಕನ್ನಡದಿಂದ ಘಾಟ್, ಮಲ್ನಾಡ್, ಅಡಕೆ (Arecanut), ಕವಡೆ (Cowry) ಮೊದಲಾದ ಶಬ್ದಗಳು ಇಂಗ್ಲಿಷಿಗೂ ಸೇರಿವೆ. ಇವೆಲ್ಲ ಬಹುವಾಗಿ ಸಾಂಸ್ಕೃತಿಕವಾದುವು. ಸಾಮಾನ್ಯವಾಗಿ ನಾಮಪದ, ಗುಣವಚನಗಳು ಹೆಚ್ಚಾಗಿ ಸೇರುತ್ತವೆ. ಕ್ರಿಯಾಪದ ಕಡಿಮೆ. ಸರ್ವನಾಮ ಸೇರುವುದೇ ಇಲ್ಲ ಎನ್ನಬಹುದು.

ಕನ್ನಡ ಶಬ್ದಕೋಶವನ್ನು ತತ್ಸಮ, ತದ್ಭವ, ದೇಶ್ಯ, ಅನ್ಯದೇಶ್ಯ ಎಂದು ನಾಲ್ಕು ವಿಧವಾಗಿ ವಿಂಗಡಿಸುವುದು ರೂಢಿಯಲ್ಲಿ ಬಂದಿದೆ. ಇದರ ಬಗ್ಗೆ ಚರ್ಚೆಯೂ ಇದೆ. 'ತತ್ಸಮ' ಎಂದರೆ 'ತತ್' (ಅದಕ್ಕೆ ಅಂದರೆ ರೂಢಿಯಲ್ಲಿ) ಸಂಸ್ಕೃತಕ್ಕೆ ಸಮ ಎಂದು ಅರ್ಥ. ಸಂಸ್ಕೃತದ ಶಬ್ದ ಹಾಗೇ ಅಥವಾ ಅತ್ಯಲ್ಪ ವಿಕಾರ, ಬದಲಾವಣೆಯೊಂದಿಗೆ ಸ್ವೀಕೃತವಾಗಿ ಪ್ರಯೋಗದಲ್ಲಿರುವುದು. ಲಕ್ಷ್ಮೀ > ಲಕ್ಷ್ಮಿ,

* If the meaning of a native form or combination of forms is shifted to correspond to that of a foreign expression it is known as a 'Loan shift'.

† If a part of a loan is reshaped to resemble a native form, while the rest remains more or less in its initial shape, it is a 'Loan blend'.

ಸೀತಾ > ಸೀತೆ, ರಾಜನ್ > ರಾಜ, ಶಾಲಾ > ಶಾಲೆ, ದಿಕ್ > ದಿಕ್ಕು, ಮನಸ್ > ಮನಸ್ಸು, ಅನ್ನ, ಧರ್ಮ ಇತ್ಯಾದಿ. 'ತದ್ಭವ' ಎಂದರೆ 'ತತ್' (ಅದರಿಂದ ಅಂದರೆ ರೂಢಿಯಲ್ಲಿ) ಸಂಸ್ಕೃತದಿಂದ 'ಭವ' ಆದದ್ದು, ಹುಟ್ಟಿದ್ದು ಎಂದು ಅರ್ಥ. ಸಂಸ್ಕೃತದಿಂದ ಹೆಚ್ಚು ವಿಕಾರ, ಬದಲಾವಣೆ ಹೊಂದಿ ಕನ್ನಡಕ್ಕೆ ಬಂದಿರುವ ಶಬ್ದಗಳು. ಈ ಶಬ್ದಗಳು ಸಂಸ್ಕೃತದಿಂದಲೇ ನೇರವಾಗಿ ವಿಕಾರಹೊಂದಿ ಬಂದಿರ ಬಹುದು, ಅಥವಾ ಪ್ರಾಕೃತದ ಮೂಲಕ ಬಂದಿರಬಹುದು. ಕೇಶಿರಾಜ ಇವನ್ನು ಅಪಭ್ರಂಶ ಪ್ರಕರಣದಲ್ಲಿ ಹೇಳಿದ್ದಾನೆ. ಉದಾ: ಶ್ರೇಣಿ > ಏಣಿ, ದ್ರೋಣಿ– ದೋಣಿ, ವೈಶಾಖ > ಬೇಸಗೆ, ಕೋಟಿ > ಕೋಡಿ, ಯಾತ್ರೆ > ಜಾತ್ರೆ, ವೇತ್ರ > ಬೆತ್ತ, ಕ್ಷೀರ < ಕೀರು, ಪಿಷ್ಟ > ಹಿಟ್ಟು, ಗ್ರಂಥಿ > ಗಂಟು, ಚೀರ < ಸೀರೆ, ಶ್ರೇಷ್ಠಿ > ಸೆಟ್ಟಿ, ಕ್ರೇಣಿ (ಬೆಲೆಗೆ ಕೊಳ್ಳುವುದು) > ಕೇಣಿ > ಗೇಣಿ (ಗುತ್ತಿಗೆ) ಇತ್ಯಾದಿ. 'ದೇಶ್ಯ' ವೆಂದರೆ ಒಂದು ಭಾಷೆಯ ಮೂಲ ಶಬ್ದಗಳು, ಆ ಜನಪದವೇ ಸೃಷ್ಟಿಸಿದ ಶಬ್ದಗಳು. ಕನ್ನಡದಲ್ಲಿ ಮೂಲದ್ರಾವಿಡ ಶಬ್ದಗಳಲ್ಲದೆ, ತಮಿಳು ತೆಲುಗುಗಳಲ್ಲಿ ಕಾಣಬರದ ದೇಶ್ಯ ಶಬ್ದಗಳೂ ಇವೆ. ಒಟ್ಟಾಗಿ ದೇಶ್ಯ ಎನ್ನಲಾಗುತ್ತಿದೆ. ಉದಾ: ನೆಲ, ಹೊಲ, ಅಕ್ಕಿ, ಮನೆ, ಮಳೆ, ಬೆಟ್ಟ, ಮರ, ಗಿಡ ಇತ್ಯಾದಿ. 'ಅನ್ಯದೇಶ್ಯ'ವೆಂದರೆ ಸಂಸ್ಕೃತ, ಕನ್ನಡವಲ್ಲದ ಬೇರೆ ದೇಶಭಾಷೆಯ ಶಬ್ದಗಳು. ಉದಾ: ರೈಲು, ಮೈಲಿ, ಸಾಬೂನು, ಟಿಕೀಟು, ಎಂಜಿನ್ನು, ಗಿಲೀಟು, ಲಾಂದ್ರ ಇತ್ಯಾದಿ.

ಕೇಶಿರಾಜ 'ಸಮಸಂಸ್ಕೃತ' ಎಂಬ ಶಬ್ದ ಪ್ರಯೋಗಿಸಿದ್ದಾನೆ. ಅವನ ದೃಷ್ಟಿಯಲ್ಲಿ ಸಂಸ್ಕೃತದಿಂದ ನೇರವಾಗಿ ಬಂದ (ರೂಢಿಯಲ್ಲಿ 'ತತ್ಸಮ') ಎನ್ನುವ ಶಬ್ದಗಳು. ಆದರೆ 'ತತ್ಸಮ' ಎಂಬ ಶಬ್ದವನ್ನೂ ವಿಶೇಷವಾದ ಅರ್ಥದಲ್ಲಿ ಬಳಸಿ ದ್ದಾನೆ. ಅವನ ಅಭಿಪ್ರಾಯದಲ್ಲಿ ತತ್ಸಮ ಎಂದರೆ ಸಂಸ್ಕೃತಕ್ಕೂ ಕನ್ನಡಕ್ಕೂ ಸಮಾನವಾದ (ಆದರೆ ಅದರ ಮೂಲ ಸಂಸ್ಕೃತವೋ ಕನ್ನಡವೋ ತಿಳಿಯದ) ಎರಡು ಭಾಷೆಯಲ್ಲೂ ರೂಢಿಯಲ್ಲಿರುವ ಶಬ್ದಗಳು. ಬಹುಶಃ ಅರಿಸಮಾಸ ದೋಷನಿವಾರಣೆ ಗಾಗಿ ಕೇಶಿರಾಜ ಇವುಗಳನ್ನು ಪ್ರತ್ಯೇಕವಾಗಿ ಹೇಳಿರಬೇಕು. ಇವು ದ್ರಾವಿಡದಿಂದ ಸಂಸ್ಕೃತಕ್ಕೆ ಹೋಗಿರಬಹುದಾದ ಶಬ್ದಗಳಾಗಿವೆ. ಉದಾ:

ಮಣಿ: ದಿನಮಣಿ (ಸಂ), ಉಡೆವಣಿ (ಕ)
ಮಂಚ: ರತ್ನಮಂಚ, ತೂಗುಮಂಚ
ಪಟ್ಟ: ಪಟ್ಟಮಹಿಷಿ, ಪಟ್ಟವಣೆ
ತೋರಣ: ಮಕರತೋರಣ, ತಳಿರ್ದೋರಣ
ಅಂಕ: ಮೃಗಾಂಕ, ಅಂಕವಣಿ, ಅಂಕಮಾತು
ಗಂಡ: ಗಂಡವರ್ಗ, ಗಂಡಸೆಂಡಿರ್
ಆರತಿ: ಮಂಗಳಾರತಿ, ತುಪ್ಪದಾರತಿ ಇತ್ಯಾದಿ.

ರಾ. ನರಸಿಂಹಾಚಾರ್ಯರು ಸಂಸ್ಕೃತಸಮ, ಪ್ರಾಕೃತ ಸಮ, ಸಂಸ್ಕೃತಭವ, ಪ್ರಾಕೃತಭವ, ದೇಶ್ಯ, ಅನ್ಯದೇಶ್ಯ ಎಂದು ಆರು ಬಗೆಯಾಗಿ ವಿಂಗಡಿಸುತ್ತಾರೆ. ಅವರು ಹೇಳುವ ಸಂಸ್ಕೃತಸಮ ರೂಢಿಯು ತತ್ಸಮ ಶಬ್ದಗಳು, ಸಂಸ್ಕೃತಭವ ರೂಢಿಯು ತದ್ಭವ ಶಬ್ದಗಳಾಗಿವೆ. ಅವರು ಉದಾಹರಿಸುವ ಪ್ರಾಕೃತಸಮ (ಅಂದರೆ ಪ್ರಾಕೃತದಲ್ಲಿ ಇರುವಂತೆಯೇ ಕನ್ನಡದಲ್ಲಿ ಬಳಕೆಯಲ್ಲಿರುವ) ಶಬ್ದಗಳು ಹೀಗಿವೆ:

| ಸಂಸ್ಕೃತ | ಪ್ರಾಕೃತ | ಕನ್ನಡ |
|---|---|---|
| ಸ್ನೇಹ | ಣೇಹ | ಣೇಹ |
| ಪ್ರತಿ | ಪಡಿ | ಪಡಿ |
| ನಿಭ | ಣಿಭ | ಣಿಭ |
| ಸ್ಥಾನಂ | ಠಾಣ | ಠಾಣ |
| ವ್ಯಾಖ್ಯಾನಂ | ವಖ್ಖಾಣ | ವಖ್ಖಾಣ |
| ವಕ್ರ | ವಂಕ | ವಂಕ |
| ನೂಪುರಂ | ಣೇಉರಂ | ನೇವುರ |
| ಕಾರ್ಯ | ಕಜ್ಜ | ಕಜ್ಜ |
| ಆರ್ಯ | ಅಜ್ಜ | ಅಜ್ಜ ಇತ್ಯಾದಿ. |

ಪ್ರಾಕೃತಭವ ಶಬ್ದಗಳೆಂದರೆ ಸಂಸ್ಕೃತದಿಂದ ಪ್ರಾಕೃತಕ್ಕೆ ಹೋಗಿ ವಿಕಾರಹೊಂದಿ, ಕನ್ನಡಕ್ಕೆ ಬಂದಾಗ ಮತ್ತೂ ವಿರೂಪ ಹೊಂದಿದ, ಬದಲಾವಣೆ ಹೊಂದಿದ ಶಬ್ದಗಳು.

| ಸಂಸ್ಕೃತ | ಪ್ರಾಕೃತ | ಕನ್ನಡ |
|---|---|---|
| ದಂಷ್ಟ್ರಾ | ದಾಢಾ | ದಾಡೆ |
| ಕೂರ್ಪಾಸ | ಕುಪ್ಪಿಸೋ | ಕುಪ್ಪಸ |
| ಶಿಥಿಲ | ಸಢಿಲೋ | ಸಡಿಲ |
| ಸ್ಥೂಲಃ | ಥೋರೋ | ತೋರ (ದಪ್ಪ) |
| ಸ್ನುಷಾ | ಸುಸಾ | ಸೊಸೆ |
| ವಿದ್ಯಾ | ವಿಜ್ಜಾ | ಬಿಜ್ಜೆ |
| ರಾಜ್ಞೀ | ರಾಣೀ | ರಾಣಿ |
| ವಿಜ್ಞಾನಂ | ವಿಣ್ಣಾಣಂ | ಬಿನ್ನಾಣ |
| ಹರಿದ್ರಾ | ಹಲದ್ದಾ | ಹಳದಿ |
| ಆಜ್ಞಾ | ಆಣಾ | ಆಣೆ |
| ಮಲಿನಂ | ಮಇಲಂ | ಮೈಲಿ (ಮೈಲಿಗೆ) |
| ಪೃಥಿವೀ | ಪುಢವೀ | ಪೊಡವಿ ಇತ್ಯಾದಿ. |

ಅಚ್ಚುಕಟ್ಟು (ಅತ್ಯುತ್ಕೃಷ್ಟ), ಗಾವುದ (ಗವ್ಯೂತ), ಪಕ್ಕಾ (ಪಕ್ವ), ಸಕ್ಕರೆ (ಶರ್ಕರಾ) ಶಬ್ದಗಳು ಪಾಳಿ ಭಾಷೆಯ ಕೋಶಗಳಲ್ಲಿ ಸಿಗುತ್ತವೆ.

ಈ ಎಲ್ಲ ವಿಂಗಡಣಾ ಕ್ರಮಗಳನ್ನು ಗಮನಿಸಿ ಹೇಳುವುದಾದರೆ ಸ್ಥೂಲವಾಗಿ ಶಬ್ದಗಳನ್ನು ದೇಶ್ಯ–ಅನ್ಯದೇಶ್ಯ ಎಂದು ವಿಭಾಗಿಸಬಹುದು. ಎಲ್ಲ ಬಗೆಯ ತತ್ಸಮ ತದ್ಭವಗಳೂ ಅನ್ಯದೇಶ್ಯದಲ್ಲಿ ಸೇರುತ್ತವೆ. ಅನ್ಯದೇಶ್ಯ ಶಬ್ದಗಳು ಸ್ವೀಕೃತಪದ, ಶಬ್ದಾರ್ಥ ಸ್ವೀಕರಣ, ಸಂಯೋಜಿತ ಸ್ವೀಕರಣವಾಗಿ ಬರುತ್ತವೆ ಎಂದೂ ಹೇಳಬಹುದು.

**ಸಂಸ್ಕೃತ :** ಕನ್ನಡದ ಮೇಲೆ ಹೆಚ್ಚಾಗಿ ಸಂಸ್ಕೃತದ ಪ್ರಭಾವ ಬಿದ್ದಿದೆ. ಆದರೆ ಮಲೆಯಾಳಂ, ತೆಲುಗುಗಳಲ್ಲಿ ಇನ್ನೂ ಹೆಚ್ಚು ಶಬ್ದಗಳು ಸೇರಿವೆ. ತಮಿಳಿನ ಮೇಲೆ ಅತ್ಯಂತ ಕಡಿಮೆ ಪ್ರಭಾವ. ತಮಿಳಿನಲ್ಲಿ ಹಿಂದಿನಿಂದಲೂ ಒಂದು ಬಗೆಯ ವಿರೋಧವಿದೆ. 'ಕನ್ನಡ' ಸಾಹಿತ್ಯದ ಭಾಷೆಯಾಗಲು ಜೈನರು ಕಾರಣ. ಬ್ರಾಹ್ಮಣರಿಗೆ ಸಂಸ್ಕೃತವೇ ಮುಖ್ಯವಾಗಿತ್ತು, ಕನ್ನಡವಲ್ಲ. ಬ್ರಾಹ್ಮಣರ ಹಸ್ತಕ್ಷೇಪ ತಮಿಳಿನಲ್ಲಿ ಕಡಿಮೆಯಾಗಿದ್ದುದೇ ಸಂಸ್ಕೃತ ಪ್ರಭಾವ ಅತಿಕಡಿಮೆಯಾಗಲು ಕಾರಣ ಎನ್ನಲಾಗಿದೆ.

ಸಂಸ್ಕೃತ ಪದಗಳಿಗೆ ಕನ್ನಡ ಪ್ರತ್ಯಯಗಳನ್ನು ಸೇರಿಸಿ ಬಳಸುವುದು ಹಿಂದಿನಿಂದಲೂ ರೂಢಿಯಲ್ಲಿ ಬಂದಿತು. ಸಂಸ್ಕೃತದ ಬಳಕೆಯನ್ನು ವಿರೋಧಿಸಿದ ಕವಿಗಳೂ ಇದ್ದಾರೆ. ಅವರು ಸಂಸ್ಕೃತವನ್ನು ತದ್ಭವ ಮಾಡಿಕೊಂಡರು. ಸಾಮಾನ್ಯವಾಗಿ ನಾಮಪದ ಸ್ವೀಕರಣ ರೂಢಿ. ಸಂಸ್ಕೃತದಿಂದ ನಾಮಪದ, ಸಮಾಸ ಪದಗಳಲ್ಲದೆ ಅವ್ಯಯಗಳನ್ನು ಸ್ವೀಕರಿಸಲಾಗಿದೆ. ಉದಾ : ಅಥವಾ, ಪ್ರಾಯಶಃ, ಬಹುಶಃ, ಸದ್ಯಃ, ಅಗತ್ಯ ಇತ್ಯಾದಿ.

ಕೆಲವು ಶಬ್ದಗಳು ಸಂಸ್ಕೃತದಿಂದ ಕನ್ನಡಕ್ಕೆ ಬಂದಾಗ ಮೂಲಾರ್ಥವನ್ನು ಕಳೆದುಕೊಂಡು ಬೇರೆ ಅರ್ಥ ಪಡೆದುವು. ಉದಾ :

ಅವಸರ : ಸಮಯ, ಅವಕಾಶ, occasion ಎಂಬರ್ಥ ಹೋಗಿ ತ್ವರೆ, ಆತುರ ಆಯಿತು.

ಅಪರೂಪ : ಕುರೂಪ, ugly ಎಂಬರ್ಥಕ್ಕೆ ಬದಲು ಅಪೂರ್ವ, ವಿರಳ ಅರ್ಥ ಪಡೆದಿದೆ.

ಅಲಕ್ಷ್ಯ : ಲಕ್ಷ್ಯವಿಲ್ಲದ, ಅಗೋಚರ, unmarked, insignificant ಅರ್ಥ ಹೋಗಿ ಕನ್ನಡದಲ್ಲಿ ಅನಾದರ, ತಾತ್ಸಾರ ಅರ್ಥ ಪಡೆಯಿತು.

ಖಂಡಿತ : ಕತ್ತರಿಸಿದುದು ಎಂದರ್ಥ ; ಕನ್ನಡದಲ್ಲಿ ನಿಶ್ಚಿತ ಎಂದಾಗಿದೆ.

ದಾಹ : ಸುಟ್ಟುಹೋಗು, ಸೀದುಹೋಗು ; ಕನ್ನಡದಲ್ಲಿ ಬಾಯಾರಿಕೆ.

ನಿಜ : ಸ್ವಂತ, ಸಹಜ, one's own, indigenous ಇತ್ಯಾದಿ ಅರ್ಥ; ಸತ್ಯ ಎಂಬರ್ಥ ಪಡೆದಿದೆ.

ನಿದಾನ : ಕಾರಣ, ರೋಗ ಪರೀಕ್ಷೆ ಇತ್ಯಾದಿ ಅರ್ಥ ; ಕನ್ನಡದಲ್ಲಿ ಮೆಲ್ಲಗೆ, ಸಾವಕಾಶ, ನಿಧಾನ.

ಭದ್ರ : ಶುಭ, ಮಂಗಳ ; ಕನ್ನಡದಲ್ಲಿ ಗಟ್ಟಿ, ಎಚ್ಚರಿಕೆ, safety.

ಮರ್ಯಾದಾ : ಗಡಿ, ಸೀಮೆ, ದಂಡೆ, ನೀತಿಕಟ್ಟಲೆ; ಕನ್ನಡದಲ್ಲಿ ಗೌರವ, ಮನ್ನಣೆ.

ವಿಪರೀತ : ವಿರುದ್ಧ, ಪ್ರತಿಕೂಲ ; ಕನ್ನಡದಲ್ಲಿ ಅಧಿಕ, ಅತಿ, ಹೆಚ್ಚು.

ಸರಾಗ : ಸವರ್ಣ, coloured, ರಕ್ತವರ್ಣಯುಕ್ತ, ಸಮೋಹ; ಆದರೆ ಕನ್ನಡದಲ್ಲಿ ಸುಲಭ, ಅಡ್ಡಿಯಿಲ್ಲದ ಎಂದಾಗಿದೆ.

ಸ್ನೇಹ : ಪ್ರೀತಿ, ಆರ್ದ್ರತೆ, ಜಿಡ್ಡು ; ಕನ್ನಡದಲ್ಲಿ ಗೆಳೆತನ ಎಂಬರ್ಥ ಬಂದಿದೆ.

ಶಿಕ್ಷೆ : ಅಧ್ಯಯನ, ಕಲಿಸುವುದು, ಶಿಕ್ಷಾ ಶಾಸ್ತ್ರ, ವೇದಾಂಗ ; ಕನ್ನಡದಲ್ಲಿ ದಂಡನೆ ಎಂದಾಗಿದೆ.

ಅಸಹ್ಯ : ಸಹಿಸಲಾಗದ ಎಂಬರ್ಥ ; ಕನ್ನಡದಲ್ಲಿ ಜುಗುಪ್ಸೆ.

ಅನುಮಾನ : ಊಹೆ, ಸಂಭವ ಅರ್ಥಕ್ಕೆ ಬದಲು ಕನ್ನಡದಲ್ಲಿ ಸಂಶಯ ಎಂಬರ್ಥ ಬಂದಿದೆ.

ಉಚಿತ : ತಕ್ಕ, ಯೋಗ್ಯ, ಔಚಿತ್ಯಪೂರ್ಣ ; ಕನ್ನಡದಲ್ಲಿ ಬಿಟ್ಟಿ, ಹಣ ಪಡೆಯದೆ ಕೊಡುವ ಎಂಬರ್ಥ.

ಯಜಮಾನ : ಯಜ್ಞವನ್ನು ನಡೆಸುವವನು, ಕರ್ತೃ. ಈಗ ಒಡೆಯ, ಮಾಲಿಕ, ಗಂಡ (ನಮ್ಮ ಯಜಮಾನ್ರು)

ಗ್ರಹಚಾರ : ಗ್ರಹಗಳ ಚಲನೆ. ಗ್ರಹಚಲನೆಯಿಂದ ಒಳಿತು-ಕೆಡುಕು ಎರಡು ಉಂಟು. ಆದರೆ ವಿಧಿ, ಅನಿಷ್ಟ ಎಂದಾಗಿದೆ.

ಆಹುತಿ : ಯಜ್ಞದಲ್ಲಿ ಯಜ್ಞಕುಂಡಕ್ಕೆ ಹಾಕುವ ತುತ್ತು. ಈಗ ಬಲಿ ಅರ್ಥ; 'ಬಲಿ' ಸಹ ದೇವತೆಗೆ ಕೊಡುವುದೇ ಆಗಿದೆ.

ಅಸುರ : ಸಂಸ್ಕೃತಕ್ಕೂ ಮೂಲದಲ್ಲಿ ದೇವ–ಅಸುರ ಶಬ್ದಗಳ ಅರ್ಥ ಅದಲು-ಬದಲಾಗಿದೆ. ಗ್ರೀಕಿನ ಥಿಯೋಸ್ ಮೂಲ (ದೇವ). ಪಾರಸಿಯಲ್ಲಿ ಅಹುರಮಜ್ದ ದೇವರು. ಋಗ್ವೇದದಲ್ಲಿ ಅಸುರ ಸತ್‌ಶಕ್ತಿ. ಅನಂತರ ರಾಕ್ಷಸ ಅರ್ಥ ಬಂದು ಕನ್ನಡದಲ್ಲೂ ಅದೇ ಉಳಿದಿದೆ.

ಹೀಗೆ ಸಂಸಾರ (ಮೂಲಾರ್ಥ ಪ್ರಪಂಚ), ವಿಳಾಸ < ವಿಲಾಸ, ಕೀರ್ತನೆ ಮುಂತಾದ ಅನೇಕ ಶಬ್ದಗಳ ಅರ್ಥ ಕನ್ನಡದಲ್ಲಿ ಬೇರೆಯಾಗಿರುವುದನ್ನು ಕಾಣಬಹುದು. ಮಾಣಿ < ಮಾಣವಕ - ಬ್ರಾಹ್ಮಣವಟು ಅರ್ಥ. ತುಳು, ಕನ್ನಡದಲ್ಲಿ ಹುಡುಗರನ್ನು ಮಾಣಿ ಎಂದರು. ಉಡುಪಿ ಹೋಟೆಲಿನವರಿಂದ ಸಪ್ಲೈಯರ್ ಅರ್ಥ ಬಂದಿದೆ.

**ದ್ರಾವಿಡ:** ಒಂದು ಮೂಲಭಾಷೆ ಕವಲೊಡೆದಾಗ, ಪ್ರತ್ಯೇಕಗೊಂಡ ಭಾಷೆಗಳಲ್ಲಿ ಮೂಲ ಭಾಷೆಯ ಶಬ್ದ ಅರ್ಥಾಂತರ ಪಡೆದು ಬರುವುದುಂಟು. ಸಂಸ್ಕೃತದ ಆತ್ಮ, ಧೂಮ ಶಬ್ದಗಳು ಗ್ರೀಕ್‌ನಲ್ಲಿ ಅತ್ಮೊಸ್, ಥುಮೊಸ್ ಎಂದಿವೆ. ಎರಡೂ ಆರ್ಯವರ್ಗದ ಭಾಷೆಗಳು. ಆದರೆ ಆ ಶಬ್ದಗಳ ಅರ್ಥ ಬದಲಾಗಿವೆ. ಗ್ರೀಕ್‌ನಲ್ಲಿ ಅತ್ಮೊಸ್ = ಹೊಗೆ, ಥುಮೊಸ್ = ಆತ್ಮ. ಹಿಂದಿ, ಬಂಗಾಳಿ ಸಂಸ್ಕೃತಜನ್ಯ ಭಾಷೆಗಳು. ಘರ್ ಶಬ್ದಕ್ಕೆ ಹಿಂದಿಯಲ್ಲಿ ಮನೆ ಎಂದರ್ಥವಾದರೆ ಬಂಗಾಳಿಯಲ್ಲಿ ಕೋಣೆ ಅರ್ಥ. ಹಾಗೇ, 'ನೀರು' ದ್ರಾವಿಡ ಭಾಷೆಯಾದ ಬ್ರಾಹೂಈಯಲ್ಲಿ ಪಾನಕ ಅರ್ಥ ಪಡೆದಿದೆ. 'ಕಣ' ಕನ್ನಡದಲ್ಲಿ ತೆನೆ ಒಕ್ಕುವ ಸ್ಥಳವಾದರೆ ಕೋತದಲ್ಲಿ ನರ್ತನ ಮಾಡುವ ಸ್ಥಳ. ಪೆದ್ದ, ತೆಲುಗಿನಲ್ಲಿ ದೊಡ್ಡ, ಕನ್ನಡದಲ್ಲಿ ದಡ್ಡ.

**ತಮಿಳು:** ಸಂಸ್ಕೃತ ಮೂಲದ ಶಬ್ದಗಳು ಪ್ರಾಕೃತದ ಮೂಲಕ ಕನ್ನಡಕ್ಕೆ ಬಂದಂತೆ ತಮಿಳಿನ ಮೂಲಕವೂ ಬಂದಿವೆ. ಇವು ತಮಿಳು ಮೂಲಕ ಆದ ತದ್ಭವಗಳು. ಇಲ್ಲಿ ಆಯಾ ಶಬ್ದಗಳು ತಮಿಳಿನಲ್ಲಿ ಪಡೆಯುವ ವ್ಯತ್ಯಾಸವನ್ನೂ, ನೇರವಾಗಿ ಕನ್ನಡಕ್ಕೆ ಬಂದಿದ್ದರೆ ಆಗುತ್ತಿದ್ದ ವ್ಯತ್ಯಾಸವನ್ನೂ ಗಮನಿಸಬೇಕು.

ರಾಜನ್ (ಸಂ) > ಅರಶನ್ (ತ) > ಅರಸ (ಕನ್ನಡ). ತಮಿಳಿನಲ್ಲಿ 'ರ'ಕಾರದಿಂದ ಪ್ರಾರಂಭವಾಗುವ ಪದಗಳ ಆದಿಯಲ್ಲಿ 'ಅ'ಕಾರ ಆಗಮವಾಗುತ್ತದೆ. ಕನ್ನಡದಲ್ಲಿ ಹಾಗಾಗುವುದಿಲ್ಲ. ಕನ್ನಡಕ್ಕೆ ನೇರವಾಗಿ ಬಂದ ರಾಜನ್ > ರಾಯಂ > ರಾಯ ಆಗಿದೆ. ಆದ್ದರಿಂದ 'ಅರಸ' ತಮಿಳಿನಿಂದ ಬಂದ ಶಬ್ದ. 'ಏಣಿ' ಸಹ ತಮಿಳಿನಿಂದ ಬಂದದ್ದು. ಶ್ರೇಣಿ (ಸಂ) > ಏಣಿ (ತ) > ಏಣಿ (ಕ). ಕನ್ನಡಕ್ಕೆ ನೇರವಾಗಿ ಬಂದಿದ್ದರೆ 'ಸೇಣಿ' ಆಗುತ್ತಿತ್ತು, ಸಹಸ್ರ > ಸಾಸಿರ ಆಗಿರುವ ಹಾಗೆ. ಸಂಸ್ಕೃತದ ಸಕಾರ ಕನ್ನಡದಲ್ಲಿ ಉಳಿಯುತ್ತದೆ. ತಮಿಳಿನಲ್ಲಿ ಸಂಸ್ಕೃತದ ಆದಿಯ 'ಸ'ಕಾರ ಬಿಟ್ಟುಹೋಗುತ್ತದೆ. ಉದಾ: ಸಂಧ್ಯಾ > ಅಂದಿ, ಶ್ರಾವಣ > ಆವಣಿ, ಸಹಸ್ರ > ಆಯಿರ, ಸೀಸ > ಈಯಂ ಇತ್ಯಾದಿ. ಆದ್ದರಿಂದ ಏಣಿ ತಮಿಳು ಮೂಲಕ ಬಂದಿದೆ. ಯುಗಲ (ಸಂ) > ನುಗಂ (ತ) > ನೊಗ (ಕ), ಕ್ರಿಯಾ (ಸಂ) > ಕಿರಿಕೈ (ತ) > ಕೆಲಸ (ಕ). 'ಕೋಲೆ ಬಸವ' ಎಂಬುದರ 'ಕೋಲೆ' ತಮಿಳಿನಿಂದ ಬಂದದ್ದು. ಅದಕ್ಕೆ ಅಲ್ಲಿ ಓಲಗ ಎಂಬರ್ಥವಿದೆ. ಓಲಗದೊಡನೆ ಬರುವ ಬಸವ ಕೋಲೆ ಬಸವ. ಆದರೆ ತಲೆಯಾಡಿಸುತ್ತ ಬರುವುದು ಎಂದು ಕನ್ನಡದಲ್ಲಿ ಅರ್ಥ ಬಂದಿದೆ. 'ಶ್ರೀ' ತಮಿಳಿನಲ್ಲಿ 'ತಿರು' ಆಗಿದೆ. ಶ್ರೀಪತಿ > ತಿರುಪತಿ. ಅದರ

ಇನ್ನೊಂದು ರೂಪ ತಿರುಮಲೈ (ಜೆಟ್ಟ್)> ತಿರುಮಲ ಎಂದು ತೆಲುಗಿನಲ್ಲಿ ಆಯಿತು. ಆ ತಿರುಮಲದಿಂದ ಕನ್ನಡದ ತಿಮ್ಮ, ತಿಮ್ಮಪ್ಪ ಶಬ್ದಗಳಾಗಿವೆ. ಶುನಕ (ಸಂ)> ಸುಣಂಗನ್ (ತ)> ಸೊಣಗ (ಕ). ರಸಂ, ತೇಂಗೊಳಲು, ಪೆಂಗಾಯ್ ಇತ್ಯಾದಿ ತಮಿಳಿನಿಂದ ಬಂದುವೇ ಆಗಿವೆ. ಚಕ್ಕುಮುರುಕು, ಮುರುಕು ಎಂದರೆ ತಮಿಳಿನಲ್ಲಿ ಚಕ್ಕುಲಿ ಎಂದರ್ಥ.

## ಅನ್ಯದೇಶ್ಯ

**ಗ್ರೀಕ್ ಮತ್ತು ರೋಮನ್ :** ಕರ್ನಾಟಕ ಮತ್ತು ಗ್ರೀಸ್, ರೋಮ್‌ಗಳ ಸಂಬಂಧ ಕ್ರಿ.ಪೂ. ೩ನೇ ಶತಮಾನದಷ್ಟು ಪ್ರಾಚೀನ ಕಾಲದ್ದು. ಆಕ್ಸಿರಿಂಕಸ್ ಪ್ಯಾಪಿರೈದಿಂದ ಇದು ಸ್ಪಷ್ಟ. ವೊಡ್ಡಾರಾಧನೆಯಲ್ಲಿ ಕೆಲವು ಶಬ್ದಗಳು—ಗ್ರೀಕ್ ಮೂಲದವು—ಕಾಣಬರುತ್ತವೆ. 'ದೀನಾರ' ಗ್ರೀಕ್ ಡಿನೇರಿಯಸ್ ಶಬ್ದದ ರೂಪಾಂತರವಾಗಿದೆ. 'ಡ್ರಾಕ್ಮಾ'ದ ರೂಪಾಂತರ 'ದ್ರಮ್ಮ'. ದೀನಾರ ಚಿನ್ನದ ನಾಣ್ಯ. ದ್ರಮ್ಮ ಬಹುಶಃ ಬೆಳ್ಳಿಯ ನಾಣ್ಯವಿರಬೇಕು. (ನೃಪತುಂಗನ ದ್ರಮ್ಮ ಮಾತ್ರ ಸುವರ್ಣನಾಣ್ಯ). ದ್ರಮ್ಮ>ದಮ್ಮ>ದಮ್ಮಡಿ. ಇವು ಬೇರೆ ಬೇರೆ ರೂಪಗಳು. ಈ ಶತಮಾನದ ಪ್ರಾರಂಭದ ದಶಕಗಳವರೆಗೂ ದಮ್ಮಡಿ ಶಬ್ದ ಬಳಕೆಯಲ್ಲಿತ್ತು. ದಮ್ಮಡಿ ಯೋಗ್ಯತೆ ಇಲ್ಲ—ಎಂಬುದು ಒಂದು ಬಯ್ಗಳ. ಬಹುಶಃ ನಾಲ್ಕು ಕಾಸು (<ಕಾರ್ಷಾ+ಪಣ=ಮಾನ, ಪ್ರಮಾಣದಿಂದ ಬಂದದ್ದು ಚಿನ್ನದ ನಾಣ್ಯ. ಕಾಸು ಕನಿಷ್ಠ ಹಣವಾಯಿತು). ಗ್ರೀಕ್‌ನಿಂದ ನೇರವಾಗಿ ಬಂದ ಈ ಶಬ್ದಗಳಲ್ಲದೆ ಕೆಲವು ಸಂಸ್ಕೃತದ ಮೂಲಕವೂ ಬಂದಿರುವ ಸಾಧ್ಯತೆ ಇದೆ. ಉದಾ: ಹೋರಾ (ಶಾಸ್ತ್ರ), ಜ್ಯಾಮಿತಿ, ಕೇಂದ್ರ, ದ್ರೇಖಾಣಾ, ರಾಶಿಚಿಹ್ನೆಯ ಹೆಸರುಗಳು. ಸುರಂಗ, ನಿಷ್ಕ (ಒಂದು ನಾಣ್ಯ), ಯವನಿಕಾ (ಪರದೆ) ಕನ್ನಡದಲ್ಲಿ ಬಳಕೆಗೆ ಬಂದುವಾಗಿವೆ.

ರೋಮನ್ನರ ಶಬ್ದಗಳು ಕನ್ನಡದಲ್ಲಿ ಕಾಣಬರುವುದಿಲ್ಲ. ಆದರೆ ನಾಣ್ಯಗಳು ಸಿಕ್ಕಿವೆ ಎಂಬುದು ಗಮನಾರ್ಹ.

ಪಾರಸಿ, ಅರಬ್ಬಿ, ಹಿಂದೂಸ್ತಾನಿ : ಕರ್ನಾಟಕದ ಮೇಲೆ ಪರ್ಷಿಯನ್ ಪ್ರಭಾವ ನೇರವಾದದ್ದು. ಪಾರಸಿ ಶಬ್ದ ಸ್ವೀಕರಣ ನೇರ ಸಂಪರ್ಕ ಕಾರಣದಿಂದ ಆದದ್ದು. ಪಾರಸಿ ಮತ್ತು ಕರ್ನಾಟಕ ಸಂಪರ್ಕದ ಅತಿ ಪ್ರಾಚೀನ ದಾಖಲೆ ಇಮ್ಮಡಿ ಪುಲಿಕೇಶಿ ಮತ್ತು ಇಮ್ಮಡಿ ಖುಸ್ರೊ ನಡುವೆ ನಡೆದ ರಾಜದೂತರ ವಿನಿಮಯಕ್ಕೆ ಸಂಬಂಧಿಸಿದುದಾಗಿದೆ. ಏಳನೇ ಶತಮಾನದ ವೇಳೆಗೆ ಪಶ್ಚಿಮ ಕರಾವಳಿ ಪ್ರದೇಶಕ್ಕೆ ಅರಬ್ಬರು ಬಂದಿಳಿದಿದ್ದರು. ಅರಬ್ಬರು ಮುಂಬಯಿ ಬಳಿಯ ಠಾಣ ಮೇಲೆ ದಾಳಿ ಮಾಡಿದರು. ರಾಷ್ಟ್ರಕೂಟರು ಸಿಂಧ್‌ನಲ್ಲಿದ್ದ ಖಲೀಫರ ಪ್ರತಿನಿಧಿಯೊಡನೆ ಸ್ನೇಹ ಸಂಪರ್ಕ ಹೊಂದಿದ್ದರು. ಇದರಿಂದ ರಾಷ್ಟ್ರಕೂಟರೊಡನೆ ವ್ಯಾಪಾರ ಸಂಬಂಧ

ಹೆಚ್ಚಿತು. ಮುಮ್ಮಡಿ ವೀರಬಲ್ಲಾಳನ ಕಾಲದಲ್ಲಿ ಮಲ್ಲಿಕಾಫರ್ ಹೊಯ್ಸಳ ರಾಜ್ಯದ ಮೇಲೆ ದಂಡಯಾತ್ರೆ ನಡೆಸಿದ್ದನು. ವಿಜಯನಗರದ ಅರಸರು ಬಿಜಾಪುರದ ಸುಲ್ತಾನರೊಡನೆ, ಬಹಮನಿ ಸುಲ್ತಾನರೊಡನೆ ಯುದ್ಧದಲ್ಲಿ ತೊಡಗಿದ್ದರು. ಈ ಎಲ್ಲ ಬಗೆಯ ಸಂಪರ್ಕಗಳು ಪರ್ಷಿಯನ್ ಮತ್ತು ಅರಬ್ಬೀ ಭಾಷೆಗಳ ಶಬ್ದಗಳು ಕನ್ನಡದಲ್ಲಿ ಸೇರಲು ಕಾರಣವಾದುವು. ಸೈನ್ಯ, ಆಡಳಿತಗಳಿಗೆ ಸಂಬಂಧಿಸಿದ ಶಬ್ದಗಳು ಹೈದರ್_ಟಿಪ್ಪೂ ಸುಲ್ತಾನರ ಕಾಲದಲ್ಲಿ ಹೇರಳವಾಗಿ ಸೇರಿದುವು. ಆಗ ಆಡಳಿತ ಭಾಷೆ ಪಾರಸಿಯಾಗಿತ್ತು, ಲಿಪಿ ಅರಬ್ಬಿ. ಜಿಲ್ಲಾ ಕೇಂದ್ರಗಳಲ್ಲಿ ಹಿಂದೂಸ್ತಾನಿಯಲ್ಲಿ ವ್ಯವಹಾರವಿತ್ತು. ಇಲ್ಲಿ ಗಮನಾರ್ಹ ಅಂಶವೆಂದರೆ ಪಾರಸಿ, ಅರಬ್ಬಿ, ಹಿಂದೂಸ್ತಾನೀ ಭಾಷಾ ಪ್ರಭಾವ ಕನ್ನಡದ ಮೇಲೆ ಆದಷ್ಟು ಇತರ ದಕ್ಷಿಣ ಭಾರತದ ಭಾಷೆಗಳಮೇಲೆ ಆಗಲಿಲ್ಲ. ಅಥವಾ ಹೀಗೂ ಹೇಳಬಹುದು: ಸ್ವೀಕರಣ ವಿಷಯದಲ್ಲಿ ಇತರ ಭಾಷೆಗಳವರು ಪ್ರತಿರೋಧ ತೋರಿದಷ್ಟು ಕನ್ನಡಿಗರು ತೋರಲಿಲ್ಲ. 'ರಫು' ಪರ್ಷಿಯನ್ ಮೂಲದ ಶಬ್ದ ರೂಪಾಂತರಹೊಂದಿ 'ರಬ್ಬು'ವಾಗಿ (ಹೊಲಿಗೆ) ಬಸವಣ್ಣನವರ ವಚನದಲ್ಲಿ ಕಂಡುಬರುತ್ತದೆ. ೧೩ ನೇ ಶ. ದಿಂದ ರಾವುತ ಮುಂತಾದ ಶಬ್ದಗಳು ಕಾಣಿಸಿಕೊಳ್ಳುತ್ತವೆ.

**ಫಾರಸಿ ಶಬ್ದಗಳು :** ಫಾರಸಿ > ಪಾರಸಿಯಾಗಿದೆ. **ಗೋರಿ**, ಗುಲಾಲು (ಕೆಂಪು ಬಣ್ಣ), ಕಮಾನು, ಖೂನಿ. ಚಬಕ ಶಬ್ದ ಪೋರ್ಚುಗೀಸರ ಮೂಲಕ ಚಬೌಕೊ ಆಗಿ ಕನ್ನಡದಲ್ಲಿ ಚಾಬೂಕು ಆದ ಪಾರಸಿ ಶಬ್ದ. ತುಪಾಕಿ, ತೋಪು, ಸಿಪಾಯಿ, ಹವಾಲ್ದಾರ್, ನಾಮರ್ದ (ಹೇಡಿ). 'ದಿವಾನ' ಮಂತ್ರಿ ಎಂದರ್ಥ, ರಾಜರ ಪತ್ರ ಬರೆದುಕೊಡುವವನು, ಆಡಳಿತ ನಿರ್ವಹಿಸುವ ಬೇರೆ ಅರ್ಥಗಳಲ್ಲೂ ಬಳಸಲಾಗುತ್ತದೆ. ಕನ್ನಡದಲ್ಲಿ ಪ್ರಧಾನಿ ಅರ್ಥದಲ್ಲಿದೆ. ಮೈಸೂರಿನ ದಿವಾನರು. ಅಮಲ್ದಾರ, ಜಮೀನು (estate), ಜಾಗೀರು, ಶಹರು, ಅಮೀನ (ರೆವಿನ್ಯೂ ಅಧಿಕಾರಿ), ಮುನ್ಷಿ (writer), ವಕೀಲ, ಕಾರಕೂನ, ಕೊತ್ತವಾಲ (ಪೋಲಿಸ್ ಅಧಿಕಾರಿ), ಖಜಾಂಚಿ, ಚಪ್ರಾಸಿ (ಸೇವಕ), ದಫೇದಾರ, ಜವಾನ, ಪೇಶ್ವೆ (ಮುಖ್ಯಮಂತ್ರಿ), ಭಕ್ಷಿ (<ಬಕ್ಷಿ ವೇತನ ನೀಡುವ ಅಧಿಕಾರಿ), ಮಾಮಲದಾರ (ತಾಲ್ಲೂಕ ಮಟ್ಟದ ಅಧಿಕಾರಿ), ಗಸ್ತಿ, ಬಂದೋಬಸ್ತು (ಮೂಲಾರ್ಥ ಕಾರ್ಯ ನಿರ್ವಹಣೆ), ರಸೀದ್ > ರಶೀದಿ, ವರದಿ, ವಾರಸುದಾರ (inheriter), ಶಿಸ್ತು (proper assessment ಎಂದು ಮೂಲಾರ್ಥ), ಸಜಾ, ಹಂಗಾಮಿ, ಲಕೋಟೆ, ಶಾಯಿ, ತಂಬೂರಾ > ತಂಬೂರಿ, ಪರದೆ, ಕುಸ್ತಿ, ಪಹಿಲ್ವಾನ್ > ಪೈಲ್ವಾನ, ಷರ್ಬತ್ > ಶರಬತ್ತು, ಅಂಬಾರಿ, ಮಾವುತ, ಅಂದಾಜು, ಆಮದು, ಕಮ್ಮಿ (ಕೊರತೆ ಎಂದರ್ಥ), ಚೌಕಾಸಿ, ದಲ್ಲಾಲಿ > ದಲ್ಲಾಳಿ, ನಗದಿ, ನಮೂನೆ (sample), ಸೇರು, ತೌಲೀಯ > ಟುವಾಲು (ಕರವಸ್ತ್ರ, ಎಂದು ಮೂಲಾರ್ಥ), ರೂಮಾಲ (ಪೇಟ ಎಂದು ಮೂಲಾರ್ಥ), ರೇಶ್ಮೆ (ಭಾರತದಲ್ಲಿ ಚೀನಾಂಬರ ಎನ್ನುತ್ತಿದ್ದರು,

ಅಲ್ಲಿಂದ ರೇಷ್ಮೆ ಬರುತ್ತಿದ್ದುದರಿಂದ), ಲುಂಗಿ, ಶಾಲು, ಚಮುಚಾ, ಕಲಾಪತ್ತು, ಪಿಂಗಾಣಿ, ಚಪಾತಿ, ಚಟ್ನಿ, ನಾಷ್ಟಾ (breakfast), ಮಸಾಲೆ, ಚಾಯ್> ಚಹಾ, ಸೇಬು, ಮೋಜು, ಬೇವರ್ಸಿ(without gaurdian),ಖರ್ಚು(> ಕರ್ಚಿ= ಸಾಮಾನ್ಯ, ಕೀಳು ಅರ್ಥ, ಕರ್ಚಿಯೆಲೆ), ಜರಿ> ಜರಿ, ಜಿಯಾದತಿ> ಜಾಸ್ತಿ (ಅ. ಜಿಯಾದಾ), ದರ್ದ್ > ದರ್ದು (ಮೂಲಾರ್ಥ ರೋಗ. ಕನ್ನಡದಲ್ಲಿ need ಎಂದೂ ಇದೆ), ದುಬಾರಹ್> ದುಬಾರಿ (ಮೂಲಾರ್ಥ ಎರಡನೆಯ ಬಾರಿ), ನಾಜೂಕ್> ನಾಜೂಕು, ಫರಂಗಿ> ಪರಂಗಿ (ಫ್ರೆಂಚ್ ಎಂದು ಅರ್ಥ. ಇದರಿಂದ ಪರಂಗಿ ಹಣ್ಣು, ಪರಂಗಿ ರೋಗ ಬಂದಿವೆ), ಪಾಯಖಾನಾಹ್> ಪಾಯಖಾನೆ (ಕಾಲಕೆಳಗಿನ ಮನೆ, ಮೂಲಾರ್ಥ), ಪೇಚಾಟ < ಪೇಚ್ ನಿಂದ ಬಂದದ್ದು (turning round ಎಂದು ಮೂಲಾರ್ಥ), ಬಂದರು, ಬೂಂದ್> ಬೂಂದಿ (ಮೂಲಾರ್ಥ ಮಳೆಹನಿ. ಹಿಂದೂಸ್ಥಾನಿಯಲ್ಲಿ ಈಗಿರುವ ಬೂಂದಿ ಅರ್ಥ), ಮಿಸ್ತ್ ಅರಿ> ಮೇಸ್ತ್ರಿ (mason), ಮೊಂಬತ್ತಿ, ರಾಯಿಯ್ಯತ್> ರೈತ (ಮೂಲಾರ್ಥ tenant ಎಂದು. ಉರ್ದುವಿನಲ್ಲಿ ಬೇಸಾಯಗಾರ ಆಯಿತು. ಅ.ನಲ್ಲಿ ರತಿ), ರಾಜೀನಾಮಾ> ರಾಜೀನಾಮೆ (ಮೂಲಾರ್ಥ ಒಪ್ಪಂದ ಪತ್ರ), ಬೀಮಾ> ವಿಮೆ, ಸರಕಾರ, ಸಾಮಾನು < ಸಾಮಾನ (ಪೀಠೋಪಕರಣ ಮೂಲಾರ್ಥ) ಹವಸ್> ಹವ್ಯಾಸ (ಮೂಲಾರ್ಥ lust), ಸುಮಾರು, ನಕ್ಷೆ, ನಮೂಜು, ಕಾಗದ, ಖಾಸಗಿ, ಮುಲ್ಕಿ (ಸ್ಥಳೀಯ), ಸಿಬ್ಬಂದಿ (establishment), ಬಾದಾಮಿ, ಗುಲಾಬಿ, ಖಾಕಿ, ಗಂಜೀಫ, ಕಾಹಿಲೆ, ಪಸಲು, ಕಾರ್ಖಾನೆ, ಕುಲಾವಿ, ಗಸಗಸೆ, ಬೇಜಾರು (< ಬೇಜಾರ್ ನಿಂದ ಬಂದದ್ದು ಅಚ್ಚ ಕನ್ನಡ ಬೇಸರ. ಎರಡಕ್ಕೂ ಹೆಚ್ಚೂ ಕಡಿಮೆ ಒಂದೇ ಅರ್ಥ), ಅರ್ಜಿ (< ಅರ್ಜ್ ಮೂಲಾರ್ಥ ದೂರು), ಕೋಮುವಾರು (< ಖಾಮ್ ವಾರ್, ಬುಡಕಟ್ಟಿಗೆ ಸೇರಿದವನು ಮೂಲಾರ್ಥ), ಚಾಕರಿ (ಸೇವೆ) ಇತ್ಯಾದಿ. ಇಂತಹ ನೂರಾರು ಶಬ್ದಗಳಿವೆ.

**ಅರಬ್ಬಿ ಶಬ್ದಗಳು :** ಅಫೀಮು < ಅಫೂನ್, ಇಸ್ವಿ (< ಈಸ್ christ), ಊದುಬತ್ತಿ (ಉರ್ದು= ಅಗರು ಸುಗಂಧ. ವರ್ತಿ ಸಂಸ್ಕೃತದ ತದ್ಭವ ಬತ್ತಿ.), ಕಸಬು < ಕಸಬ್ (ಮೂಲಾರ್ಥ ಸಂಪಾದಿಸು, ಹಿಂ. ವೃತ್ತಿ), ಕಾಜಗ×ಕಾಗದ< ಕಾಗಜ್, ಗಲೀಜು (< ಘಲೀಜ್, ಒರಟು, ದಪ್ಪ ಮೂಲಾರ್ಥ. ಉ. ಹಿಂ. ಕೊಳಕು), ಜಿನಸಿ×ದಿನಸಿ (< ಜಿನಸ್ ಮೂಲಾರ್ಥ commodity. genus ಗ್ರೀಕ್ ಶಬ್ದದಿಂದ ಬಂದದ್ದು, ಅರ್ಥ ವೈವಿಧ್ಯ ಎಂದು), ತಾಯಿತ (< ತಾವೀಜ್), ದಾವಾ> ದಾವೆ (ಮೂಲಾರ್ಥ claim, ಉ. ದೂರು.), ನಖ್ಷ> ನಕ್ಷೆ (ಮೂಲಾರ್ಥ figure, ಹಿಂ. map), ಪಾವತಿ (< ಫೌತ್= ಮರಣ

ಮೂಲಾರ್ಥ), ಮಣ(<ಮನ್), ಮೊಕದ್ದಮೆ, ಯುನಾನಿ (<ಯುನಾನ್ Greece), ರುಜು (ಮೂಲಾರ್ಥ ಹಿಂದಿರುಗಿಸು), ರೊಕ್ಕ (<ರುಖಾ chit ಎಂದು ಮೂಲಾರ್ಥ), ಸಹಿ (<ಸಹೀಹ್ right, ಉ. correct, true), ಶಿಲುಬೆ (ಸಾಲಿಬ್), ಹಜಾಮ (<ಹಜ್ಜಾಮ್. ರಕ್ತದ ಒತ್ತಡ ಕಡಿಮೆ ಮಾಡಲು ರಕ್ತ ಹೊರತೆಗೆಯುತ್ತಿದ್ದವನು ಮೂಲಾರ್ಥ, ಉ. ಹಿಂ.ಯಲ್ಲಿ ಕ್ಷೌರಿಕ ಅರ್ಥ), ಗರೀಬ (ಮೂಲಾರ್ಥ ಅಪರಿಚಿತ ವ್ಯಕ್ತಿ, ಕನ್ನಡದಲ್ಲಿ ಬಡವ), ಇಲಾಖೆ (<ಇಲಾಖಾ, territory, division of land ಮೂಲಾರ್ಥ), ಕದೀಮ (<ಖಾದಿಮ್. ಮೂಲಾರ್ಥಸೇವಕ), ಕುರ್ಚಿ (<ಕುರ್ಸಿ), ಖಜಾನೆ (<ಖಜಾನಾ, ಖಜಾನೆ–ಬಹುವಚನ–ವಸ್ತುಸಾಮಗ್ರಿ ಇಡುವ ಸ್ಥಳ, ಮೂಲಾರ್ಥ), ಖಯಾಲು (<ಖ್ಯಾಲ್, ಮೂಲಾರ್ಥ ವಿಚಾರ), ಜಮೆ, ಜಾಮೀನು, ಜೇಬು, ತಕರಾರು (ಮೂಲಾರ್ಥ, ಪುನರುಕ್ತಿ), ತಬಲ, ತಾರೀಖು, ದಿಮಾಕು (<ದಿಮಾಘ್, ಮೂಲಾರ್ಥ ಮನಸ್ಸು, ಉ. haughtiness), ಪಿತೂರಿ (<ಫುತೂರ್ ಉ. ಫಿತುರ್. ಮೂಲಾರ್ಥ ದೋಷ ಎಂದು), ಬದಲು, ಬಂದೂಕು, ಬಾಕಿ, ಮುತ್ಸದ್ದಿ (ಮೂಲಾರ್ಥ writer), ಮುದ್ದಾಂ (<ಮುದಾಂ, ಮೂಲಾರ್ಥ ಶಾಶ್ವತ. ಕನ್ನಡದಲ್ಲಿ ಖಚಿತ, ತಪ್ಪದೆ, ಬೇಗ ತಲುಪಿಸುವುದು hand delivery), ಶುರು (<ಸುರೂ), ಸಲಕರಣೆ (<ಸಲಾಹ್, ಮೂಲಾರ್ಥ ಆಯುಧ), ಸಾಬೂನು (<ಶಾಬೂನ್), ಹಾಜರಿ, ಹಿಸ್ಸೆ ಇತ್ಯಾದಿ.

ಅರಬ್ಬಿ, ಪಾರಸಿ ಶಬ್ದಗಳಲ್ಲಿ ಕೆಲವು ಹಿಂದೂಸ್ತಾನೀ, ಉರ್ದೂ ಮೂಲಕ ಕನ್ನಡಕ್ಕೆ ಬಂದಿದೆ. ಅಂತಹ ಸಂದರ್ಭಗಳಲ್ಲಿ ಹಿಂದೂಸ್ತಾನಿಯ ಅರ್ಥವನ್ನು ಉಳಿಸಿಕೊಂಡಿವೆ, ಮೂಲಾರ್ಥಕ್ಕೆ ಬದಲಾಗಿ. ಕೆಲವೊಮ್ಮೆ ಮೂಲಾರ್ಥ ಕನ್ನಡದಲ್ಲಿ ಉಳಿದಿದ್ದು ಹಿಂದೂಸ್ತಾನಿಯಲ್ಲಿ ಬೇರೆ ಅರ್ಥ ಇರುವುದುಂಟು. ಆಗ ಅಂತಹ ಶಬ್ದಗಳು ಕನ್ನಡಕ್ಕೆ ನೇರವಾಗಿ ಬಂದುವಾಗಿರುತ್ತವೆ. ಬೇಜಾರು–ಬೇಸರ ಒಂದೇ ಅರ್ಥ. ಬೇಸರ ಅಚ್ಚಕನ್ನಡ. ಆದರೆ ಮೊಂಬತ್ತಿಯ 'ಬತ್ತಿ' ಕನ್ನಡ (<ವರ್ತಿಯ ತದ್ಭವ), 'ಮೊಂ' ಮಾತ್ರ ಪಾರಸಿ. ಅನೇಕ ಗುಣವಾಚಕಗಳನ್ನೂ ಪಾರಸಿ, ಅರಬ್ಬಿ ಭಾಷೆಗಳಿಂದ ಪಡೆದು ಕನ್ನಡದೊಡನೆ ಸೇರಿಸಿ ಬಳಸುತ್ತಿದ್ದೇವೆ. ಖಾತ್ರಿ, ತಾಜಾ, ಸಾದಾ ಇತ್ಯಾದಿ. 'ಬದಲು' ಶಬ್ದವನ್ನು ನಾಮಪದವಾಗಿ ಧಾತುವಾಗಿ ಕನ್ನಡ ಪ್ರತ್ಯಯಗಳೊಡನೆ ಬಳಸಲಾಗುತ್ತಿದೆ. ಬದಲಾಗು, ಬದಲಿಸು, ಷುರುವಾಯಿತು ಇತ್ಯಾದಿ. ಕೆಲವು ಶಬ್ದಗಳು ಮೂಲ ತುರ್ಕಿ ಭಾಷೆಯವು ಉರ್ದು, ಹಿಂದೂಸ್ತಾನಿ ಮೂಲಕ ಬಂದು ರೂಢಿಯಾಗಿವೆ ಎಂದು ಪಾ. ವೆಂ. ಆಚಾರ್ಯರು ಹೇಳುತ್ತಾರೆ. ತುರುಕರು, ತುರುಕ ಶಬ್ದ ಮುಸಲ್ಮಾನರನ್ನು ಕುರಿತದ್ದಾದರೂ Turksಗೆ ಅನ್ವಯವಾಗುತ್ತದೆ, ಅವರೂ ಮುಸಲ್ಮಾನರೇ. ಆದರೆ ಎಲ್ಲ

ಮುಲ್ಮಾನರಿಗೂ ವಿಸ್ತರಿಸಿತು. ತೋಪು (ಪಿರಂಗಿ), ತುಪಾಕಿ <ತೋಪ್_ತುಪಕ್ ನಿಂದ ಬಂದಿದೆ. ಬಾಕು (ಚೂರಿ). ಕೂಲಿ ಗುಲಾಮ ಅರ್ಥದ ಕುಲಿ ಶಬ್ದದಿಂದ ಬಂದಿದೆ. ಖಾನ್ ತುರ್ಕಿಯ ಪ್ರಭು, ಒಡೆಯ ಅರ್ಥದ್ದು; ಬಕ್ಷಿ<ಬರ್ಕ್‌ಶ್ರೀ ಹಣ ಹಂಚುವ ಅಧಿಕಾರಿ ಎಂಬ ಅರ್ಥದ ಶಬ್ದದಿಂದ ಬಂದಿದೆ. ಖಜಾಂಚಿಯಲ್ಲಿ ಖಜಾನಾ ಪಾರಸಿಯದಾದರೆ ಚೀ ಪ್ರತ್ಯಯ ತುರ್ಕೀ ಭಾಷೆಯದಾಗಿದೆ. ಚಕಮಕಿ< ಚಕ್‌ಮಕ್‌ನಿಂದ ಬಂದದ್ದು. ಬಿರುಸುಕಲ್ಲು ಎಂದು ಮೂಲಾರ್ಥ. ಚಕಮಕಿ ಕಲ್ಲನ್ನು ಉಜ್ಜಿ ಬೆಂಕಿ ಕಿಡಿ ಮಾಡುತ್ತಿದ್ದರು, ಘರ್ಷಣೆ ಅರ್ಥದಲ್ಲಿ ಬಳಕೆಯಾಗುತ್ತಿದೆ, ಮಾತಿನ ಚಕಮಕಿ. ಕುರ್ಮಾ ಮಾಂಸಾಹಾರದ ಹೆಸರು, ತುರ್ಕಿ ಕವುರ್ಮ ದಿಂದ ಬಂದಿದೆ. ಕಲಾಪತ್ತು, ಕಲಾಬತ್ತು ಜರಿಬಟ್ಟೆ, ಜರಿ ಎಂದರೆ ಪಾರಸಿಯಲ್ಲಿ ಚಿನ್ನ, ತುರ್ಕಿಯಲ್ಲಿ ಕಲಾಬತ್. ಜುಲಾಬು ಮೂಲತಃ ಮೆಕ್ಸಿಕೋ ದೇಶದ 'ಜಲಾಪ' ಎಂಬ ಊರಿನ ಹೆಸರಿನಿಂದ ಬಂದಿದೆ. ಅಲ್ಲಿಂದ ಬಂದ ಬೇರನ್ನು ಭೇದಿಗೆ ಬಳಸುತ್ತಿದ್ದರು, ಯುನಾನಿ ವೈದ್ಯರು. 'ಅರಬ್ಬಿಜುಲ್ಲಾಬ್' ಎಂದೂ ಇತ್ತು. ಈಗ ಜುಲಾಬು ಮಾತ್ರ ಬಳಕೆಯಲ್ಲಿದೆ. ಅಂಚೆ_ಟಪಾಲುಗಳಲ್ಲಿನ ಅಂಚೆ<ಹಂಸದ ತದ್ಭವ ಅಲ್ಲ. ತಮಿಳು, ಮಲೆಯಾಳಂಗಳಲ್ಲಿ ಮಜಲುಮಜಲಾಗಿ ಕಾಲಾಳು ಪತ್ರ ತಲುಪಿಸುವುದಕ್ಕೆ ಹೇಳುತ್ತಿದ್ದರು. ಟಪಾಲು ಮರಾಠಿಯಿಂದ ಬಂದದ್ದು, ಅದಕ್ಕೂ ಮಜಲು ಎಂದರ್ಥ. ಪೇಚು ಶಬ್ದ ಮೂಲತಃ ಪಾರಸಿಯದಾಗಿದೆ. ಹಿಂದಿ, ಮರಾಠಿಯಲ್ಲಿ ತೊಡಕು, ಭ್ರಮಣೆ ಅರ್ಥವಿದೆ. ಪಾರಸಿ ಮೂಲ ಪೇಚ್‌ಕಶ್ ತಿರುಗಣೆ, ತಿರುಪು ಮೊಳೆಯ ಉಪಕರಣ. ಮೈಸೂರು ಪಾಕು ಯಾರಿಗೆ ಇಷ್ಟವಿಲ್ಲ. ಮೈಸೂರಿನಲ್ಲಿ ಹೆಸರುವಾಸಿ ಸಿಹಿಯೂ ಅಹುದು. ಆದರೆ ಮೈಸೂರಿಗೂ ಅದಕ್ಕೂ ಸಂಬಂಧವಿಲ್ಲ. ಹಿಂದಿಯಲ್ಲಿ ಕಡಲೆಬೇಳೆಗೆ ಮಸೂರ್ ದಾಲ್ ಎನ್ನುತ್ತಾರೆ. ಕಡಲೆ ಹಿಟ್ಟಿನಿಂದ ಮಾಡಿ ತೆಗೆದ ಪಾಕ ಅದು, ಸಿಹಿ ತಿಂಡಿ.

ಅರಬ್ಬಿ, ಪಾರಸಿ ತದ್ಧಿತ ಪ್ರತ್ಯಯಗಳೂ ಕನ್ನಡದಲ್ಲಿ ಸ್ವೀಕೃತವಾಗಿ, ಬಳಕೆಯಲ್ಲಿ ಬಂದಿವೆ. ಕಾರ, ಗಾರ ಸಂಸ್ಕೃತ ಮೂಲಕ ಹಿಂದೆಯೇ ಬಂದಿದ್ದರೂ, ನೇರವಾಗೂ ಬಂದಿವೆ. ದಾನಿ: ಹೂದಾನಿ, ಪನ್ನೀರುದಾನಿ ಇತ್ಯಾದಿ. ದಾರ: ಜೋಡಿದಾರ, ಪಟ್ಟೆದಾರ (lease holder), ಕಂತ್ರಾಟುದಾರ (ಇಲ್ಲಿ contract ಇಂಗ್ಲಿಷ್ ಶಬ್ದಕ್ಕೆ ಪಾರಸಿ ತದ್ಧಿತ ಪ್ರತ್ಯಯ ಸೇರಿದೆ). ಎ. ಶಂಕರ ಕೆದಿಲಾಯ ಅವರು ಧ್ವನಿವ್ಯತ್ಯಾಸ, ಅರ್ಥವ್ಯತ್ಯಾಸ, ವ್ಯಾಕರಣಾಂಶಗಳನ್ನು ವಿಸ್ತಾರವಾಗಿ ತಮ್ಮ ಗ್ರಂಥದಲ್ಲಿ ಹೇಳಿದ್ದಾರೆ.

**ಹಿಂದೂಸ್ತಾನಿ:** ಹಿಂದೂಸ್ತಾನಿಯಿಂದ ಬಂದುವೆಂದು ಪಟ್ಟಿ ಮಾಡುವ ಅನೇಕ ಶಬ್ದಗಳು ಅರಬ್ಬಿ, ಪಾರಸಿ ಶಬ್ದಗಳೇ ಆಗಿವೆ. ಆದರೆ ಶಬ್ದದ ಅರ್ಥ ಮಾತ್ರ ಹಿಂದೂಸ್ತಾನಿಯಲ್ಲಿ ಇರುವುದೇ ಆಗಿದೆ. ರಾ. ಯ. ಧಾರವಾಡಕರ್,

ಆರ್. ನರಸಿಂಹಾಚಾರ್ ಮೊದಲಾದವರು ಕೊಟ್ಟಿರುವ ಪಟ್ಟಿಗಳಲ್ಲಿ ಈ ಶಬ್ದಗಳಿವೆ: ಅಂತಸ್ತು, ಇನಾಮು, ಕಂತು, ಕಾಮಗಾರಿ, ಕಂದಾಯ, ಕಾರ್ಖಾನೆ, ಕಚ್ಚಡಿ, ಕಿಟಕಿ, ಕುಲಾವಿ, ಕೊಠಡಿ, ಖಾಲಿ, ಗಡಿಯಾರ, ಗಾದಿ, ಗಾಬರಿ, ಚಕ್ರಬಂದಿ, ಚುನಾವಣೆ, ಜಮಖಾನೆ, ಟಪಾಲು, ತರಕಾರಿ, ಬಂಗಲೆ, ಮಹಡಿ, ರಜಾ, ರೂಪಾಯಿ, ಹುಂಡಿ, ಹೋಸಿ, ಪಟ್ಟಿ, ಸಲ್ಲಿಕೆ, ಚರಂಡಿ ಇತ್ಯಾದಿ.

**ಪೋರ್ಚುಗೀಸ್ :** ಪೋರ್ಚುಗೀಸರು ದಕ್ಷಿಣದಲ್ಲಿ ವಸಾಹತು ಸ್ಥಾಪಿಸಿದರು. ವಿಜಯನಗರದ ಕೃಷ್ಣದೇವರಾಯನ ಕಾಲದಲ್ಲಿ ಬಿಜಾಪುರ ಸುಲ್ತಾನನ ವಿರುದ್ಧ ಅವನಿಗೆ ನೆರವು ನೀಡಿದರು. ಪಶ್ಚಿಮ ಕರಾವಳಿಯಲ್ಲಿ ತಳವೂರಿದ್ದ ಅವರು ಕರಾವಳಿ ಪ್ರದೇಶದ ಸಣ್ಣಪುಟ್ಟ ರಾಜರೊಡನೆ ಆಗಾಗ್ಗೆ ಯುದ್ಧಮಾಡುತ್ತಿದ್ದರು. ಹೀಗಾಗಿ ಅವರ ಸಂಪರ್ಕ ಕರ್ನಾಟಕಕ್ಕೆ ಹಲವು ಶತಮಾನಗಳಿಂದ ಇತ್ತು. ವ್ಯಾಪಾರ ವ್ಯವಹಾರ ಸಂಬಂಧವೂ ಇತ್ತು. ಫಾದರ್ ಹೆರಾಸ್ ಅವರು ವಿಜಯನಗರದ ವಿಜಯವಿಠ್ಠಲಸ್ವಾಮಿ ದೇವಸ್ಥಾನದ ಅನೇಕ ಕೆತ್ತನೆಗಳನ್ನು ಪೋರ್ಚುಗೀಸ ಶಿಲ್ಪಿಗಳು ಮಾಡಿದ್ದಾರೆ, ಎಂದಿದ್ದಾರೆ. ಆದರೆ ಇದಕ್ಕೆ ಸಮರ್ಥನೆ ಇಲ್ಲ.

ಆಯುಧ, ಆಹಾರಗಳಿಗೆ ಸಂಬಂಧಿಸಿದ ಕೆಲವು ಶಬ್ದಗಳು, ಸಮಾಜ ವ್ಯವಸ್ಥೆಗೆ ಸಂಬಂಧಿಸಿದ ಶಬ್ದಗಳು ಪೋರ್ಚುಗೀಸ್ ಭಾಷೆಯಿಂದ ಬಂದುವೆಂದು ಹೇಳಲಾಗಿದೆ. ಪಗಾರ (ಸಂಬಳ), ಚಾವಿ, ಬಿಸ್ಕತ್ತು, ಫಿರಂಗಿ, ಪಾದ್ರಿ, ಲಿಲಾವ (ಹರಾಜು), ಬಂಬು, ಇಸ್ತ್ರಿ. ಪ್ರೊ|| ಮರಿಯಪ್ಪಭಟ್ಟರು ಮೇಜು <ಮೇಸ ಎಂಬುದರಿಂದ ಬಂದಿತು ಎನ್ನುತ್ತಾರೆ. ಬಟಾಟೆ (<Batata=potato) ಅಲ್ಲಿಂದ ಬಂದಿತು ಎಂದು ಅವರ ಅಭಿಪ್ರಾಯ. ಪ್ರೊ|| ಮರಿಯಪ್ಪ ಭಟ್ಟರು ತಂಬಾಕು ಪೋರ್ಚುಗೀಸ್‌ನಿಂದ ಹಿಂದೂಸ್ತಾನಿ, ಮರಾಠಿ ಮೂಲಕ ಕನ್ನಡಕ್ಕೆ ಬಂದಿತು ಎಂದಿದ್ದಾರೆ. ಪಪಾಯಿ ಪೋರ್ಚುಗೀಸ್ ಶಬ್ದ. ಅದರ ಪರ್ಯಾಯ ಶಬ್ದ ಫರಂಗಿ ಹಣ್ಣು. 'ಶಾಲು'ವಿನ ಮೂಲ ಪೋ.ನ chale ಎಂಬ ಅಭಿಪ್ರಾಯವಿದೆ. ಟವೆಲ್ಲು < toalha ಪೋ. ಶಬ್ದದಿಂದ ಬಂದಿತೆನ್ನುತ್ತಾರೆ. ಆದರೆ ಅದು ಪಾರಸಿ ತೌಲೀಯದಿಂದ ಬಂದುದು ಎಂದು ಇನ್ನೊಂದು ಅಭಿಪ್ರಾಯ. ಅನಾನಸ್ <ananas ನಿಂದ ಬಂದಿದೆ. ಅದರ ಮೂಲ ಫ್ರೆಂಚ್ ಶಬ್ದ. ವಾಸ್ತವವಾಗಿ ಈ ಶಬ್ದ ಬ್ರೆಜಿಲ್ ಭಾಷೆಯದು. ಮಲೆಯಾಳಂನಲ್ಲಿ ಇದಕ್ಕೆ ಫರಂಗಿ ಚಕ್ಕೆ ಎನ್ನುತ್ತಾರೆ. 'ಚಕ್ಕೆ ಎಂದರೆ ಹಲಸಿನಕಾಯಿ.

ಚಾಬೂಕು <Chabuco ದಿಂದ ಬಂದದ್ದು ಎಂಬ ಅಭಿಪ್ರಾಯ ಸರಿಯಲ್ಲ. ಅದರ ಮೂಲ ಪಾರಸಿ. ಕನ್ನಡಕ್ಕೆ ನೇರವಾಗಿ ಬಂದಿದೆ. ಹಾಗೇ ಸಬ್ಬು, ಸಾಬಾಣ, ಸಾಬೂನು. ಇದು ಪೋ. ನಿಂದ ಬಂದದ್ದೆಂದು ಮರಿಯಪ್ಪಭಟ್ಟರು ಹೇಳುತ್ತಾರೆ. Sabao> ಸಬ್ಬ ಆಗಿರಬಹುದು. ಆದರೆ ಣ, ನ ಗಳು ಹೇಗೆ ಬಂದುವು? ವಾತ್ಸಾಯನ

‘ಫೇನಕ’ ಶಬ್ದ ಹೇಳಿದ್ದಾನೆ. ಅದಕ್ಕೆ ಮೈ ತೊಳೆಯಲು ಬಳಸುವ ವಸ್ತು ಎಂದೇ ಅರ್ಥ. ಪಾರಸಿಯಲ್ಲಿ ‘ಶಾಬೂನ್’ ಇದೆ. ಅರಬ್ಬಿ ‘ಶಬೋನ್’. ನಾನಕರ ಗ್ರಂಥದಲ್ಲಿ ‘ಸಬೂನೀ’ ಎಂಬುದನ್ನು ಬಟ್ಟೆ ಸ್ವಚ್ಛಗೊಳಿಸಲು ಬಳಸಬೇಕು ಎಂದಿದೆ. ಮರಾಠೀ ‘ನವನಾಥ ಭಕ್ತಿಸಾರ’ದಲ್ಲಿ ‘ಸಾಬಣೀ’, ‘ಮುಕ್ತೇಶ್ವರ’ ಗ್ರಂಥದಲ್ಲಿ ‘ಸಾಬಣ’ ಶಬ್ದಗಳಿವೆ. ಅಂದರೆ ಪೋರ್ಚುಗೀಸ್ Sabao ದಿಂದ ಸಬ್ಬು, ಸಬ್ಬುಕಾರ, ಪಾರಸಿಯ ಶಾಬೂನ್ > ಸಾಬೂನು ಆಗಿರಬೇಕು. ಮರಾಠಿ ಪ್ರಭಾವದಿಂದ ಸಾಬಾಣ ಆಗಿರಬೇಕು. ಮರಾಠಿಯಲ್ಲಿ ‘ಣ’ ಪ್ರಭಾವ ಹೆಚ್ಚು. ಇವೆಲ್ಲಕ್ಕೂ ಮೂಲ ಲ್ಯಾಟಿನ್ ಭಾಷೆಯ Sapo. ಗಾಲ್ ಜನರು ಇದನ್ನು ಕಂಡುಹಿಡಿದರು. ಟೋಪಿ ಶಬ್ದ ಪೋರ್ಚುಗೀಸ್ topo (=ಮೇಲ್ಭಾಗ, ತುದಿ) ಎಂಬ ಶಬ್ದದಿಂದ ಇಂಗ್ಲಿಷ್, ಹಿಂದೂಸ್ತಾನಿಯ ಮೂಲಕ ಕನ್ನಡಕ್ಕೆ ಬಂದಿದೆ. ಲಾಟರಿ ಇಟಾಲಿಯನ್ ಶಬ್ದ, ಆದರೆ ಮೂಲತಃ ಜರ್ಮನ್ ಭಾಷೆಯದು. ಲಾಟ್ ಎಂದರೆ ಕಡ್ಡಿ, ಹುಲ್ಲನ್ನು ಕಟ್ಟಿನಿಂದ ಅಥವಾ ರಾಶಿಯಿಂದ ಹೊರಕ್ಕೆಳೆಯುವುದು. ಈಗ ಕಾಗದವನ್ನು ಎತ್ತುವುದು, ರಾಶಿಯಿಂದ. Espada ದಿಂದ ಇಸ್ಪೀಟು ಬಂದಿದೆ. ಇಂಗ್ಲಿಷಿನ spade ಸಹ ಅಲ್ಲಿಯದೇ. ಅಂದರೆ ಸಲಿಕೆ, ಗುದ್ದಲಿ. ಎಲೆಯಲ್ಲಿ ಅದರ ಗುರುತು, ಚಿಹ್ನೆ ಹಾಕಿರುವುದರಿಂದ ಬಂದಿದೆ. ಅದು ಪೋರ್ಚುಗೀಸ್, ಫ್ರೆಂಚರ ಆಟ, ನೇರವಾಗಿ ಅವರಿಂದಲೇ ಬಂದಿರಬೇಕು, ಇಂಗ್ಲಿಷರಿಂದಲ್ಲ. ಇಸ್ಪೀಟಾಟದ ‘ತುರುಫು’ ಸಹ ಅಲ್ಲಿಂದಲೇ ಬಂದಿರಬೇಕು, trump card ಅರ್ಥದಲ್ಲಿ. ಎದೆಯ ಹತ್ತಿರ ಮರೆಮಾಚಿ ಇಟ್ಟುಕೊಳ್ಳುವುದು, ಚಿಕ್ಕಬೆಲೆಯ ತುರುಫು ಎಲೆಯಿಂದ ದೊಡ್ಡಬೆಲೆಯುದನ್ನು ಗೆಲ್ಲುವುದು. ಟ್ರಯುಂಫ್ ಎಂದರೆ ಗೆಲ್ಲುವುದು, ವಿಜಯ. ಎಕ್ಕಾ ಸಹ ace ಅರ್ಥದಲ್ಲಿ ಬಳಕೆಯಲ್ಲಿದೆ. ಎಕ್ಕಾ=ಒಂದು ಎಂದರ್ಥ. ಏಕ(ಸಂ), ಏಕ್ (ಹಿಂದಿ) ಗಮನಿಸಿ.

ಫ್ರೆಂಚರ ಪ್ರಭಾವ ಕರ್ನಾಟಕದ ಮೇಲೆ ಕಡಮೆ ಎನ್ನಬಹುದು. ಪೋರ್ಚುಗೀಸ್, ಇಂಗ್ಲಿಷ್‌ನಷ್ಟು ಭಾರತೀಯ ಭಾಷೆಗಳ ಮೇಲೆ ಆಗಿಲ್ಲ. ಕೆಫೆ, ರೆಸ್ಟೋರಾಂ, ಡೀಲಕ್ಸ್ ಮೊದಲಾದುವು ಫ್ರೆಂಚ್ ಭಾಷೆಯಿಂದ ಬಂದುವು.

**ಇಂಗ್ಲಿಷ್ :** ಕೈಲಾಸಂ ಆಂಗ್ಲೋ ಕನ್ನಡ ಎಂದು ಹಾಸ್ಯಮಾಡುವಷ್ಟು ಇಂಗ್ಲಿಷಿನ ಪ್ರಭಾವ ಕನ್ನಡದ ಮೇಲೆ ಆಗಿದೆ. ಅನೇಕ ಶಬ್ದಗಳು ಅತ್ಯಂತ ಸಹಜವಾಗಿ ಕನ್ನಡದೊಡನೆ ಸೇರಿಹೋಗಿವೆ. ಪಾಶ್ಚಾತ್ಯ ನಾಗರಿಕತೆಯ ಪ್ರಭಾವ ದಿಂದ ಸಾಂಸ್ಕೃತಿಕ, ವೈಜ್ಞಾನಿಕ, ಸಾಮಾಜಿಕ, ಔದ್ಯೋಗಿಕ, ಔದ್ಯಮಿಕ ಮುಂತಾಗಿ ಹಲವು ಕ್ಷೇತ್ರಗಳ ಶಬ್ದಗಳು ಇಂದು ಬಳಕೆಯಲ್ಲಿವೆ. ಇಂಗ್ಲಿಷ್ ಶಬ್ದಗಳ ಪ್ರಭಾವ ಐದು ಬಗೆಯಾಗಿ ಆಗಿದೆ:

೧. ನೇರವಾಗಿ ಕನ್ನಡಕ್ಕೆ ಬಂದ ಶಬ್ದಗಳು.

೨. ತದ್ಭವಗಳಾಗಿ ಬಂದುವು ಅಥವಾ ರೂಪಾಂತರ ಸ್ವೀಕರಣ. ಇಲ್ಲೇ ಸಂಯೋಜನಾ ಸ್ವೀಕರಣವೂ ಸೇರುತ್ತದೆ.

೩. ಶಬ್ದಕ್ಕೆ ಶಬ್ದ ಭಾಷಾಂತರ ಮಾಡಿದುವು. ಭಾಷಾಂತರ ಸ್ವೀಕರಣ.

೪. ಶಬ್ದಕ್ಕೆ ಸಮಾನ ಶಬ್ದವಿಲ್ಲದಾಗ, ಹೊಸ ಶಬ್ದ ಸೃಷ್ಟಿಸಿದೆ, ವರ್ಣನಾತ್ಮಕವಾಗಿ ವಿವರಿಸುವ ಶಬ್ದಗಳು ರೂಢಿಗೆ ಬಂದುವು.

೫. ಕನ್ನಡದಲ್ಲಿದ್ದ ಶಬ್ದಗಳನ್ನೇ ಜೀರ್ಣೋದ್ಧಾರಮಾಡಿ ಹೊಸ ಅರ್ಥದಲ್ಲಿ ಬಳಸುವುದು. ವಿಸ್ತರಣ ಸ್ವೀಕರಣ (Loan extension ಅಥವಾ Loan shift)

೧. ಇಂಗ್ಲಿಷ್ ತತ್ಸಮಗಳು (ನೇರವಾಗಿ ಬಂದುವು, direct borrowing): ನಾಗರಿಕತೆ, ವಿಜ್ಞಾನ, ತಂತ್ರಜ್ಞಾನ ಬೆಳೆದಂತೆ ಶಬ್ದಕೋಶವೂ ಬೆಳೆಯುತ್ತದೆ. ಭಾಷೆಯೂ ಶ್ರೀಮಂತವಾಗುತ್ತದೆ. ಆಗ ಆಯಾ ಭಾಷೆ ಬೇರೆ ಭಾಷೆಯ ಶಬ್ದಗಳನ್ನು ಹಾಗೇ ಬಳಸಿಕೊಳ್ಳಬೇಕಾಗುತ್ತದೆ. ಇಂತಹ ಸ್ವೀಕರಣಕ್ಕೆ ಮಿತಿಯಿಲ್ಲ. ವಾಚ್, ಟೆನಿಸ್, ಕ್ರಿಕೆಟ್, ಲಾಯರ್, ನಂಬರ್, ಥರ್ಮಾಮೀಟರ್, ಪೆನ್‌ಷನ್ (> ಪಿಂಚಣಿ, ತದ್ಭವ), ಪೋಲಿಸ್, ಬ್ರೆಡ್, ಬ್ಯಾಂಕ್, ಸಿಮೆಂಟ್, ಹಾಸ್ಟೆಲ್, ಕಾಲೇಜ್, ಸ್ಕೂಲ್ ಇತ್ಯಾದಿ. ಇವುಗಳಲ್ಲಿ ಹಲವನ್ನು ಕನ್ನಡದಲ್ಲಿ ಸ್ವರಾಂತಗೊಳಿಸಿ ಬಳಸಲಾಗುತ್ತಿದೆ.

೨. ಇಂಗ್ಲಿಷ್ ತದ್ಭವಗಳು (ರೂಪಾಂತರಿತ ಸ್ವೀಕರಣ): ಈ ತದ್ಭವಗಳು ಉದ್ದೇಶಪೂರ್ವಕವಾಗಿ ಮಾಡಿಕೊಂಡುವಲ್ಲ. ಅಕ್ಷರಸ್ಥರು, ಅನಕ್ಷರಸ್ಥರು ಎಂಬ ಭೇದವಿಲ್ಲದೆ ಇಂಗ್ಲಿಷ್ ಶಬ್ದಗಳು ಬಳಕೆಯಾದಾಗ ಕೆಲವೊಂದು ಉಚ್ಚಾರಣಾ ವ್ಯತ್ಯಾಸಗಳಾಗುತ್ತವೆ. ಆಯಾ ಭಾಷೆಗೆ ವಿಶಿಷ್ಟವಾದ ವರ್ಣೋಚ್ಚಾರ, ಶಬ್ದರಚನಾ ವಿಧಾನಗಳಿರುತ್ತವೆ. ಅಂತಹ ಸಂದರ್ಭಗಳಲ್ಲಿ ಅನ್ಯದೇಶ್ಯವರ್ಣಗಳ ಉಚ್ಚಾರಣೆ ನಮ್ಮ ಭಾಷೆಯ ತೀರ ಹತ್ತಿರದ ಉಚ್ಚಾರಣೆಯನ್ನು ಪಡೆದು ರೂಢಿಗೆ ಬರುತ್ತದೆ. ಕಾಲಕ್ರಮೇಣ ಅವು ಅನ್ಯದೇಶ್ಯವೆಂದು ಗುರುತಿಸಲಾಗದಷ್ಟು ಮಾರ್ಪಾಟು ಹೊಂದುತ್ತವೆ. ಉದಾ: ಮೇಸ್ತ್ರಿ–ಮಾಸ್ತರ, ಕಟಾಪು–ಕಟಾವು (<cut up), ಟೇಮು, ಟೇಸನ್ನು, ಪಲಟನ್ನು–ಪಟಾಲಂ (<platoon–battalion), ಪಂಚರು (<puncture), ಕಪ್ಪು (cup), ಸುನೀತಾ (sonnet), ಬಿಸ್ಕತ್ತು, ಬುರೂಸು (brush), ಕಪ್ತಾನ, ಬಾಟ್ಲಿ, ಆಸ್ಪತ್ರೆ, ಪಿಸ್ತೂಲು, ಗಿಲೀಟು (<gilt), ಪಿಟೀಲು (<fiddle), ತಿಕೀಟು ಇತ್ಯಾದಿ. ಚೀಟಿ chit ನಿಂದ ಬಂದದ್ದಲ್ಲ, ಹಿಂದೂಸ್ತಾನಿ ಶಬ್ದ. ಗುದಾಮು godown ನ ತದ್ಭವವಾದರೂ ಅದು ಮೂಲತಃ ಮಲಯಾಳಂ

ಗಡೊಂಗ್, ತಮಿಳು ಗಿಡಂಗಿ, ಕನ್ನಡ ಗಡಂಗು ಶಬ್ದವೇ ಇಂಗ್ಲಿಷಿನ godown ಆಗಿ ಪುನಃ ಕನ್ನಡಕ್ಕೆ ಬಂದು ಗುದಾಮು ಆಗಿದೆ. ಟಿಫಿನ್ನು ಮೂಲತಃ ಇಂಗ್ಲಿಷ್ ಶಬ್ದ, ಅರ್ಥ ಮಾತ್ರ ಹಿಂದೂಸ್ತಾನಿಯದು. Tiff ಎಂದರೆ ಕುಡಿ ಎಂದರ್ಥ, ಹಿಂದೂಸ್ತಾನಿಯಲ್ಲಿ ಫಲಾಹಾರವೆಂದು ಅರ್ಥವಿಸ್ತಾರ ಹೊಂದಿ ಇಂಗ್ಲಿಷ್‌ಗೆ ಹೋಯಿತು. ಪುನಃ ಆ ಅರ್ಥದಲ್ಲಿ ಕನ್ನಡಕ್ಕೆ ಬಂದಿದೆ. ಚೌ-ಚೌ ಇಂಗ್ಲಿಷ್ ಶಬ್ದವಲ್ಲ, ಚೀನಿ ಭಾಷೆಯ ಶಬ್ದ. ಕೂಡಿಸಿಟ್ಟ ಬಾಳಕಗಳು (mixed preserves) ಎಂದರ್ಥ. ಕಂದೀಲು candle ನಿಂದ ಅಥವಾ ಪೋರ್ಚುಗೀಸ್‌ನಿಂದ ಬಂದಿರಬಹುದು. ಗುಳಾಪು globe ನ ತದ್ಭವವಾಗಿದೆ.

ಲಾಟೀನು, ಲಾಂದ್ರಗಳು Lantern ಶಬ್ದದ ತದ್ಭವವಾದರೂ ಒರಿಸ್ಸಾ ಭಾಷೆಯಲ್ಲಿ ಲಾಲ್‌ಟೀನ್ ಆಯಿತು, ಅಪಾಯ ಸೂಚಕ ಕೆಂಪುಬಣ್ಣ ಬಳಿಯುತ್ತಿದ್ದುದರಿಂದ. ಲಾಲ್‌ಟೀನು > ಲಾಟೀನು ಆಯಿತು ಎನ್ನಲಾಗಿದೆ. ಆದರೆ Lantern > ಲಾಂದ್ರದಂತೆ ಇಂಗ್ಲಿಷಿನಿಂದ ನೇರವಾಗಿ ಕನ್ನಡಕ್ಕೆ ಬಂದಿರುವ ಸಾಧ್ಯತೆ ಹೆಚ್ಚು. ಜಾಕೀಟು, ಕೋಟು, ಷರಟು, ಮೈಲು, ಬಾಸ್ಕ್ಯಾಟು, ಕಂಪ್ನಿ ಇತ್ಯಾದಿ ಸಹ ತದ್ಭವಗಳೆ. Tenez = ಹಿಡಿ ಎಂಬರ್ಥದ ಫ್ರೆಂಚ್ ಶಬ್ದದಿಂದ ಆಟಕ್ಕೆ ಟೆನಿಸ್ ಎಂದಾಯಿತು. ಕೋಕೋ ಮೂಲತಃ ಮೆಕ್ಸಿಕನ್ ಶಬ್ದ. ಗೋರಿಲ್ಲಾ ಆಫ್ರಿಕಾ ಭಾಷೆಯ ಶಬ್ದ. ವಸ್ತು, ಪ್ರಾಣಿಗಳೊಡನೆ ಅವೂ ಪ್ರವಾಸಮಾಡಿ ಬಂದಿವೆ. ಅಲಾರಂ ಶಬ್ದ ಸೈನ್ಯಪದ್ಧತಿಯಿಂದ ರೂಢಿಗೆ ಬಂದುದು. ಇಟಾಲಿಯನ್ ಭಾಷೆಯಲ್ಲಿ allarme ಎಂದರೆ ಯುದ್ಧಕ್ಕೆ ಸಿದ್ಧವಾಗು ಎಂದರ್ಥ. ಜಾಗೃತವಾಗು, ಎಚ್ಚರವಾಗು ಎನ್ನುವ ಅರ್ಥ ಪಡೆದು ಇಂಗ್ಲಿಷ್ ಮೂಲಕ ಕನ್ನಡಕ್ಕೆ ಬಂದಿದೆ.

೩. ಭಾಷಾಂತರಿತ ಶಬ್ದಗಳು (Loan translations) : ಇದನ್ನು ಭಾಷಾಂತರ ಸ್ವೀಕರಣ, ಭಾಷಾಂತರ ಸಮಾನಾಶ್ರಿತ ಸಮಾಸ ಶಬ್ದಗಳು, ಎರವಲು ಅನುವಾದಗಳು ಎಂದೆಲ್ಲ ಕರೆಯಲಾಗುತ್ತದೆ. ಶಬ್ದಕ್ಕೆ ಶಬ್ದ ಭಾಷಾಂತರವಾಗಿ ಅನೇಕ ಹೊಸ ಶಬ್ದಗಳು ರೂಢಿಗೆ ಬಂದಿವೆ. ಮುನ್ನುಡಿ, ಸಣ್ಣಕಥೆ, ಒತ್ತುಕಾಗದ (blotting paper), ವೃತ್ತಾಂತ ಪತ್ರಿಕೆ, ವಾರ್ತಾ ಪತ್ರಿಕೆ (News paper), ತಂತಿ–ತಾರು (Wire), ಸೀಸಕಡ್ಡಿ (lead pencil), ವೇಳಾಪಟ್ಟಿ. ಕೆಲವೊಮ್ಮೆ ವಿಚಿತ್ರವಾಗಿ ಭಾಷಾಂತರವಾಗಿರುವುದುಂಟು. ಕಲ್ಲೆಣ್ಣೆ (rock oil), ಸುತ್ತೋಲೆ (circular), ಕಡ್ಡಿಪೆಟ್ಟಿಗೆ, ಸೊಳ್ಳೆಪರದೆ, ಹಲ್ಲುಪುಡಿ, ಬಡಾವಣೆ–ವಿಸ್ತರಣ, ಜೇಬುಗಳ್ಳ, ಗಗನಸಖಿ, ಕಾಳಸಂತೆ, ಬಾನುಲಿ, ಪಾನಗೋಷ್ಠಿ, ಅಂಕಣಬರಹ, ಹಾರುವ ತಟ್ಟೆ–ಯಕ್ಷನೌಕೆ ಇತ್ಯಾದಿ.

೪. ವರ್ಣಕ ಶಬ್ದಗಳು : ಆಯಾ ಅರ್ಥ ಸೂಚಿಸುವ ಶಬ್ದವಿಲ್ಲದಾಗ ಅರ್ಥ ಸ್ಪಷ್ಟವಾಗುವಂತೆ ವರ್ಣಿಸುವ ಶಬ್ದಗಳನ್ನು ರೂಪಿಸಿಕೊಳ್ಳಲಾಗುವುದು. ಇರುವ

*

ಶಬ್ದದ ಜೊತೆಗೆ ಇನ್ನೊಂದು ಶಬ್ದ ಸೇರಿಸಿ ಹೊಸ ಅರ್ಥದಲ್ಲಿ ಪ್ರಯೋಗಮಾಡುವುದುಂಟು. ಸೂಚಿ>ಸೂಜಿ ಶಬ್ದಕ್ಕೆ pin ಅರ್ಥದಲ್ಲಿ ಗುಂಡುಸೂಜಿ ಮಾಡಿಕೊಳ್ಳಲಾಯಿತು. ಇದ್ದಲು ಇತ್ತು; coal ಅರ್ಥದಲ್ಲಿ ಕಲ್ಲಿದ್ದಲು ಬಂದಿತು. Socks ಕಾಲುಚೀಲ, ಕರವಸ್ತ್ರ, ಮೇಣಬತ್ತಿ, ಛಾಯಾಚಿತ್ರ (ವಾಸ್ತವವಾಗಿ photo < photon ಬೆಳಕನ್ನು ಸೂಚಿಸುತ್ತದೆ), ಸೀಮೆ ಎಣ್ಣೆ, ಸೀಮೆ ಸುಣ್ಣ, ಒಳಮಾರು-ಹೊರಮಾರು.

೫. ವಿಸ್ತರಣ ಸ್ವೀಕರಣ (Loan shift or loan extension): ಕನ್ನಡದಲ್ಲಿರುವ ಶಬ್ದಗಳನ್ನೇ ಹೊಸ ಅರ್ಥದಲ್ಲಿ ಪ್ರಯೋಗಿಸುವುದು. ಅಂಚೆ, ವಿಮಾನ, ಜಲಕನ್ಯೆ–ನೀರ್ವೆಣ್ಣು (mermaid), ಆಕಾಶವಾಣಿ, ಸುಗ್ರೀವಾಜ್ಞೆ, ಭಗೀರಥಪ್ರಯತ್ನ (Herculean task). ಸಂಸ್ಕೃತ ಶಬ್ದಗಳು ಈಗ ಜೀವದಾನ ಪಡೆದು ಹೊಸ ಅರ್ಥದಲ್ಲಿ ಪ್ರಯೋಗವಾಗುತ್ತಿವೆ.

ಕೆಲವು ಇಂಗ್ಲಿಷ್ ಶಬ್ದಗಳ ಬಗ್ಗೆ ವಿವರಣೆ: 'ರೈಲು' ಎಲ್ಲರೂ ಬಳಸುವ ಶಬ್ದ. ವಾಸ್ತವವಾಗಿ ಹಳಿಗಳಿಗೆ ಹೇಳಬೇಕಾದುದು. 'ರೈಲುರಸ್ತೆ' ಎನ್ನುವುದೇ ಅಲ್ಲದೆ ಅದರ ಮೇಲೆ ಸಾಗುವ ಟ್ರೈನ್‌ಗೂ ರೈಲು ಶಬ್ದವೇ ರೂಢಿಗೆ ಬಂದಿದೆ. ಚೀಟಿಬಟ್ಟೆ ಕೆಲವು ದಶಕಗಳ ಹಿಂದೆ ಹೆಚ್ಚು ಬಳಕೆಯಲ್ಲಿದ್ದ ಶಬ್ದ. ಸಂಸ್ಕೃತ ಚಿತ್ರಕ್ಕೆ ಹೊಳೆಯುವ, ಬೊಟ್ಟುಬೊಟ್ಟುಳ್ಳ, ಬಣ್ಣಬಣ್ಣದ ಎಂದರ್ಥವಿತ್ತು, ಮಹಾಭಾರತ ಕಾಲದಲ್ಲಿ. ತುಳುವಿನಲ್ಲಿ ಚಿಟ್ಟೆ ಎಂದರೆ ಬೊಟ್ಟು, ಚುಕ್ಕಿ ಎಂದರ್ಥ. ಕನ್ನಡದ ಚಿಟ್ಟೆ=butterfly ಸಹ ಇದೇ ಮೂಲದ್ದಿರಬೇಕು. ಚೀಟಿ>ಚೀಟಾ ಹಿಂದಿಯಲ್ಲಾಯಿತು, ಛೀಂಟ್ ಎಂದೂ ಬದಲಾದ ಶಬ್ದ ಇಂಗ್ಲಿಷ್‌ನಲ್ಲಿ ಚಿಂಟ್ಸ್ ಎಂದಾಯಿತು. ಚಿತ್ರಮಯ, ಚಿತ್ರಪಟ ವಸ್ತ್ರದ ಹೆಸರು ಹಿಂದಿಯಲ್ಲಿ. ಅದೇ ಚೀಟಿಬಟ್ಟೆಯಾಗಿ ಕನ್ನಡದಲ್ಲಿ ಬಳಕೆಗೆ ಬಂದಿತು. ಇಂಗ್ಲಿಷಿನ mile ಕನ್ನಡದ ಮೈಲಿ, ಮೈಲುಗಳು ಮೂಲತಃ ಲ್ಯಾಟಿನ್ನಿನ ಸಾವಿರಹೆಜ್ಜೆ ಅರ್ಥದ ಮೈಲ್‌ನಿಂದ ಬಂದಿವೆ. ಬಾಯ್ಕಾಟ್ ಶಬ್ದ ಇಂಗ್ಲಿಷಿನವನಾದ ಕ್ಯಾಪ್ಟನ್ ಬಾಯ್ಕಾಟ್‌ನಿಂದ ಬಂದದ್ದು. ಅವನು ನಿರ್ದಯವಾಗಿ ಗೇಣಿ ವಸೂಲು ಮಾಡುತ್ತಿದ್ದುದರಿಂದ ಗೇಣಿದಾರರು ಅವನಿಗೆ ಅನ್ನ ನೀರು ಕೊಡದೆ ಬಹಿಷ್ಕರಿಸಿದರು. ಸಂಘಟಿತ ಬಹಿಷ್ಕಾರ ಬಾಯ್ಕಾಟ್ ಆಯಿತು. ಬನಿಯನ್ ಇಂಗ್ಲಿಷಿನಿಂದ ಬಂದದ್ದು. ವಾಸ್ತವವಾಗಿ ಸಂಸ್ಕೃತ ವಣಿಜ–ವಣಿಕ> ಬನಿಯಾ ಆಗಿ ಇಂಗ್ಲಿಷಿಗೆ ಹೋಯಿತು ಗುಜರಾಥಿ ವ್ಯಾಪಾರಿಗಳಿಂದ. ಅವರು ಹಾಕಿಕೊಳ್ಳುತ್ತಿದ್ದ ಸಡಿಲ ಜುಬ್ಬಾಕ್ಕೆ ಅದೇ ಹೆಸರು ಬಂದು, ಬಿಗಿ ಒಳ ಅಂಗಿಗು ಬನಿಯನ್ ಎಂದಾಯಿತು. ಅಲ್ಮೈರಾ ಶಬ್ದದ ಮೂಲ ಲ್ಯಾಟಿನ್ ಭಾಷೆಯ ಶಬ್ದ armarium. arma=ಆಯುಧ, arium ಆಗಾರ ಎಂದರ್ಥ. ಪೋರ್ಚುಗೀಸನಲ್ಲಿ ಅಲ್ಮಾರಿಯೋ ಆಗಿ ಇಂಗ್ಲಿಷ್ ಮೂಲಕ ಕನ್ನಡಕ್ಕೆ ಬಂದಿದೆ.

**ಮರಾಠಿ :** ಭಾರತೀಯ ಭಾಷೆಯಾದರೂ ಅನ್ಯಭಾಷಾ ವರ್ಗಕ್ಕೆ ಮರಾಠಿ ಸೇರಿದೆ. ಉತ್ತರ ಕರ್ನಾಟಕದಲ್ಲಿ ಮರಾಠಿ ಪ್ರಭಾವ ಹೆಚ್ಚು. ಆ ಪ್ರದೇಶ ಮುಂಬೈ ಆಡಳಿತಕ್ಕೆ ಒಳಪಟ್ಟಿದ್ದುದು ಕಾರಣವಾಗಿದೆ. ಅಲ್ಲಿ ಲೆಕ್ಕಾಚಾರ ವಿಷಯದಲ್ಲಿ ದೋನಾಣೆ, ಚಾರಾಣೆ, ಅಡೀಚ್, ಸಾಡೇಸಾತ್, ಬಾರಾ ಇತ್ಯಾದಿ ರೂಢಿಯಲ್ಲಿವೆ. 'ಶೇಕಡಾ' ಶಬ್ದ ಎಲ್ಲ ಕಡೆ ರೂಢಿಗೆ ಬಂದಿದೆ. ಸೇವುಣರ ಕಾಲದಿಂದಲೂ ಮರಾಠಿ ಶಬ್ದಗಳು ಕನ್ನಡಕ್ಕೆ ಸೇರಿವೆ. ಹರಿಹರ ಬೈಲ<ಬೈಲ್=ಎತ್ತು ಶಬ್ದ ಪ್ರಯೋಗಿಸಿದ್ದಾನೆ. ಕುಮಾರವ್ಯಾಸನಲ್ಲಿ ಬರುವ ಮೊರ್ಬ, ಫೂತುರೆ–ಶಬ್ದಗಳು ಮರಾಠಿಯವು. ಖರೆ, ಬಿಡೆಯ<ಭಿಡೇ (ದಾಕ್ಷಿಣ್ಯ, ನಾಚಿಕೆ ಅರ್ಥ), ಬೈಸಿಗೆ, ಜೇವಣಿ<ಜೇವಣ್ (=ಊಟ), ಮೋರ<ಮಯೂರ, ಮಂಜರ (ಬೆಕ್ಕು), ಮಾಕಡ<ಮಂಕಡ<ಮರ್ಕಟ, ದುಗುಣ<ದ್ವಿಗುಣ, ಚೌಕ<ಚತುಷ್ಕ, ಕಾಪಡ–ಕಪ್ಪಡ<ಕರ್ಪಟ, ಎಕ್ಕಟಿ<ಏಕಟಾ<ಏಕ ಇತ್ಯಾದಿ. ಟಪಾಲು=ಮಜಲು ಅರ್ಥದಿಂದ post ಅರ್ಥ ಪಡೆದು ಬಳಕೆಗೆ ಬಂದಿದೆ. ಪುಢಾರಿ ಶಬ್ದ ಮರಾಠಿಯಿಂದ ಬಂದುದೇ ಆಗಿದೆ. ಪುಢೇ ಎಂದರೆ ಮುಂದೆ, ಪುಢಾರಿಗೆ ಮುಂದಾಳು ಎಂದರ್ಥ. ಕನ್ನಡದಲ್ಲಿ ಕೆಟ್ಟ, ವ್ಯಂಗ್ಯ ಅರ್ಥಛಾಯೆ ಬಂದಿದೆ. 'ಚಟ್ನಿ' ಶಬ್ದ ಚಟನೀ, ಚಾಟಿಸು, ಚಾಟ್ ನೆಕ್ಕು ಎಂಬರ್ಥದ ಹಿಂದಿ ಶಬ್ದ ಮರಾಠಿಗೆ ಹೋಗಿ ಅಲ್ಲಿಂದ ಕನ್ನಡಕ್ಕೆ ಬಂದಿದೆ. ನಂಜಿಕೊಳ್ಳುವ ವ್ಯಂಜನ ಪದಾರ್ಥ ಎಂಬರ್ಥ ಕೊಡುತ್ತದೆ. ಚಪಾತಿ ಶಬ್ದದ ಮೂಲ ಸಂಸ್ಕೃತ ಚರ್ಪಟೀ>ಛಪ್ಪತಿ ಎಂದು ಪ್ರಾಕೃತದಲ್ಲಾಯಿತು. ಉತ್ತರ ಭಾರತದ ಭಾಷೆಗಳಲ್ಲಿ ರೂಢಿಯಲ್ಲಿದೆ. ಅಲ್ಲಿಂದ ಕನ್ನಡಕ್ಕೆ ಬಂದಿದೆ. ಅದು ಮೂಲತಃ ತುರ್ಕಿ ಭಾಷೆಯಿಂದ ಬಂದಿರಬೇಕು ಎಂದೂ ಅಭಿಪ್ರಾಯವಿದೆ. ಉತ್ತರ ಕರ್ನಾಟಕದಲ್ಲಿ ರೂಢಿಯಲ್ಲಿರುವ 'ಅಗದೀ' ಮರಾಠಿಯದು. ಅಗದೀಂ=ಪರಾಕಾಷ್ಠೆ ಅರ್ಥ ಹೇಳುತ್ತಾರೆ. ಮರಾಠಿಗೂ ಮೂಲ ತಿಳಿಯದು. ಕನ್ನಡದಲ್ಲಿ ಪೂರ್ಣ, ಹೆಚ್ಚಿನ ಅರ್ಥ ಕೊಡುತ್ತಿದೆ.

ಮರಾಠಿ ಪ್ರಭಾವ ಕನ್ನಡದ ಮೇಲೆ ಆಗಿರುವಂತೆ ಕನ್ನಡದ ಪ್ರಭಾವವೂ ಮರಾಠಿ ಮೇಲೆ ಆಗಿದೆ.

ಇದುವರೆಗೆ ಅನ್ಯಭಾಷಾ ಶಬ್ದಗಳು ಕನ್ನಡಕ್ಕೆ ಸೇರಿ ಕನ್ನಡ ಭಾಷೆಯ ಶಬ್ದ ಸಂಪತ್ತು ಬೆಳೆಯಲು ಕಾರಣವಾದುವು ಎಂಬುದನ್ನು ಗಮನಿಸಲಾಯಿತು. ಇವುಗಳಲ್ಲಿ ಹಲವು ಶಬ್ದಗಳು ಮೂಲ ತಿಳಿಯದಷ್ಟು, ದೇಶ್ಯವೆಂಬ ಭ್ರಮೆ ಮೂಡಿಸುವಷ್ಟು ಬದಲಾಗಿವೆ. ಈ ತದ್ಭವಗಳನ್ನು ನೋಡಿ : ಸಂತೆ, ಸುಣ್ಣ (<ಚೂರ್ಣ), ಬೀದಿ, ಗಂಟು (<ಗ್ರಂಥಿ), ಹರೆಯ, ಬೂದಿ, ಕರಗಸ (<ಕ್ರಕಚ), ಬೇಸಗೆ, ಕಂಬಳಿ (<ಕಂಬಲ), ಕಂಬ, ಗಾಜು (<ಕಾಚು), ಮಳಿಗೆ (<ಮಠಿಕಾ), ಹಣತೆ, ಬತ್ತಿ,

ಚಿತ್ರ, ಸುತ್ತಿಗೆ (ಸೂತ್ರಿಕಾ), ಊಂಚೆ, ಚಿಪ್ಪಿಗ (<ಶಿಲ್ಪಿಕ), ಪೊಟ್ಟಗೆ (ಸ್ಫೋಟಿಕ), ಮೆಣಸು (<ಮರೀಚ), ಜಗುಳಿ–ಜಗಳೆ (<ಜಘೂಕಾ), ಸಂಗಡ (<ಸಂಘಾತ), ಅಗೆ (<ಅಗ್ರೆ), ಹುಟ್ಟು, ಕಜ್ಜ (ಖರ್ಜುರ), ಕೊತ್ತುಂಬರಿ (<ಕುಸ್ತುಂಬುರು), ಸುಂಕ (ಶುಲ್ಕ) ಇತ್ಯಾದಿ.

## ೧೪. ಭಾಷೆಯ ಬೆಳವಣಿಗೆ: ದೇಶ್ಯ ಶಬ್ದಗಳು

ಪ್ರಪಂಚದ ಯಾವುದೇ ಭಾಷೆ ಅನ್ಯಭಾಷಾಸ್ವೀಕರಣವಿಲ್ಲದೆ ಸ್ವಮೂಲದಿಂದಲೆ ವೃದ್ಧಿಹೊಂದಿದ ಉದಾಹರಣೆ ಇಲ್ಲ. ದೇಶ್ಯವೆಂದರೆ ಒಂದು ಭಾಷೆಯ ಜನರಿಂದ ಕಲ್ಪಿತವಾದ ಶಬ್ದಗಳು, ಆ ಭಾಷೆಯ ಮೂಲಶಬ್ದಗಳು. ಮಕ್ಕಳ ಭಾಷೆಯ ವಿಷಯವನ್ನು ಹಿಂದೆ ಅಡಿಟಿಪ್ಪಣಿಯಲ್ಲಿ ಸೂಚಿಸಿದೆ. ಮಗು ಒಂದೊಂದೇ ಶಬ್ದದಿಂದ ಕರ್ತೃ, ಕರ್ಮ, ಕ್ರಿಯಾರ್ಥವನ್ನೆಲ್ಲಾ ಸಂದರ್ಭೋಚಿತವಾಗಿ ತಿಳಿಸುತ್ತದೆ. ಮಿಯಾವ್, ಕಾ, ಪಪ್ಪ, ಆತು ಇವು ಸಂದರ್ಭಕ್ಕೆ ತಕ್ಕಂತೆ ಬೇರೆಬೇರೆ ಅರ್ಥ ಕೊಡುತ್ತವೆ. ಒಂದು ಕಾಲಕ್ಕೆ ಆದಿಮಾನವನ ಭಾಷೆಯೂ ಹೀಗೇ ಇದ್ದಿರಬೇಕು. ಪ್ರಾರಂಭದಲ್ಲಿ ಜನ ಶಬ್ದವನ್ನು ಕಲ್ಪಿಸುತ್ತಾ ಹೋಗುತ್ತಾರೆ. ಒಂದು ಕಾಲಕ್ಕೆ ಹೊಸ ಶಬ್ದಗಳ ಕಲ್ಪನೆ ನಿಂತು, ಇರುವ ಶಬ್ದಗಳನ್ನೇ ಉಪಯೋಗಿಸಿಕೊಂಡು ಹೊಸ ಅರ್ಥ ಸೂಚಿಸುವ ಶಬ್ದಗಳನ್ನು ಸಾಧಿಸುತ್ತಾರೆ. ಈ ಬಗೆಯಲ್ಲಿ ಶಬ್ದಕೋಶವೂ ಬೆಳೆಯುತ್ತದೆ. ಮೂಲಶಬ್ದಗಳು ಪ್ರಕೃತಿಗಳು. ಅವುಗಳಿಗೆ ಪ್ರತ್ಯಯಗಳನ್ನು ಸೇರಿಸಿ ಮಾಡಿಕೊಂಡ ಶಬ್ದಗಳು ಸಾಧಿತಶಬ್ದಗಳು. ಅಲ್ಲದೆ, ಎರಡು ಮೂರು ಪ್ರಕೃತಿಶಬ್ದಗಳನ್ನು ಕೂಡಿಸಿ ಮಾಡಿದ ಸಮಸ್ತ ಅಥವಾ ಸಮಾಸ ಪದಗಳೂ ಇರುತ್ತವೆ. ಮುಖ್ಯವಾಗಿ ದೇಶ್ಯಶಬ್ದಗಳಲ್ಲಿ ಎರಡು ಬಗೆಯನ್ನು ಕಾಣಬಹುದು: ಮೂಲಶಬ್ದಗಳು ಅಥವಾ ಪ್ರಕೃತಿಗಳು ಮತ್ತು ನಿಷ್ಪನ್ನಶಬ್ದಗಳು (derivatives).

ಮೂಲಶಬ್ದಕ್ಕೆ ಪ್ರಕೃತಿ ಎನ್ನಲಾಗುತ್ತದೆ. ಅದು ನಾಮಪ್ರಕೃತಿಯಾಗಬಹುದು, ಕ್ರಿಯೆಯನ್ನು ಸೂಚಿಸುವ ಆಖ್ಯಾತಪ್ರಕೃತಿ ಅಥವಾ ಧಾತುವಾಗಿರಬಹುದು. ಮೊದಲು ವಸ್ತುಗಳಿಗೆ ಸಂಬಂಧಿಸಿದ ಶಬ್ದಗಳು ಕಲ್ಪಿತವಾಗುತ್ತವೆ. ಅನಂತರ ಕ್ರಿಯೆಯನ್ನು ಸೂಚಿಸುವ ಶಬ್ದಗಳು. ಏಕೆಂದರೆ ಪುನಃ ಮಗುವಿನ ದೃಷ್ಟಾಂತ ಗಮನಿಸಿದರೆ, ವಸ್ತುವಾಚಕ ಶಬ್ದಗಳಿಂದಲೇ ಅದು ಕ್ರಿಯೆಯನ್ನೂ ಸೂಚಿಸುತ್ತದೆ. ಮಾನವ ಭಾಷೆಯಲ್ಲೂ ಹೀಗೆ ಆಗಿದ್ದಿರಬಹುದು. ಪಣ್ ಶಬ್ದ ವಸ್ತುವಾಚಕ. ಪಣ್ಣಾದುದು, ಹಣ್ಣಾದುದು ಎಂದಾಗ ಧಾತುವಿನ ಅರ್ಥವೂ ಬರುತ್ತದೆ. ಪಣ್ ಎಂಬುದರಲ್ಲೇ ಹಣ್ಣಾಗುವ ಕ್ರಿಯೆಯೂ ಮೊದಲು ಸೂಚಿತವಾಗುತ್ತಿದ್ದಿರಬೇಕು. ಅನಂತರ ಪಣ್ಣಾಗು ಶಬ್ದದ ಕಲ್ಪನೆ. ಹೀಗೇ ಕಾಯ್, ಬಿತ್ತ-ಬಿತ್ತು, ಮಿಂಚು. ಉಗಿ ಧಾತು. ಉಗುಳ್ ವಸ್ತುವಾಚಕ ಮೊದಲು ಉಗಿ ಎಂಬುದೇ ವಸ್ತುವಾಚಕವೂ ಆಗಿದ್ದಿರಬೇಕು. ಆ ಅರ್ಥ ಮರೆಯಾದಾಗ ಉಗುಳ್ ಶಬ್ದ ಸಾಧಿತವಾಗುತ್ತದೆ. ಕನ್ನಡ ಭಾಷೆಯ ಹಲವು ಶಬ್ದಗಳು ಏಕಾಕ್ಷರ ಶಬ್ದಗಳಾಗಿವೆ. ಒಂದು ಸ್ವರ ಒಂದು ವ್ಯಂಜನದಿಂದ ಕೂಡಿದುವು. ಕೇಶಿರಾಜನ ಶಬ್ದಮಣಿದರ್ಪಣದಲ್ಲಿ ಇಂತಹ ಕೆಲವಾದರೂ ಉದಾಹರಣೆ ಸಿಗುತ್ತವೆ.

ಈ, ಓ, ಕಾ, ಕೇ, ತೇ, ನೋ, ಪೂ, ಬಾ, ಮೀ ಇತ್ಯಾದಿ. ತಾ, ಬಾ, ಪೋ, ಸಾ (ಸಾಯ್) ಕ್ರಿಯೆಯನ್ನು ಸೂಚಿಸುತ್ತವೆ. ಪ್ರ. ಗೋ. ಕುಲಕರಣಿಯವರು ಇಂತಹ ೬೦ ಬೀಜಶಬ್ದಗಳು ಅಚ್ಚಗನ್ನಡದಲ್ಲಿವೆ ಎನ್ನುತ್ತಾರೆ. ಮುಂದೆ ಅವೇ ತರ್, ಬರ್, ಪೋಗು, ಸಾಯ್ ಆದುವು. ಹಾಗೇ ಯಕಾರಾಂತ ಧಾತುಗಳೂ ಇವೆ. ಉಯ್, ಕಾಯ್, ಗೆಯ್, ನೆಯ್, ಪಾಯ್, ಪೊಯ್ ಇತ್ಯಾದಿ. ನಾಂತ ಶಬ್ದಗಳೂ ಇವೆ. ಆನ್, ಈನ್, ಎನ್, ತಿನ್, ನೋನ್, ಬಾನ್, ಸೀನ್ ಇತ್ಯಾದಿ. ಎರಡಕ್ಷರದ ಶಬ್ದಗಳು ಧಾತುಗಳಾಗಿ ರೂಢಿಯಲ್ಲಿದ್ದುವು. ನಿಲ್, ನುಡಿ, ತೆಱಿ, ನೊಳೆ ಇತ್ಯಾದಿ. ಮೂರಕ್ಷರದವು ಅನಂತರ ಬಂದುವಾಗಿವೆ. ಹೀಗೆ ಭಾಷೆಯ ಮೂಲಶಬ್ದಗಳು ಬೆಳೆಯುತ್ತವೆ.

ಮೂಲಶಬ್ದಗಳಿಗೆ ಕು, ಗು, ಟು, ಚು, ತು, ದು, ಪು, ಬು, ವು, ಸು ಗಳು ಸೇರಿ ಸ್ವರಾಂತ ಅನೇಕಾಕ್ಷರಶಬ್ದಗಳು ಸಾಧಿತವಾಗುತ್ತವೆ. ತಾಂಗು, ಮಿಂಚು, ದಾಂಟು, ಹಿಂದು, ಮುಂದು ಇತ್ಯಾದಿ. ಬೆಳ್, ಪೊಸ ನಾಮಪ್ರಕೃತಿಗಳು. ಇವಕ್ಕೆ ದು, ತು ಸೇರಿ ಬೆಳ್ದು, ಪೊಸತು ರೂಪಗಳಾದುವು. 'ಪಾ' ಅಂದರೆ ವಿಸ್ತರಿಸು. ಅದಕ್ಕೆ 'ಸು' ಸೇರಿ ಪಾಸು–ಹಾಸು ಆಗುತ್ತದೆ. ಅದಕ್ಕೆ ಮತ್ತೆ ಗೆ ಪ್ರತ್ಯಯ ಸೇರಿದಾಗ ಹಾಸುಗೆ ಆಗುತ್ತದೆ. ನೆಯ್ಗೆಯ ಉದ್ದನೂಲಿಗೂ ಹಾಸು ಶಬ್ದವಿದೆ. ಅದರ ಉಪಕರಣಕ್ಕೂ ಹಾಸು ಶಬ್ದದ ಬಳಕೆಯಿದೆ. ಹಾಸುಹೊಕ್ಕು ಶಬ್ದ ಅನಂತರ ಕಲ್ಪಿತವಾಗುತ್ತದೆ. ಓ ಅಂದರೆ ಪ್ರೀತಿ. ಓಪ, ಪ್ರೀತಿಸುವವನು, ಪ್ರಿಯ, ಗಂಡ. ಓಪಳು, ಪ್ರಿಯಳು, ಹೆಂಡತಿ. ಹೀಗೆ ಶಬ್ದಗಳಿಗೆ ಅರ್ಥ ವಿಸ್ತರಿಸುತ್ತದೆ. ಕ–ಗ ವ್ಯತ್ಯಾಸದಿಂದ ಬೇರೆ ಬೇರೆ ಅರ್ಥದ ಶಬ್ದಗಳನ್ನು ರೂಢಿಸಿ ಕೊಂಡುದನ್ನೂ ಗಮನಿಸಬಹುದು. ಕಣಿಕೆ–ಗಣಿಕೆ, ಕೂಡಿಸು–ಗೂಡಿಸು (ಗುಡಿಸು), ಕೊನೆ ಗೊನೆ, ತಣಿ–ದಣಿ, ತುಡುಕು–ದುಡುಕು ಇತ್ಯಾದಿ. ಹಾಗೇ ಪ–ಬ ವ್ಯತ್ಯಾಸದ ಶಬ್ದಗಳು. ಕೇ ಎಂಬ ಮೂಲಶಬ್ದದಿಂದ ಕೆತ್ತು, ಕೆದುಕು, ಕೆದಱು, ಚೆದಱು ಶಬ್ದಗಳಾಗಿವೆ. ಮೀ > ಮಿನ್ ನಿಂದ ಮಿಂಚು, ಮಿಣುಕು, ಮೀನು ಶಬ್ದಗಳಾಗಿವೆ. ಇನ್ನೊಂದು ಉದಾಹರಣೆ. 'ತಾ' ಧಾತು ಸ್ಪರ್ಶವನ್ನು ಸೂಚಿಸು ತ್ತದೆ. ಅದರಿಂದ ಎಷ್ಟು ಬಗೆಯ ಶಬ್ದಗಳು ರೂಪುಗೊಳ್ಳುತ್ತವೆ ಎಂಬುದನ್ನು ಗಮನಿಸಬಹುದು. ತಾ, ತರು, ತಟ್ಟು, ತಾಗು, ತಾಟು, ತಟ್ಟೆ, ತನೆ, ತಡಿಕೆ, ತಗುಲು, ತಪಕು, ತಡಕು, ತಲುಪು, ತಳ್ಳು, ತಳಿಸು, ತಳಿ, ತಟ್ಕೆ, ತಕ್ಕೈಸು, ತಬ್ಬು, ತಱುಬು, ತಱು, ತನಕ ಇತ್ಯಾದಿ. ಬಹುಶಃ ಏಕಾಕ್ಷರ ಮೂಲಶಬ್ದದಿಂದ ದೇಶ್ಯಶಬ್ದಗಳು ಬೆಳೆಯುವ, ವೃದ್ಧಿಸುವ ಬಗೆಯನ್ನು ಈ ಉದಾಹರಣೆ ಸ್ಪಷ್ಟ ಪಡಿಸುತ್ತದೆ.

ವಳ, ಕಾಱಿ, ಕುಟಿಗ ಮುಂತಾದ ಪ್ರತ್ಯಯಗಳು ಸೇರಿ ಪಡೆವಳ, ಕೈದುಕಾಱಿ, ಕಲ್ಕುಟಿಗ ಶಬ್ದಗಳು ರೂಪಿತವಾಗುತ್ತವೆ. ಧಾತುಗಳಿಗೆ ಇಸು, ಚು, ವು

ಪ್ರತ್ಯಯಗಳು ಸೇರಿ ಮಾಡಿಸು, ನೆಗಲ್ಚು, ತಿಳಿವು ಇತ್ಯಾದಿ ಶಬ್ದಗಳು ರೂಢಿಸುತ್ತವೆ. ಕರಿಯ, ಬಿಳಿಯ, ಹೊಸಬ ಇವುಗಳ ಮೂಲ ಕರ್, ಬೆಳ್, ಪೊಸ. ಈಗ ಇವನ್ನು ಆದೇಶವೆಂದರೂ ಒಂದು ಕಾಲಕ್ಕೆ ಇವು ಸ್ವತಂತ್ರವಾಗಿದ್ದು ಗುಣ ಪ್ರಕೃತಿಗಳಾಗಿ ಬಳಕೆಯಾಗುತ್ತಿದ್ದಿರಬೇಕು. ಹಾಗೇ ಸಂಖ್ಯಾ ಪ್ರಕೃತಿಗಳು. ಒರ್, ಇರ್ ಇತ್ಯಾದಿ. ಅವುಗಳಿಂದ ಒಂದು, ಎರಡು; ಒಂದನೆಯ, ಎರಡನೆಯ ಇತ್ಯಾದಿ ಶಬ್ದಗಳು ಸಾಧಿತವಾಗುತ್ತವೆ.

ನಿಷ್ಪನ್ನ ಶಬ್ದಗಳಲ್ಲಿ ಕೆಲವು ಬಗೆ ಇವೆ. ಧಾತುಗಳ ಮೇಲೆ ಸೇರುವ ಪ್ರತ್ಯಯಗಳಿಗೆ ಕೃತ್ ಪ್ರತ್ಯಯಗಳೆಂದೂ, ಹಾಗೆ ಸಾಧಿತವಾದ ಶಬ್ದಗಳಿಗೆ ಕೃದಂತಗಳೆಂದೂ ಹೆಸರು. ಕೃದಂತಗಳಲ್ಲಿ ಕೃದಂತ ವಿಶೇಷಣ, ಕೃದಂತ ಭಾವನಾಮ ಎಂದು ಎರಡು ಬಗೆ. ನುಡಿ+ದ=ನುಡಿದ, ಮಾಡಿದ (ನುಡಿದವನು, ಮಾಡಿದವನು ಎಂಬರ್ಥದಲ್ಲಿ), ಗೆಲ್–ಗೆಲ್ಲ, ಬಳೆ–ಬಳವಿ, ತಿನ್–ತಿನಿಸು, ಕಾಣ್–ಕಾಣ್ಕೆ, ಬಯ್–ಬಯ್ಗುಳ್, ಆಡು–ಆಟ, ಕುಣಿ–ಕುಣಿತ, ಒಲ್–ಒಲ್ಮೆ, ಸಾ–ಸಾವು, ಪಸಿ–ಪಸಿವು ಇವೆಲ್ಲ ಕೃದಂತ ಭಾವನಾಮಗಳು. ಇವು ಹೆಚ್ಚು. ತದ್ಧಿತ ಪ್ರತ್ಯಯಗಳನ್ನು ಸೇರಿಸಿ ಹಾವಾಡಿಗ, ಹೂವಾಡಿಗ, ಮೂಡಣ, ಕೆಳಗಣ, ಎರಡನೆಯ, ಮೂರನೆಯ, ಕನ್ನಡಿಗ, ಹೆಣ್ಣಿಗ, ಬಳೆಗಾರ, ಹಣವಂತ ಇತ್ಯಾದಿ ತದ್ಧಿತಾಂತ ವಿಶೇಷಣಗಳನ್ನು ಸಾಧಿಸಲಾಗುತ್ತದೆ. ಹೆಣ್ತನ, ಒಲ್ಮೆ, ಹೆಮ್ಮೆ ತದ್ಧಿತಾಂತ ಭಾವನಾಮಗಳು.

ಎರಡು ಪ್ರಕೃತಿಗಳು ಸೇರಿ ಆಗುವ ಶಬ್ದ ಸಮುಚ್ಚಯ ಸಮಾಸಗಳು ಅಥವಾ ಸಮಸ್ತ ಪದಗಳು. ಬೆಳ್+ತಿಂಗಳ್=ಬೆಳ್ದಿಂಗಳ್, ನಿಟ್ಟುಸಿರು, ಕೆಂದಾವರೆ, ಮುಕ್ಕಣ್ಣ ಇತ್ಯಾದಿ.

ಕನ್ನಡ ದ್ರಾವಿಡ ಭಾಷಾವರ್ಗಕ್ಕೆ ಸೇರಿರುವ ಭಾಷೆಯಾದ ಕಾರಣ ತಮಿಳು, ತೆಲುಗು, ಮಲೆಯಾಳಂಗಳೊಡನೆ ಸಾಮಾನ್ಯ ಮೂಲಶಬ್ದಗಳನ್ನು ಒಳಗೊಂಡಿದೆ. ಕನ್ನಡ–ತಮಿಳಿಗೆ ಸಾಮ್ಯವಿರುವ ಶಬ್ದಗಳು ಹೆಚ್ಚು. ಉದಾ : ಕೂಟ್, ತೆಂಗು, ತೊಟ್ಟಿಲ್, ತಳಿರ್, ನಾಣ್, ಪುೞು (ಹುಳು), ಕದಿರ್, ಪಡಗು, ನಂಜು, ಪಳ್ಳಿ, ಅಣ್ಣನ್, ಮೆಯ್, ತಾಯ್, ತೇರ್, ಮುಡಿ, ಕಾಡು, ಮಣ್, ಕಣ್, ಪುಳಿ, ಕೇಡು, ಪೆಣ್, ಪುಲ್, ಪೂ, ಮುಗಿಲ್, ನೀರ್, ಕರಡಿ, ಅಂಗೈ, ಪಗಲ್, ಇರುಳ್, ಕಿಚ್ಚು, ನಚ್ಚು, ಪಡಿ, ಪಿಡಿ, ಪಣ, ಕೊಂಬು, ಚೆಂಬು, ಕರುಳ್, ಕುರುಳ್, ಮರುಳ್, ಅಱಿವು, ಮಾಡ ಇತ್ಯಾದಿ. ಬದಲಾವಣೆ ಹೊಂದಿರುವ ಶಬ್ದಗಳು ಅಸಂಖ್ಯಾತ. ಉದಾ : ಕೊಕ್ಕು (ತ)–ಕುಕ್ಕು (ಕ), ಶೊಲ್–ಸೊಲ್, ವಿಳಕ್ಕು–ಬೆಳಕು, ತಿನ್ರಿ–ತಿಂಡಿ, ಕಣ್ಣಾಡಿ–ಕನ್ನಡಿ, ವಾನ್–ಬಾನ್, ಇಡಟ್–ಎಸಟ್, ಪಯಿಱು–ಬಸಿರು, ಕುದಿರೈ–ಕುದುರೆ, ಮಯಿಲ್–ನವಿಲ್, ಪುನ್ನೈ–ಹೊನ್ನೆ ಇತ್ಯಾದಿ.

ಕನ್ನಡ ಮತ್ತು ತೆಲುಗುಗಳಿಗೆ ಸಾಮಾನ್ಯವಾದ ಶಬ್ದಗಳೂ ಇವೆ. ಉದಾ: ದಾಳಿ, ಸಂದಿ, ನಂಟು, ಅಂಚು, ಅಂಬಲಿ, ದೋಸೆ, ತವುಡು, ಕೋತಿ, ಅಪ್ಪಟ, ದಾರ, ದಪ್ಪ, ನೆಮ್ಮದಿ ಇತ್ಯಾದಿ. ಕನ್ನಡ–ತೆಲುಗುಗಳಲ್ಲಿ ಕೊಂಚ ಬದಲಾವಣೆ ಹೊಂದಿರುವ ಶಬ್ದಗಳು ಬಹಳ ಇವೆ. ದೊಣೆ(ಕ)–ದೊನ(ತೆ), ತೆವುಲು–ತೆಗುಲು, ಅಂದುಗೆ–ಅಂದಿಯ, ಬಿದಿರ್–ವೆದಿರು, ತಡಿಕೆ–ತಡಕ, ತಂಬಿಗೆ–ತಂಬುಗ, ತುದಿ–ತುದ, ಕುತ್ತಿಗೆ–ಕುತ್ತಿಕ ಇತ್ಯಾದಿ.

ಕನ್ನಡ–ತಮಿಳು–ತೆಲುಗು ಮೂರೂ ಭಾಷೆಗಳಿಗೆ ಸಾಮಾನ್ಯವಾದ ಶಬ್ದಗಳೂ ಇವೆ. ಅಚ್ಚು, ಅತ್ತಿ, ಅಂಬು, ಉಪ್ಪು, ಕತ್ತಿ, ಕುಚ್ಚು, ಗಂಜಿ, ಚಟ್ಟಂ, ತೆಪ್ಪಂ, ತಗಡು, ತೀರ್ಪು, ತೊಟ್ಟಿ, ದಂಡು, ದಿಡ್ಡಿ, ನಾಡು, ಪಟ್ಟಿ, ಬೊಟ್ಟು, ಮೂದೇವಿ ಇತ್ಯಾದಿ. ದ್ರಾವಿಡ ಶಬ್ದಗಳು ಈ ಮೂರೂ ಭಾಷೆಗಳಲ್ಲಿ ವ್ಯತ್ಯಾಸ ಹೊಂದುವಾಗ, ಧ್ವನಿವ್ಯತ್ಯಾಸಗಳು ಕೆಲವೊಂದು ನಿಯಮಗಳ ಅನುಸಾರ ಬದಲಾಗುವುದನ್ನು ಗಮನಿಸಬಹುದು. ಇಲ್ಲಿ ಹೆಚ್ಚಿನ ವಿವರಗಳಿಗೆ ಹೋಗದೆ ಕೆಲವು ಉದಾಹರಣೆಗಳನ್ನು ಮಾತ್ರ ನೀಡಿದೆ:

| ತಮಿಳು | ಕನ್ನಡ | ತೆಲುಗು |
|---|---|---|
| ಶಿಱೈ | ಸೆರೆ | ಚೆರ |
| ಯಾನೈ | ಆನೆ | ಏನುಗ |
| ತಿರೈ | ತೆರೆ | ತೆರ |
| ಉರಲ್ | ಒರಲ್ | ರೋಲು |
| ಕಿಳಿ | ಗಿಳಿ | ಚಿಲುಕ |
| ತಂಬಿ | ತಮ್ಮ | ತಮ್ಮುಡ |
| ಉಡಲ್ | ಒಡಲ್ | ಒಡಲು |
| ಕೈ | ಕಯ್ | ಚೇಯಿ ಇತ್ಯಾದಿ. |

ಇವುಗಳಲ್ಲಿ ಶ > ಸ > ಚ, ಯಾ > ಆ > ಏ, ಕ > ಗ > ಚ, ಉ > ಒ > ಒ ಧ್ವನಿ ವ್ಯತ್ಯಾಸಗಳು ಸ್ವರಗಳ ಪರಿಸರದ ಆಧಾರದ ಮೇಲೆ ಆಗುವುದನ್ನು ಗಮನಿಸಬಹುದು. ದ್ರಾವಿಡ ಭಾಷೆಗಳಲ್ಲಿ ಸುಮಾರು ೫೦೦೦ ದೇಶ್ಯಶಬ್ದಗಳುಂಟೆಂದು ಪ್ರೊ|| ಎಂ. ಮರಿಯಪ್ಪಭಟ್ಟರು ಹೇಳುತ್ತಾರೆ. ಅವರು ಕನ್ನಡಿಗರ ಸಂಸ್ಕೃತಿಯ ಪರಿಚಯವನ್ನು ದೇಶ್ಯಶಬ್ದಗಳ ಮೂಲಕವೇ ಮಾಡಿಕೊಡುತ್ತಾರೆ.

ಕೆಲವು ಶಬ್ದಗಳ ವಿವರಣೆ: ಮಾಱು–ಮಾರಾಟ ಅಂದರೆ ಅದಲು ಬದಲು, ವಿನಿಮಯ ಎಂದರ್ಥ. ಪೆರ್ಗಡೆ > ಹೆಗ್ಗಡೆಯ 'ಗಡೆ'ಗೆ ದಂಡಧಾರಿ, ಅಧಿಕಾರಿ ಅರ್ಥವಿದ್ದಿರಬೇಕು, ಪೆರ್ > ಪಿರಿಯ, ಹಿರಿಯ. ಉಕ್ಕು ಕನ್ನಡ ಶಬ್ದ ಇಂಗ್ಲಿಷಿಗೆ

ಹೋಗಿ wootz, wook ಆಗಿದ್ದಿರಬೇಕು, ಎಂಬ ಊಹೆ ಇದೆ. ಹೆಗ್ಗಣ < ಪೆಗ್ಗಣ ಹಳಗನ್ನಡದಿಂದ ಆಗಿದೆ. ಪೆರ್ - ದೊಡ್ಡ ಅರ್ಥ; ಆದರೆ ಗಣ ಸಂಸ್ಕೃತ ಗಣ ಅಲ್ಲ ಕನ್ನಡ ಗಣಿ, ಕಣಿ ತೋಡುವುದು ಅರ್ಥದಿಂದ ಬಂದಿರಬೇಕು. ತಮಿಳು, ತೆಲುಗುಗಳಲ್ಲಿ ಬೇರೆ ಶಬ್ದಗಳಿವೆ.

## ೧೫. ವ್ಯಾಕರಣಾಂಶಗಳು: ನಾಮಪದ

ಪ್ರಾಚೀನ ವೈಯಾಕರಣರಿಗೆ ಕನ್ನಡ ಸಂಸ್ಕೃತಜನ್ಯ ಎಂಬ ಭಾವನೆ ಇತ್ತು. ಆದ್ದರಿಂದ ಅವರು ಸಂಸ್ಕೃತ ವ್ಯಾಕರಣವನ್ನು ಅನುಸರಿಸಿ ಕನ್ನಡ ಭಾಷೆಯ ವ್ಯಾಕರಣವನ್ನು ವಿವರಿಸುತ್ತಿದ್ದರು. ಕನ್ನಡ ದ್ರಾವಿಡ ಭಾಷಾವರ್ಗಕ್ಕೆ ಸೇರಿದ, ಭಿನ್ನವಾದ ವ್ಯಾಕರಣಾಂಶಗಳನ್ನು ಒಳಗೊಂಡ ಭಾಷೆಯೆಂಬುದು ಸ್ಥಾಪಿತವಾಗಿದೆ. ವ್ಯಾಕರಣ ವಿಷಯದಲ್ಲಿ ಕಂಡುಬರುವ ವಿಶೇಷ ಲಕ್ಷಣಗಳನ್ನು ಮುಂದೆ ವಿವೇಚಿಸಲಾಗಿದೆ.

ಸಂಸ್ಕೃತದಲ್ಲಿ ನಾಮಪದಗಳನ್ನು ಎರಡು ವಿಭಾಗ ಮಾಡುತ್ತಾರೆ. (೧) ಪ್ರಾತಿಪದಿಕ ಅಥವಾ ಇನ್ನೂ ವಿಭಕ್ತಿ ಪ್ರತ್ಯಯಗಳನ್ನು ಪಡೆಯದ, ಇನ್ನೂ ವ್ಯತ್ಯಾಸ ಹೊಂದದಿರುವ ಮೂಲ ಶಬ್ದಗಳು. (೨) ಪ್ರತ್ಯಯಗಳು. ಸಂಸ್ಕೃತ ದೃಷ್ಟಿಯಿಂದ ಅದು ಸರಿ. ಏಕೆಂದರೆ ಎಲ್ಲ ನಾಮವಾಚಕಗಳನ್ನು ಒಂದಲ್ಲ ಒಂದು ಧಾತುವಿನಿಂದ ಬಂದಂತೆ ವಿವರಿಸಲಾಗುತ್ತವೆ. ಮತ್ತು ನಾಮವಾಚಕಗಳು ಸಲಿಂಗಿಗಳಾಗಿರುತ್ತವೆ. ಅಂದರೆ ಒಂದಲ್ಲ ಒಂದು ಲಿಂಗಕ್ಕೆ ಸೇರಿರುತ್ತವೆ. ಆದ್ದರಿಂದ ನೇರವಾಗಿ ವಿಭಕ್ತಿ ಪ್ರತ್ಯಯಗಳು ಹತ್ತುತ್ತವೆ. ದ್ರಾವಿಡ ಭಾಷೆಗಳಲ್ಲಿ ನಾಮಪದಗಳು ಅನೇಕ ಸ್ವತಂತ್ರವಾದ ಮೂಲಗಳಿಂದ ಬಂದಿವೆ. ಹಲವು ವೇಳೆ ನಾಮವಾಚಿಗಳು, ಕ್ರಿಯಾವಾಚಿಗಳೂ ಆಗಿರುವುದುಂಟು. ಉದಾ: ನುಡಿ, ಮರೆ, ಹೊಡೆ, ಬೆಳೆ, ಗೀರು ಇತ್ಯಾದಿ. ಕನ್ನಡದಲ್ಲಿ ನಾಮವಾಚಕಗಳು ಅಲಿಂಗಿಗಳು ಆದ್ದರಿಂದ ಪ್ರಕೃತಿ ಅಥವಾ ಮೂಲಶಬ್ದಗಳ ಮೇಲೆ ಲಿಂಗವಚನ ಪ್ರತ್ಯಯಗಳು ಮೊದಲು ಸೇರಿ ಅನಂತರ ವಿಭಕ್ತಿಪ್ರತ್ಯಯಗಳು ಹತ್ತುತ್ತವೆ. ಅಂದರೆ ಕನ್ನಡದಲ್ಲಿ ವಿಭಕ್ತಿಪ್ರತ್ಯಯ ನೇರವಾಗಿ ನಾಮವಾಚಕಕ್ಕೆ ಸೇರುವುದಿಲ್ಲ. ಆ ಕಾರಣ ಕನ್ನಡದಲ್ಲಿ ನಾಮಪದಗಳು ಮೂರು ವಿಭಾಗವಾಗುತ್ತವೆ. (೧) ಪ್ರಾತಿಪದಿಕ ಅಥವಾ ಮೂಲಶಬ್ದ. (೨) ಲಿಂಗವಚನ ಪ್ರತ್ಯಯ. (೩) ವಿಭಕ್ತಿ ಪ್ರತ್ಯಯ. ಸಂಸ್ಕೃತ ವ್ಯಾಕರಣ ಅನುಸರಿಸಿದ ಕಾರಣ ಪ್ರಾಚೀನ ವೈಯಾಕರಣರು ಲಿಂಗವಚನ ಪ್ರತ್ಯಯಗಳನ್ನು ಆಗಮಗಳೆಂದು ಕರೆದರು.

ಕೇಶಿರಾಜ 'ಲಿಂಗ' ಶಬ್ದವನ್ನು ಎರಡು ಅರ್ಥದಲ್ಲಿ ಪ್ರಯೋಗಿಸಿದ್ದಾನೆ. ಒಂದು, ನಾಮವಿಭಕ್ತಿಪ್ರತ್ಯಯಗಳನ್ನು ಪಡೆಯಲು ಯೋಗ್ಯವಾದ ಪ್ರಾತಿಪದಿಕ ಎಂಬರ್ಥ. ಕ್ರಿಯೆಯನ್ನು ನುಡಿಯದುದು, ವಿಭಕ್ತಿ ಇಲ್ಲದುದು, ಅರ್ಥ ಉಳ್ಳುದು ಲಿಂಗ(=ಪ್ರಾತಿಪದಿಕ) ಎಂದಿದ್ದಾನೆ ಇದರಲ್ಲಿ ಚತುರ್ಭೇದ: ಕೃಲ್ಲಿಂಗ, ತದ್ಧಿತಲಿಂಗ, ಸಮಾಸಲಿಂಗ, ನಾಮಲಿಂಗ. ಇಲ್ಲಿ ಹೇಳಿರುವ ನಾಮಲಿಂಗವೇ ನಾಮಪದ. ಎರಡು, ಲಿಂಗ ಎಂದರೆ gender ಎಂಬರ್ಥದಲ್ಲಿ ಪುಂ, ಸ್ತ್ರೀ, ನಪ್ ಇತ್ಯಾದಿ ೯ ಬಗೆ ಹೇಳುತ್ತಾನೆ.

ನಾಮಪದ ಹೆಸರನ್ನು ಹೇಳುವ ಶಬ್ದಗಳು, ವ್ಯಕ್ತಿ, ಸ್ಥಳ, ಪ್ರಾಣಿ, ವಸ್ತುಗಳನ್ನು ಸೂಚಿಸುವ ಶಬ್ದಗಳು. ಕನ್ನಡದಲ್ಲಿ ಪ್ರಾತಿಪದಿಕಗಳಿಗೆ ಸೇರುವ ಲಿಂಗ ವಚನಗಳನ್ನು ಒಂದೇ ಪ್ರತ್ಯಯ ಸೂಚಿಸುತ್ತದೆ. ಎರಡಕ್ಕೂ ಬೇರೆ ಬೇರೆ ಪ್ರತ್ಯಯಗಳಿಲ್ಲ. ಆದ್ದರಿಂದ ಕನ್ನಡದಲ್ಲಿ ಲಿಂಗ ವಚನಗಳು ಒಟ್ಟಿಗೆ ಬರುತ್ತವೆ.

**ಲಿಂಗ:** ಕೇಶಿರಾಜ 'ಲಿಂಗಮೊಂಬತ್ತು ತೆಱಂ' ಎಂದು ಹೇಳಿದ್ದಾನೆ. ನಾಮಪದಗಳ ಸ್ವರೂಪವನ್ನು ವಿಭಜಿಸಿ ಯಾವ ವರ್ಗಕ್ಕೆ ಸೇರುತ್ತವೆ ಎಂಬುದನ್ನು ಲಿಂಗವು ನಿರ್ಧರಿಸುತ್ತದೆ. ಪ್ರಪಂಚದ ಕೆಲವು ಭಾಷೆಗಳಲ್ಲಿ ಲಿಂಗವ್ಯವಸ್ಥೆಯೇ ಇಲ್ಲ. ಉದಾ : ಚೀನೀ ಭಾಷೆ. ಮತ್ತೆ ಕೆಲವು ಭಾಷೆಗಳಲ್ಲಿ ಎರಡು ಅಥವಾ ಮೂರು ಲಿಂಗಗಳ ವಿಂಗಡಣೆ ಇರುತ್ತದೆ. ಬೇರೆ ಬೇರೆ ಭಾಷೆಗಳಲ್ಲಿ ಲಿಂಗವ್ಯವಸ್ಥೆ ಬೇರೆ ಬೇರೆ ಕಾರಣ, ದೃಷ್ಟಿಯಿಂದ ಆಗಿರುತ್ತವೆ. ಕೆಲವು ಭಾಷೆಗಳಲ್ಲಿ ಸಜೀವ ವರ್ಗ, ನಿರ್ಜೀವ ವರ್ಗ ಎಂಬ ಆಧಾರದಮೇಲೆ ಆಗುತ್ತವೆ. ಉದಾ : ಬಂಗಾಲಿ ಭಾಷೆ. ಇನ್ನು ಕೆಲವು ಭಾಷೆಗಳಲ್ಲಿ ಮಹತ್ ಅಮಹತ್ ಆಧಾರದಮೇಲೆ, ಸಂಸ್ಕೃತದಂತಹ ಭಾಷೆಗಳಲ್ಲಿ ಶಬ್ದದ ಸ್ವರೂಪದ ಆಧಾರದ ಮೇಲೆ ಲಿಂಗಗಳನ್ನು ವಿಂಗಡಿಸಲಾಗುತ್ತದೆ. ರಷ್ಯನ್ ಭಾಷೆಯಲ್ಲಿ ವ್ಯಂಜನಾಂತ ಶಬ್ದಗಳು ಪುಲ್ಲಿಂಗ, 'ಅ'ಕಾರಾಂತ ಪದಗಳು ಸ್ತ್ರೀಲಿಂಗ, 'ಒ'ಕಾರಾಂತ ಪದಗಳು ನಪುಂಸಕ ಲಿಂಗ. ಹಿಂದಿಯಲ್ಲಿ ಎರಡೇ ಲಿಂಗಗಳು. ಗಂಡಸರ ಮೀಸೆ–ಮುಚ್ಛೇ–ಸ್ತ್ರೀಲಿಂಗ. ಏಕೆಂದರೆ ಈಕಾರಾಂತ ಶಬ್ದಗಳು ಸಾಮಾನ್ಯವಾಗಿ ಸ್ತ್ರೀಲಿಂಗ. ಸಂಸ್ಕೃತದಲ್ಲಿ ಶಬ್ದಸ್ವರೂಪದ ಮೇಲೆ ಲಿಂಗಭೇದ. ಅರ್ಥದ ಆಧಾರದಮೇಲಲ್ಲ. ಉದಾಹರಣೆಗೆ, ಹೆಂಡತಿ ಅರ್ಥಕೊಡುವ ಶಬ್ದಗಳಾದ ದಾರಾ : (ಪುಲ್ಲಿಂಗ). ಪತ್ನೀ (ಸ್ತ್ರೀಲಿಂಗ), ಕಲತ್ರ (ನಪುಂಸಕ) ಹೀಗೆ ಬೇರೆ ಬೇರೆ ಲಿಂಗಗಳಿಗೆ ಸೇರುತ್ತವೆ. ಕೆಲವು ಶಬ್ದಗಳು ಎರಡು ಲಿಂಗಗಳಿಗೆ ಸೇರುವುದುಂಟು. ಗೋ, ಮಣಿ, ಮೃತ್ಯು, ಸಿಂಧು ಮುಂತಾದುವು ಪುಲ್ಲಿಂಗ, ಸ್ತ್ರೀಲಿಂಗ ಎರಡರಲ್ಲೂ ಬಂದರೆ, ಘೃತ, ಭೂತ, ಶೃಂಗ ಪುಲ್ಲಿಂಗ ನಪುಂಸಕ ಎರಡಕ್ಕೂ ಸೇರುತ್ತವೆ. ಹೀಗಿರುವುದರಿಂದಲೇ ಕೇಶಿರಾಜ ಸಂಸ್ಕೃತವನ್ನನುಸರಿಸಿ ೯ ಬಗೆ ಲಿಂಗಗಳಿವೆ ಎಂದಿರುವುದು. ಕನ್ನಡದ ಸ್ಥಿತಿ ಹೀಗಿಲ್ಲ, ಗೊಂದಲವೇ ಇಲ್ಲ. ಪುರುಷರು ಪುಲ್ಲಿಂಗ, ಸ್ತ್ರೀಯರು ಸ್ತ್ರೀಲಿಂಗ, ಉಳಿದುವೆಲ್ಲ ನಪುಂಸಕ ಲಿಂಗ ಎನ್ನುತ್ತಾನೆ ಕೇಶಿರಾಜ.

ದ್ರಾವಿಡ ಭಾಷೆಗಳಲ್ಲಿ ಅರ್ಥದಿಂದ ಲಿಂಗನಿರ್ಣಯ ಎಂಬುದು, ಕೇಶಿರಾಜ ಹೇಳಿರುವಂತೆ, ಸ್ವಲ್ಪಮಟ್ಟಿಗೆ ನಿಜ. ಆದರೆ ವಾಸ್ತವವಾಗಿ ಲಿಂಗವಿವಕ್ಷೆ ಬುದ್ಧಿಶಕ್ತಿಯುಳ್ಳದ್ದೇ ಅಲ್ಲವೇ, ಅಂದರೆ rational, irrational, ಎಂಬುದರ ಆಧಾರದ ಮೇಲೆ ಆಗುತ್ತದೆ. ಶಬ್ದಗಳನ್ನು ಮೊದಲು ಸಜೀವ, ನಿರ್ಜೀವ ಆಧಾರದಮೇಲೆ ವಿಂಗಡಿಸಿಕೊಂಡು, ಜೀವವುಳ್ಳವನ್ನು ಪುಲ್ಲಿಂಗ ಸ್ತ್ರೀಲಿಂಗ ವರ್ಗಕ್ಕೆ ಸೇರಿಸಿ.

ಹೀಗೆ ಹೊಸಗನ್ನಡದಲ್ಲಿ 'ಅನ್ನು' ಪ್ರತ್ಯಯುವಲ್ಲದೆ, ಪ್ರಕೃತಿರೂಪ ಹಾಗೂ ಅಂತ್ಯಸ್ವರ ದೀರ್ಘ ದ್ವಿತೀಯ ವಿಭಕ್ತಿಯ ವೈಶಿಷ್ಟ್ಯವಾಗಿದೆ.

**ತೃತೀಯಾ ವಿಭಕ್ತಿ:** ಹಳಗನ್ನಡದಲ್ಲಿ ತೃತೀಯಾ ವಿಭಕ್ತಿ ಪ್ರತ್ಯಯ ಇಂ, ಇಂದ, ಇಂದೆ, ಆದೇಶವಾಗಿ 'ಎ' ಎಂದಿವೆ; ನಡುಗನ್ನಡದಲ್ಲಿ ಇಂ, ಇಂದಂ, ಇಂದ, ಇಂದೆ; ಹೊಸಗನ್ನಡದಲ್ಲಿ ಇಂದ. (ಹಳೆಯ ತಮಿಳಿನಲ್ಲಿ 'ಇನ್' ಇದೆ: ನಿನ್ನಿಲ್ರುಂದ. ಬಡಗದಲ್ಲಿ 'ಎಂದ್', ತೋದದಲ್ಲಿ 'ಎದ್ದ್' ಎಂದೂ ಇರುವುದನ್ನು ಗಮನಿಸಬೇಕು. ಆದ್ದರಿಂದ ತೃತೀಯೆ, ಪಂಚಮೀ ಎರಡೂ ಒಂದೇ ಆಗಿದ್ದು ಅವುಗಳ ಮೂಲ 'ಇನ್' ಇದ್ದಿರಬಹುದು). ವಿಭಕ್ತಿ ಪಲ್ಲಟವಾಗುವಾಗ ತೃತೀಯೆಗೆ ಪಂಚಮೀ, ಪಂಚಮೀಗೆ ತೃತೀಯೆ ಉಂಟೆಂದು ವ್ಯಾಕರಣದಲ್ಲಿ ಹೇಳಿದೆ. ಹೊಸಗನ್ನಡದಲ್ಲಿ 'ಇಂದಂ' ನಲ್ಲಿಯ ಅಂತ್ಯಬಿಂದು ಲೋಪವಾಗಿ ಇಂದ ಎಂಬ ಒಂದೇ ಪ್ರತ್ಯಯ ರೂಢಿಯಲ್ಲಿದೆ.

ಪ್ರಥಮಾ, ದ್ವಿತೀಯಾ, ಚತುರ್ಥೀ, ಷಷ್ಠೀ ವಿಭಕ್ತಿಗಳನ್ನು ಒಂದು ಗುಂಪಾಗಿಯೂ ತೃತೀಯಾ, ಪಂಚಮೀ, ಸಪ್ತಮೀಗಳನ್ನು ಇನ್ನೊಂದು ಗುಂಪಾಗಿಯೂ ಪರಿಗಣಿಸುವುದುಂಟು. ಇದಕ್ಕೆ ಮುಖ್ಯ ಕಾರಣ ಈ ಮೂರು ವಿ.ಪ್ರ.ಗಳು ಷಷ್ಠೀ ಮೇಲೆ ಸೇರುವುದಾಗಿದೆ. ಅಲ್ಲದೆ, ಕನ್ನಡ ತೃತೀಯಾ ವಿಭಕ್ತಿ 'ಇಂ'ನ ಮೂಲರೂಪ 'ಇನ್' ತಮಿಳಿನಲ್ಲಿ ಪಂಚಮೀ ಪ್ರತ್ಯಯವಾಗಿದೆ (ಮರತ್ತಿನ್). ಕನ್ನಡದ ಸಪ್ತಮೀ ವಿ.ಪ್ರ.ಗಳಾದ ಒಳ್, ಅಲ್ಲಿ ಎಂಬುದರ 'ಅಲ್ಲಿ'ಯ ಮೂಲ 'ಅಲ್' ತಮಿಳು, ಮಲೆಯಾಳಂಗಳಲ್ಲಿ ತೃತೀಯಾ ವಿಭಕ್ತಿ ಪ್ರತ್ಯಯವಾಗಿದೆ. (ತಮಿಳು: ಮರತ್ತಾಲ್, ಮರತ್ತಿನಾಲ್. ಮಲೆಯಾಳಂ: ಮರತ್ತಾಲ್). ತಮಿಳಿನಲ್ಲಿ ತೃತೀಯೆ ಆನ್, ಆಲ್ ಎಂದು ಎರಡೂ ಇವೆ. ಈ ಮೂರೂ ವಿಭಕ್ತಿಗಳು ದ್ರಾವಿಡ ಭಾಷೆಗಳಲ್ಲಿ ಅದಲುಬದಲಾಗಿರುವುದನ್ನೂ ಒಂದೊಂದು ಭಾಷೆಯಲ್ಲಿ ಬೇರೆ ಬೇರೆ ಇರುವುದುನ್ನು ಗಮನಿಸಬಹುದು. (ತೆಲುಗಿನಲ್ಲಿ ಚೇ, ನ ಗಳಿವೆ)

**ಚತುರ್ಥೀ ವಿಭಕ್ತಿ:** ಹಳಗನ್ನಡದಲ್ಲಿ ಗೆ, ಗ್ಗೆ, -ಂಗೆ, ಕೆ, ಕ್ಕೆ ಚತುರ್ಥೀ ಪ್ರತ್ಯಯಗಳೆಂದು ಕೇಶಿರಾಜ ಹೇಳಿದ್ದಾನೆ. ಇವು ಪೂ.ಹ.ಗ.ದಲ್ಲಿಯೂ ಇವೆ. ಉದಾ: ಪೆಣ್ಗೆ, ಕುರುಳ್ಗೆ, ಬುಧರ್ಗ್ಗೆ, ಕಾಂತೆಯರ್ಗ್ಗೆ; ಅಕಾರಾಂತ ಪುಲ್ಲಿಂಗದಲ್ಲಿ ಬಿಂದುಸಮೇತ: ಅರಸಂಗೆ, ಆತಂಗೆ; ಬನಕೆ, ಪೊಲಕ್ಕೆ ಇತ್ಯಾದಿ. ಹೊಸಗನ್ನಡದಲ್ಲಿ ಗೆ, ಇಗೆ, ಕ್ಕೆ, ಅಕ್ಕೆ ಎಂದಿವೆ. ಅಕಾರಾಂತ ಪುಲ್ಲಿಂಗದಲ್ಲಿ ಬರುವ ಬಿಂದು ಲಿಂಗಸೂಚಕ: ಸುತನ್ಗೆ, ಅಟುವೊನ್ಗೆ ಇತ್ಯಾದಿ. ಸಂಯುಕ್ತಾಕ್ಷರಗಳು ಹೊಸಗನ್ನಡದಲ್ಲಿ ಸ್ವರ ಪಡೆಯುತ್ತಿದ್ದ ಕಾರಣ (ಸ್ವರಭಕ್ತಿ-ನೋಡಿ) 'ಇಗೆ' ಪ್ರತ್ಯಯ ರೂಢಿಗೆ ಬಂದಿತು: ಭೀಮನ್ಗೆ-ಭೀಮನಿಗೆ, ಅರಸನ್ಗೆ-ಅರಸನಿಗೆ, ಕುರುಳ್ಗೆ-ಕುರುಳಿಗೆ.

ಇತರ ದ್ರಾವಿಡ ಭಾಷೆಗಳಲ್ಲಿ 'ಕು' ಪ್ರತ್ಯಯವಿದೆ. ತಮಿಳು, ಮಲೆಯಾಳಂಗಳಲ್ಲಿ 'ಕ್ಕು' (ಮನ್ನೈಕ್ಕು, ಕುಳಕ್ಕು–ಹಳೆಯ ತಮಿಳು. ಈಗಿನ ತಮಿಳಿನಲ್ಲಿ 'ಕುಳತ್ತುಕ್ಕು' ಎಂದಾಗುತ್ತದೆ); ತೆಲುಗಿನಲ್ಲಿ ಕು, ಕಿ (ತಲಕು, ತಲ್ಲಿಕಿ); ತುಳುವಿನಲ್ಲಿ ಕು, ಗು (ಮರಕು); ತೊದದಲ್ಲಿ ಕ, ಗ. ಇವನ್ನು ಗಮನಿಸಿದಾಗ ದ್ರಾವಿಡ ಭಾಷೆಯ ಚತುರ್ಥೀ ಪ್ರತ್ಯಯ 'ಕು' ಎಂಬುದು ಸ್ಪಷ್ಟವಾಗುತ್ತದೆ. ಇದು ಹೇಗೆ ಬಂದಿತೆಂಬುದಕ್ಕೆ ಸ್ಪಷ್ಟ ಉತ್ತರ ಸಿಗುವುದಿಲ್ಲ. ಡಾ. ಕಾಲ್ಡ್‌ವೆಲ್ ಒಂದು ಸೂಚನೆ ಕೊಡುತ್ತಾರೆ. ಆಖ್ಯಾತ ಪ್ರತ್ಯಯಗಳೂ ವಿಭಕ್ತಿ ಪ್ರತ್ಯಯಗಳೂ ಒಂದೇ ಮೂಲದಿಂದ ಬಂದಿರಬಹುದು. ಭವಿಷ್ಯತ್ತಿನಲ್ಲಿ ಗುಂ, ಕುಂ ಆದೇಶವಾಗಿ ಬರುತ್ತದೆ ಎನ್ನಲಾಗಿದೆ. ಉದಾ: ಬಿಸುಸುಯ್ಯುಗ್ಗಂ, ಗೆಲ್ಗುಂ, ಮಾಟ್ಕುಂ ಇತ್ಯಾದಿ. ತಮಿಳಿನಲ್ಲೂ ಈ ರೂಪವಿದೆ: ಶೆಯ್ಯುಂ. ಹಾಗೇ ಕೃದಂತದಲ್ಲೂ ಕಕಾರ ಬರುತ್ತದೆ: ಕಾಣ್–ಕಾಣ್ಕೆ, ಒಡೆ–ಒಡಕು, ಮುಱಿ–ಮುಱುಕು, ಉಡು–ಉಡುಗೆ, ಕೊಡು–ಕೊಡುಗೆ. ತಮಿಳಿನ ವಡಕ್ಕು, ಕಿಟಕ್ಕು (ಕನ್ನಡದ ಮೇಲಕ್ಕೆ, ಕೆಳಕ್ಕೆ ಸಹ) ಎಂಬಲ್ಲಿ 'ಕ್ಕು' ದಿಗ್ವಾಚಿಯಾಗಿದೆ. ಇವೆಲ್ಲ ಒಂದೇ ಮೂಲವಿರಬಹುದೆ? ಅದು ಇದು ಉದು ವಸ್ತುವಾಚಕ ಸರ್ವನಾಮಗಳು, ಅಲ್ಲಿ ಇಲ್ಲಿ ಎಲ್ಲಿ ಸ್ಥಳವಾಚಕಗಳು, ಅತ್ತ ಇತ್ತ ಎತ್ತ ದಿಗ್ವಾಚಕಗಳು. ಇವುಗಳ ಮೂಲ ಅ ಇ ಉ (ಎ) ಎಂಬುವು. ಹಾಗೇ 'ಕು' ದಿಕ್ಸೂಚನೆಯ ಅರ್ಥದಿಂದ ಚತುರ್ಥಿಯ ಅರ್ಥ ಪಡೆದಿರಬಹುದೆ? ಇನ್ನಿತರ ಕೆಲವು ವಿದ್ವಾಂಸರು ಕಯ್ (ಕೈ hand) ನಿಂದ ಚತುರ್ಥಿಯ 'ಕೆ' ಬಂದಿದೆ ಎನ್ನುತ್ತಾರೆ. ಇದು ಸಂಪ್ರದಾನಕಾರಕ ತಾನೆ– ಕೊಡುವುದು 'ಕೈಗೆ' ಎಂಬುದು ಕಾಲಕ್ರಮೇಣ (ರಾಮನ ಕೈಗೆ ಕೊಡು> ರಾಮನಿಗೆ ಕೊಡು) ಸ್ವತಂತ್ರ ಶಬ್ದವಾಗಿದ್ದುದು 'ಕೆ' ಆಗಿರಬೇಕೆಂದು ಊಹೆ. ಆದರೆ 'ಮನೆಗೆ ಹೋಗು' ಎನ್ನುವಾಗ ದಿಗ್ವಾಚಿಯೇ ಆಗುವುದಿಲ್ಲವೆ. 'ಕು' ಹೆಚ್ಚು ದ್ರಾವಿಡ ಭಾಷೆಗಳಲ್ಲಿದೆ.

**ಪಂಚಮೀ ವಿಭಕ್ತಿ ಕನ್ನಡದಲ್ಲಿದೆಯೇ? :** ತೃತೀಯಾ ವಿಭಕ್ತಿ ವಿವೇಚನೆಯ ಸಂದರ್ಭದಲ್ಲಿ ಪಂಚಮೀ ವಿಭಕ್ತಿಯ ಅರ್ಥದಲ್ಲಿಯೇ ತೃತೀಯಾ ವಿಭಕ್ತಿಯೂ ಪ್ರಯೋಗವಾಗುವುದನ್ನು ಹೇಳಿದೆ. ಕೇಶಿರಾಜನ ಪ್ರಕಾರ ಹಳಗನ್ನಡದಲ್ಲಿ 'ಅತ್ತಣಿಂ' ಪಂಚಮೀ ಪ್ರತ್ಯಯ. ಹೊಸಗನ್ನಡದ ಕೆಲವು ವ್ಯಾಕರಣಗಳಲ್ಲಿ 'ದೆಸೆಯಿಂದ' ಎಂಬುದನ್ನು ಪಂ.ವಿ. ಪ್ರತ್ಯಯ ಎಂದು ಹೇಳಲಾಗಿದೆ. ಸಂಸ್ಕೃತ ವ್ಯಾಕರಣದ ಅನುಕರಣೆಯಿಂದ ಪಂಚಮೀ ವಿಭಕ್ತಿಯನ್ನು ಹೇಳಿದ್ದಾರೆಯೇ ಹೊರತು ಸಹಜವಾಗಿ ದ್ರಾವಿಡ ಭಾಷೆಗಳಲ್ಲಿ ಇಲ್ಲ. ಅತ್ತಣಿಂ, ದೆಸೆಯಿಂದ ಪ್ರತ್ಯಯಗಳಲ್ಲಿನ ಅತ್ತಣ, ದೆಸೆ ಸ್ವತಂತ್ರ ದಿಗ್ವಾಚಕ ಶಬ್ದಗಳು; ಪ್ರತ್ಯಯಗಳಲ್ಲ. ಅವುಗಳ ಮೇಲೆ ಇಂ, ಇಂದ ಎಂಬ ತೃತೀಯಾ ಪ್ರತ್ಯಯಗಳು ಸೇರಿವೆ. ಆಧುನಿಕ ಭಾಷಾ ಶಾಸ್ತ್ರಜ್ಞರೂ ಪಂಚಮೀ ಪ್ರತ್ಯಯವಿಲ್ಲ ಎನ್ನುತ್ತಾರೆ. ತಮಿಳು

ದ್ವಿವಚನವನ್ನು ಒಪ್ಪುವುದಿಲ್ಲ. ದ್ರಾವಿಡ ಭಾಷೆಗಳಲ್ಲಿ ಸಾಮಾನ್ಯವಾಗಿ 'ಗಳ್' ಬಹುವಚನ ಪ್ರತ್ಯಯ. ತಮಿಳು ಮಲೆಯಾಳಂಗಳಲ್ಲಿ ಗಳ್, ಕಳ್, ಕ್ಕಳ್; ತೆಲುಗಿನಲ್ಲಿ ಮಾತ್ರ 'ಲು' ಎಂಬುದು ಪ್ರಧಾನವಾಗಿದೆ.

ಇಲ್ಲಿ ಇನ್ನೊಂದು ವಿಷಯದ ವಿವರಣೆ ಅಗತ್ಯ. ಈ ಗಳ್, ಕಳ್ ಬಹುವಚನ ಪ್ರತ್ಯಯಗಳು ಮೂಲತಃ ನಪುಂಸಕಲಿಂಗ ಶಬ್ದಗಳಿಗೆ ಮಾತ್ರ ಹತ್ತುತ್ತವೆಯೆಂದು ಡಾ. ಕಾಲ್ಡ್‌ವೆಲ್ ಹೇಳುವುದು ಸಮಂಜಸವಲ್ಲ. ಏಕೆಂದರೆ ಹಳಗನ್ನಡದಲ್ಲಿ ಅಣ್ಣಂಗಳ್, ಅಕ್ಕಂಗಳ್, ತಂದೆಗಳ್, ಕವಿಗಳ್, ಮಕ್ಕಳ್ ತಾಯ್ಗಳ್ ಎಂದೂ ನಡುಗನ್ನಡದಲ್ಲಿ ಅಣ್ಣಗಳು, ಈತಗಳು ಮುಂತಾದವೂ ಕಾಣಬರುತ್ತವೆ. ಕೇಶಿರಾಜ 'ಗಳ್' ಬಹುವಚನ ಪ್ರತ್ಯಯಕ್ಕೆ ಪುಂಸ್ತ್ರೀಲಿಂಗಗಳಲ್ಲಿ 'ಅರ್' ಆದೇಶವಾ ಬರುತ್ತದೆ ಎನ್ನುತ್ತಾನೆ. ಇದೂ ಸರಿಯಲ್ಲ. ಅರ್, ವಿರ್ ಸಹ ಬಹುವಚ ಪ್ರತ್ಯಯಗಳೇ ಆಗಿವೆ. ತಮಿಳಿನಲ್ಲೂ ಮರ್ (ಎನ್ಮರ್, ಪದಿನ್ಮರ್), ಮಾರ್ (ತಾಯ್ಮಾರ್, ದೇವಿಮಾರ್), ವಿರ್ (ತಾಯ್ವಿರ್), ಇರುವಂತೆ ಕನ್ನಡದಲ್ಲ ಸಂದರ್ಭೋಚಿತವಾಗಿ ಬರುತ್ತವೆ. ಹೊಸಗನ್ನಡದಲ್ಲಿ ಪುಂಸ್ತ್ರೀಲಿಂಗಗಳಮೇ 'ಗಳ್' ನೇರವಾಗಿ ಬರುವುದು ಅಪರೂಪವಾದರೂ (ಗುರುಗಳು) ಅರ್ ಮೇ ಗಳ್ ಮತ್ತೆ ಸೇರುವುದುಂಟು. ತಂದೆಯರುಗಳು ಇತ್ಯಾದಿ.

ದ್ರಾವಿಡ ಭಾಷೆಯ ಬಹುವಚನದ ಇನ್ನೊಂದು ವೈಶಿಷ್ಟ್ಯ ಅದು ಗೌರವಾ ದಲ್ಲಿ ಬರುವುದು. ತಂದೆಯವರು, ಶ್ರೀಯವರು, ಅಣ್ಣನವರು ಇತ್ಯಾದಿ. ಒಮ್ಮೊಮ್ಮೆ ಎರಡೆರಡು ಪ್ರತ್ಯಯ ಸೇರುವುದುಂಟು: ಮಹಾರಾಜರವರು, ಸ್ವಾಮಿಗಳವ ಶ್ರೀ....ಅಯ್ಯರವರ್ಗಳು. (ಅಯ್ಯ, ಅರ್, ಅವರ್, ಗಳ್!) ಇತ್ಯಾದಿ.

ಕನ್ನಡದಲ್ಲಿ ಜಾತ್ಯೇಕವಚನ ಮತ್ತೊಂದು ವೈಶಿಷ್ಟ್ಯ. ಇದು ಅಮಹ (ನಪುಂಸಕ) ಶಬ್ದಗಳಿಗೆ ಮಾತ್ರ ಅನ್ವಯವಾಗುತ್ತದೆ. ಆನೆ ಎಂದಾಗ ಒಂದಾ ಬಹುದು, ನೂರಾಗಬಹುದು. ಆನೆ ಬಂದುದು, ಆನೆ ಬಂದವು. ಸಂದರ್ಭ ಗಮನಿ ಕ್ರಿಯಾಪದ ಗಮನಿಸಿ ಏಕ, ಅನೇಕ ನಿರ್ಧಾರ ಮಾಡಬಹುದು. ಈ ಬಗೆ ಪ್ರಯೋಗಕ್ಕೆ ಜಾತ್ಯೇಕವಚನವೆಂದು ವ್ಯಾಕರಣದಲ್ಲಿ ಹೇಳಿದ್ದಾರೆ.

**ವಿಭಕ್ತಿ :** ಆರ್ಯ ಭಾಷೆಗಳಿಗೂ ದ್ರಾವಿಡ ಭಾಷೆಗಳಿಗೂ ಲಿಂಗ, ವಚ ವಿಭಕ್ತಿಗಳ ವಿಷಯದಲ್ಲಿ ಬಹಳ ವ್ಯತ್ಯಾಸವಿದೆ. ಸಂಸ್ಕೃತ ಮತ್ತು ಕನ್ನಡವ ಹೋಲಿಸಿದಾಗ ಇದು ಸ್ಪಷ್ಟವಾಗುತ್ತದೆ. ಸಂಸ್ಕೃತದಲ್ಲಿ ಕನ್ನಡದಲ್ಲಿರುವಂತೆ ಪ್ರತ್ಯೇ ಲಿಂಗ-ವಚನ ಪ್ರತ್ಯಯವಿಲ್ಲ. ವಿಭಕ್ತಿಪ್ರತ್ಯಯದಿಂದಲೇ ಲಿಂಗ-ವಚನಗಳೂ ಸೂ ವಾಗುತ್ತವೆ ಎಂಬುದನ್ನು ನೋಡಿದೆವು. ಪ್ರಾತಿಪದಿಕ+ಲಿಂಗವಚನ ವಿಕರ ವಿಭಕ್ತಿಪ್ರತ್ಯಯ—ಇದು ಕನ್ನಡದ ಕ್ರಮ. ಪ್ರಾತಿಪದಿಕ+ವಿಭಕ್ತಿಪ್ರತ್ಯಯ—ಇ ಸಂಸ್ಕೃತದ ಕ್ರಮ. ಸಂಸ್ಕೃತದಲ್ಲಿ ಏಕವಚನಕ್ಕೆ ಬೇರೆ ವಿಭಕ್ತಿ ಪ್ರತ್ಯ

ಇನ್ನೊಂದು ರೂಪ 'ಉಡ್'ನಿಂದ ಒಡೆಯು ಆಗಿರುವುದನ್ನು ಗಮನಿಸಬೇಕು. ಹೊಸಗನ್ನಡದಲ್ಲಿ ಉಳ್ > ಒಳ್ > ಒಳಗು+ಎ ಸೇರಿ ಒಳಗೆ ಪ್ರತ್ಯಯ ಆಗಿದೆ.

ಅಲ್, ಅಲಿ, ಅಲ್ಲಿ ಪ್ರತ್ಯಯಗಳ ಮೂಲ 'ಅಲ್' ಇರಬೇಕು. ಶಾಸನಗಳಲ್ಲಿ ಕಯ್ಯಲ್, ಮಠದಲ್ ಓದುವ ಎಂದೂ, ಪಂಪಭಾರತದಲ್ಲಿ 'ಕತ್ತುರಿಯಲ್ ಬರೆದಂತಪ್ಪ' ಎಂದೂ ಪ್ರಯೋಗಗಳಿವೆ. ತಮಿಳಿನ ತೃತೀಯಾ ಪ್ರತ್ಯಯ 'ಅಲ್'ನ ಮೂಲವೂ ಇದೇ ಇರಬೇಕು. ಈ 'ಅಲ್' ಎಂಬುದು ಅಲ್ಲಿ, ಇಲ್ಲಿ, ಎಲ್ಲಿ ಎಂಬ ಸ್ಥಳವಾಚಿಗಳಲ್ಲಿನ 'ಅಲ್ಲಿ' ಎಂಬುದರ ಮೂಲರೂಪವಿರಬೇಕು. ಅಲ್ ಎಂಬುದೇ ಅಲು, ಅಲಿ, ಅಲ್ಲಿ ಎಂದು ವಿವಿಧ ರೂಪ ತಾಳಿದೆ.

'ಎ' ಪ್ರತ್ಯಯ ತೃತೀಯಾ, ಸಪ್ತಮೀ ಎರಡು ವಿಭಕ್ತಿಗಳಲ್ಲೂ ಬರುತ್ತದೆ. ಇದು ಮೂಲತಃ ಸಪ್ತಮೀ ಪ್ರತ್ಯಯವೆಂದು ಆಧುನಿಕ ಭಾಷಾ ತಜ್ಞರ ಅಭಿಪ್ರಾಯ. ಹೊಸಗನ್ನಡದಲ್ಲಿ 'ಎ' ಪ್ರತ್ಯಯ ಬಳಕೆಯಲ್ಲಿಲ್ಲ. ಇದು ವಿಶೇಷವಾಗಿ ನಪುಂಸಕ ಏಕವಚನದಲ್ಲಿ ಮಾತ್ರ ಪ್ರಯೋಗವಾಗಿರುವುದನ್ನು ಕಾಣಬಹುದು. 'ಎ'ನಲ್ಲಿ ಸ್ಥಾನ ಮತ್ತು ಕಾಲ ಸೂಚಿಸುವ ಶಕ್ತಿಯಿದ್ದು (ಸತಿಸಪ್ತಮಿ) ಬಹಳ ಪ್ರಾಚೀನ ಸಪ್ತಮೀ ಪ್ರತ್ಯಯವಿರಬಹುದು ಎಂಬ ಅಭಿಪ್ರಾಯವಿದೆ. ಹವ್ಯಕರಲ್ಲಿ ಈಗಲೂ ಸಪ್ತಮಿಯಲ್ಲಿ 'ಎ' ಉಳಿದು ಬಂದಿದೆ.

ಉತ್ತರ ಕರ್ನಾಟಕದಲ್ಲಿ ಆಗ, ಆಗೆ ಪ್ರತ್ಯಯಗಳು ಆಡುನುಡಿಯಲ್ಲಿ ಇವೆ. ಮನೆಯಾಗ. ಕೇರ್‍ಯಾಗ, ಹಾದ್ಯಾಗ; ಮೈಸೂರು ಕಡೆ : ಅದರಾಗೆ, ಬಾವ್ಯಾಗೆ. ಇದು ಒಳಗೆ ಎಂಬುದರ ವಿಕೃತರೂಪ ಎಂದು ಕಿಟೆಲ್, ಕುಲಕರಣಿ ಹೇಳುತ್ತಾರೆ. ಅಥವಾ ಅಲ್ಲಿ ಮತ್ತು ಒಳಗೆ ಎರಡರ ಪ್ರಭಾವದಿಂದ ತಪ್ಪು ಸಾಹಚರ್ಯರೂಪ ಆಗಿರಬಹುದೇ ?

**ಸಂಬೋಧನಾ ವಿಭಕ್ತಿ :** ಕನ್ನಡದಲ್ಲಿಲ್ಲ. ಪ್ರಕೃತಿರೂಪವೇ ಅಥವಾ ಅಂತ್ಯಸ್ವರ ದೀರ್ಘದಿಂದ ಸೂಚಿತವಾಗುತ್ತದೆ. ಸಂಸ್ಕೃತ ಪ್ರಭಾವದಿಂದ 'ಏ' ದೀರ್ಘವನ್ನು ಬರವಣಿಗೆಯಲ್ಲಿ ಸೇರಿಸುತ್ತಿದ್ದರು, ಆಡುನುಡಿಯಲ್ಲಿಲ್ಲ. ಸಂಸ್ಕೃತದಲ್ಲಿ 'ಹೇ' ಸೇರಿಸುವುದರಿಂದ (ಹೇ ರಾಮಃ) ಆಗುತ್ತದೆ. ಉದಾ : ರಾಮ, ರಾಮಾ, ರಾಮನೇ. ತಮಿಳು, ತೆಲುಗುಗಳಲ್ಲಿ ಕನ್ನಡದಂತೆಯೇ ಕಾಣಬರುತ್ತದೆ. ದೇವ, ದೇವಾ, ದೇವನೇ; ರಾಮುಡ, ರಾಮುಡ, ರಾಮುಡಾ. ಬಹುವಚನದಲ್ಲಿ 'ಇರ' ಪ್ರತ್ಯಯವಾಗುತ್ತದೆ; ದೇವರ್ಕಳಿರ, ನಂಟರಿರ. ತಮಿಳಿನಲ್ಲಿ ಇರ್, ಅಥವಾ ಈರ್ : ತೆವ್ವಿರ್, ಶಾಸ್ತ್ರೀರ್. ತೆಲುಗಿನಲ್ಲಿ ಆರ : ರಾಮುಲಾರ.

ವಿಭಕ್ತಿಪ್ರತ್ಯಯಗಳು ಸ್ವತಂತ್ರ ಶಬ್ದಗಳೇ ? : ಡಾ. ಕಾಲ್ಡ್‌ವೆಲ್ ಅವರು ದ್ರಾವಿಡ ಭಾಷೆಗಳ ವಿಭಕ್ತಿಪ್ರತ್ಯಯಗಳು ಹಿಂದೊಮ್ಮೆ ಸ್ವತಂತ್ರ ಶಬ್ದಗಳಾಗಿರ ಬೇಕೆಂದೂ, ಅವು ಕಾಲಕ್ರಮದಲ್ಲಿ ಪ್ರತ್ಯಯಗಳಾದುವೆಂದೂ ಹೇಳಿದ್ದಾರೆ. ಹಾಗೆ

ಇದು ಸಂಸ್ಕೃತ ವಿಭಕ್ತಿಗಳನ್ನನುಸರಿಸಿ ಕನ್ನಡದಲ್ಲೂ ರೂಪುಗೊಂಡಿರುವ ಬಗೆ. ಆದರೆ ಕನ್ನಡದಲ್ಲಿ ಇಷ್ಟೆಲ್ಲ ವಿಭಕ್ತಿಗಳ ಅಗತ್ಯವಿದೆಯೆ ಎಂಬ ಬಗೆಗೆ ಅನೇಕ ಭಾಷಾ ಶಾಸ್ತ್ರಜ್ಞರು ಚರ್ಚೆ ಮಾಡಿದ್ದಾರೆ. ವಾಸ್ತವವಾಗಿ ಕನ್ನಡದಲ್ಲಿ ಐದು ವಿಭಕ್ತಿಗಳು ಮಾತ್ರ ಇವೆ ಎಂಬುದು ಅವರ ಅಭಿಪ್ರಾಯ.

ಕನ್ನಡದಲ್ಲಿ ಏಳು ವಿಭಕ್ತಿಗಳನ್ನು ಎರಡು ಭಾಗಗಳನ್ನಾಗಿ ವಿಭಜಿಸುವುದೂ ಉಂಟು. ಪ್ರಥಮಾ, ದ್ವಿತೀಯಾ, ಚತುರ್ಥೀ, ಷಷ್ಠೀ—ಈ ನಾಲ್ಕು ವಿಭಕ್ತಿಗಳದು ಒಂದು ಗುಂಪು; ಇವು ಸರ್ವನಾಮ ಮೂಲದಿಂದ ಹುಟ್ಟಿದ ವಿಭಕ್ತಿಪ್ರತ್ಯಯಗಳನ್ನು ಹೊಂದಿವೆ. ಷಷ್ಠೀ ವಿಭಕ್ತಿಯ ಮುಂದೆ ಸೇರುವ ತೃತೀಯಾ, ಪಂಚಮಿ, ಸಪ್ತಮೀ ವಿಭಕ್ತಿಗಳದು ಎರಡನೆಯ ಗುಂಪು. ಪ್ರ. ಗೋ. ಕುಲಕರಣಿಯವರು ಈ ಕ್ರಮ ಅನುಸರಿಸುತ್ತಾರೆ.

**ಕನ್ನಡದಲ್ಲಿ ಪ್ರಥಮಾವಿಭಕ್ತಿ ಇದೆಯೇ?:** ಈ ಪ್ರಶ್ನೆಗೆ ಉತ್ತರ ಇತರ ದ್ರಾವಿಡ ಭಾಷೆಗಳನ್ನು ಪರಿಶೀಲಿಸಿದಾಗ ದೊರೆಯುತ್ತದೆ. ತಮಿಳು, ತೆಲುಗುಗಳಲ್ಲಿ ಪ್ರಥಮಾ ವಿಭಕ್ತಿ ಪ್ರತ್ಯಯವಿಲ್ಲ. ತುಳುವಿನಲ್ಲೂ ಇಲ್ಲ. ಹಳಗನ್ನಡ ವ್ಯಾಕರಣಗಳಲ್ಲಿ 'ಮ್' ಎಂಬುದು ಪ್ರಥಮೆಯ ಪ್ರತ್ಯಯವೆಂದು ಹೇಳಲಾಗಿದೆ. ಇದು ತಪ್ಪು. 'ಮ್'ಗೆ ಸಮಾನವಾಗಿ ತಮಿಳಿನಲ್ಲಿ 'ಅನ್', ತೆಲುಗಿನಲ್ಲಿ 'ಡು' ಇವೆ. ಇವು ಅಕಾರಾಂತ ಪ್ರಕೃತಿಗಳ ಮೇಲೆ ಏಕವಚನದಲ್ಲಿ ಮಾತ್ರ, ಅದೂ ಪುಲ್ಲಿಂಗ ನಪುಂಸಕಲಿಂಗಗಳಲ್ಲಿ ಹತ್ತುತ್ತವೆ. ಉದಾ:

ದೇವಂ (ಕ) ದೇವನ್ (ತ) ದೇವನ್ (ಮ) ದೇವುಡು (ತೆ)
ಸುಬ್ಬಂ ಕುಪ್ಪನ್ ಸುಬ್ಬನ್ ಸುಬ್ಬುಡು

ಕನ್ನಡ ಪ್ರತ್ಯಯ 'ಮ್'ಗೆ ಸ್ವರಪರವಾದಾಗ ಅದು 'ಅನ್' ರೂಪ ಪಡೆಯುತ್ತದೆ. ದೇವಂ+ಅಂ=ದೇವನಂ. ನಪುಂಸಕಲಿಂಗಕ್ಕೆ ವಿಕಲ್ಪ: ಕೊಳಂ+ಅಂ=ಕೊಳಮುಂ, ಕೊಳನಂ. ತೆಲುಗಿನಲ್ಲಿ ನಪುಂಸಕಕ್ಕೆ 'ಮು' ಬರುತ್ತದೆ. ಗುಣಮು, ಮರಮು, ಗುರ್ರಮು ಇತ್ಯಾದಿ. ಹೀಗೆ ವ್ಯಾಕರಣದಲ್ಲಿ ಹೇಳುವಂತೆ 'ಮ್' ಪ್ರ.ವಿ. ಪ್ರತ್ಯಯವಾಗಿದ್ದರೆ ಇಕಾರ, ಉಕಾರ, ಎಕಾರಾಂತ ಪ್ರಕೃತಿಗಳ ಮೇಲೆ ಏಕೆ ಹತ್ತುವುದಿಲ್ಲ? ಅಕಾರಾಂತದಲ್ಲೂ ಸ್ವರಪರವಾದರೆ ಮ್>ಅನ್ ಆಗುವುದೇಕೆ? ನಪುಂಸಕದಲ್ಲಿ ಅನ್-ಮ್ ಎರಡೂ ಏಕೆ? ಪ್ರಥಮಾ ಏಕವಚನದಲ್ಲಿ ಮಾತ್ರ ಏಕೆ, ಬಹುವಚನದಲ್ಲಿ ಏಕಿಲ್ಲ? ವೈಯಾಕರಣರು 'ಮುಮಿಂಕೆಯುದದೊಳೆ' ಎಂದು ಹೇಳುವಲ್ಲಿ ತಪ್ಪುಮಾಡಿದ್ದಾರೆ (ಮ್, ಅಮ್, ಇಂ, ಕೆ, ಅತ್, ಅತ್, ಒಳ್, ಎ). ಹಳಗನ್ನಡ ಶಾಸನಗಳಲ್ಲಿ 'ಅನ್' ರೂಪವಿದೆ: ಕಲಿಯುಗ ವಿಪರೀತನ್, ನಂದಿದೇವ ಮುನಿವರನ್, ಮಾಧವನ್ ಇತ್ಯಾದಿ. ಹೊಸಗನ್ನಡದಲ್ಲಿ ರಾಮಂ ಎಂಬುದು 'ರಾಮನು' ಆಗುತ್ತದೆ, 'ರಾಮುಮು' ಅಲ್ಲ. 'ಅಕ್ಕ' ಸ್ತ್ರೀಲಿಂಗ ಶಬ್ದ, ಅಕ್ಕನ್ ಆಗಿದೆ.

ಆದ್ದರಿಂದ ಹಳೆಬರು ಹೇಳುವಂತೆ ಆ ಪ್ರತ್ಯಯ (ತಮಿಳು, ಕನ್ನಡ ಶಾಸನಗಳಲ್ಲಿರುವಂತೆ) 'ಅನ್' ಇರಬೇಕು, 'ಮ್' ಅಲ್ಲ. ಬಹುಶಃ ಅಕಾರಾಂತ ಪುಲ್ಲಿಂಗ ಶಬ್ದಗಳನ್ನು ಬರೆಯುವಾಗ ಬಿಂದು ಬಳಸುವುದು ರೂಢಿಯಾದ ಮೇಲೆ (ಉದಾ: ರಾಮನ್>ರಾಮಂ, ಅಣ್ಣನ್>ಅಣ್ಣಂ) ಆ ಬಿಂದುವನ್ನು ಉಚ್ಚರಿಸುವಲ್ಲಿ 'ಮ್' ಎಂದು ಭ್ರಮಿಸಿರಬೇಕು.

ತಮಿಳು, ತೆಲುಗುಗಳ ಆಧಾರದಿಂದ 'ಅನ್' ಎಂಬುದು ಅಕಾರಾಂತ ಪುಲ್ಲಿಂಗ (ಅಥವಾ ಮಹತ್) ಏಕವಚನ ಶಬ್ದಗಳಲ್ಲಿ ಕಂಡುಬರುತ್ತದೆ; 'ಮ್' ಎಂಬುದು ಅಕಾರಾಂತ ನಪುಂಸಕ ಶಬ್ದಗಳಲ್ಲಿ ಕಂಡುಬರುತ್ತದೆ ಎಂಬುದನ್ನು ಸ್ಪಷ್ಟವಾಗಿ ಹೇಳಬಹುದು. ಮಿಕ್ಕ ವಿಭಕ್ತಿ ಪ್ರತ್ಯಯಗಳು ಲಿಂಗಭೇದವಿಲ್ಲದೆ ಸೇರುತ್ತವೆ; ಪ್ರಥಮೆಯಲ್ಲಿ ಮಾತ್ರ ಈ ವಿಚಿತ್ರ. ಅಕಾರಾಂತ ಶಬ್ದಗಳಿಗೆ ಬಹುವಚನದ 'ಗಳ್' ಸೇರುವಾಗಲೂ ನ್, ಮ್ ಗಳಿರುತ್ತವೆ. ಅಣ್ಣಂಗಳ್, ಮರಂಗಳ್. ಅಕಾರಾಂತ ಪುಲ್ಲಿಂಗ ಶಬ್ದಗಳಿಗೆ ದ್ವಿತೀಯಾ, ತೃತೀಯಾ ವಿ.ಪ್ರ.ಗಳು ಸೇರುವಾಗ ನ್, ಮ್‌ಗಳ ಮೇಲೆ ಸೇರುತ್ತವೆ. ರಾಮನಂ, ರಾಮನಿಂ. ಅಕಾರಾಂತ ನಪುಂಸಕ ಶಬ್ದಗಳಲ್ಲಿ ದ್ವಿತೀಯೆಗೆ 'ಮ್', ಇತರೆಡೆ 'ದ' ಆಗಮವಾಗುತ್ತದೆ. ಮರಮಂ, ಮರದಿಂ, ಮರದ, ಮರದೊಳ್. ಈ ಎಲ್ಲ ಕಾರಣಗಳಿಂದ ಅನ್, ಮ್ ಗಳು ಪ್ರಥಮಾ ವಿಭಕ್ತಿ ಪ್ರತ್ಯಯವಲ್ಲ ಎನ್ನಬೇಕಾಗುತ್ತದೆ. ಹಾಗಾದರೆ ಇವು ಎಂತಹ ಪ್ರತ್ಯಯಗಳು?

**ಅನ್, ಮ್ ಲಿಂಗಸೂಚಕ ಪ್ರತ್ಯಯಗಳೆ?:** ಅವು ಪುಲ್ಲಿಂಗ, ನಪುಂಸಕ ಲಿಂಗ ಸೂಚಿಸುತ್ತವೆ ಎಂಬುದಕ್ಕೆ ತಮಿಳು, ತೆಲುಗಿನಲ್ಲೂ ರಾಮನ್–ರಾಮುಡು, ದೇವನ್–ದೇವುಡು, ಗುಣಮ್–ಗುಣಮು, ಮರಮ್–ಮರಮು ಎಂದು ಇರುವುದೂ ಸಮರ್ಥನೆಯಾಗಿದೆ. ಕನ್ನಡದಲ್ಲಿ ಅಕಾರಾಂತ ಪುಲ್ಲಿಂಗ ಏಕವಚನಕ್ಕೆ ನ್ ಎಂಬುದೂ ಬಹುವಚನಕ್ಕೆ ರ್ (ಅರ್, ದಿರ್, ವಿರ್) ಸೇರುತ್ತದೆಯಷ್ಟೆ. ಈ (ಅ)ನ್, (ಅ)ರ್ ಎಂಬ ವಚನ–ಲಿಂಗ ಪ್ರತ್ಯಯಗಳು ಅವನ್, ಅವರ್ ಸರ್ವನಾಮಗಳಲ್ಲಿವೆ; ಒರ್ವನ್, ಇರ್ವರ್ ಸಂಖ್ಯಾವಾಚಕಗಳಲ್ಲಿವೆ; ನಲ್ಲನ್, ನಲ್ಲರ್ ಗುಣವಾಚಕಗಳಲ್ಲಿವೆ; ಬೇಡುವನ್, ಬೇಡುವರ್ ಕೃದಂತಗಳಲ್ಲಿವೆ; ಕೊಂಡಪನ್, ಕೊಂಡನ್, ಕೊಳ್ವನ್, ಕೊಂಡಪರ್, ಕೊಂಡರ್, ಕೊಳ್ವರ್ ಎಂಬ ಕ್ರಿಯಾಪದಗಳಲ್ಲಿವೆ. ಇಲ್ಲೆಲ್ಲಾ ನ್, ರ್ ಅಥವಾ ಅನ್, ಅರ್ ಎಂಬುವು ಪುಲ್ಲಿಂಗವನ್ನು ಸೂಚಿಸುತ್ತವೆ. ಕನ್ನಡ ವಿಭಕ್ತಿಪ್ರತ್ಯಯಗಳು ಒಂದು ಕಾಲಕ್ಕೆ ಸ್ವತಂತ್ರ ಶಬ್ದಗಳಾಗಿದ್ದುವೆಂಬುದನ್ನು ಗಮನಿಸಿದಾಗ ಅವನ್, ಅವರ್ ಎಂಬ ಶಬ್ದಗಳ ಸವೆದ ರೂಪಗಳೇ (ಅ)ನ್. (ಅ)ರ್ ಎಂಬುದು ಸ್ಪಷ್ಟವಾಗುತ್ತದೆ. ಮರನ್, ಕೊಳನ್ ಎಂಬಲ್ಲಿ ನಪುಂಸಕದಲ್ಲೂ 'ನ್' ಇದೆಯಲ್ಲವೆ? ಅದು ತಮಿಳು

ತೆಲುಗುಗಳಲ್ಲಿ ಮ್, ಮು ಎಂದೇ ಇದೆ. 'ಮ್' ನಪುಂಸಕವನ್ನು ಸೂಚಿಸುತ್ತದೆ. 'ಅಮ್' ಎಂಬುದು 'ಅದು' ಎಂಬರ್ಥದ ನಪುಂಸಕಲಿಂಗ ಸರ್ವನಾಮವೆಂದು ಡಾ. ಗುಂಡರ್ಟ್, ಡಾ. ಕಾಲ್ಡ್‌ವೆಲ್ ಹೇಳುತ್ತಾರೆ. ಇಲ್ಲಿ 'ನ್' ಸೇರಿರುವುದು ತಪ್ಪು ಎಂಬುದಕ್ಕೆ ಇತರ ವಿಭಕ್ತಿಗಳಲ್ಲಿ ತ್, ದ್, ಟ್ ಆಗಮವಾಗುವುದೆ ಸಾಕ್ಷಿ. ಮುತ್ತಿನ ಸರದೊಳ್, ಹಾರದ ಇತ್ಯಾದಿ. ಆದ್ದರಿಂದ ಮೂಲರೂಪ ಮರಮ್, ಕೊಳಮ್ ಎಂದೇ ಇರಬೇಕು. ಮರನ್, ಕೊಳನ್ ವಿಕಲ್ಪರೂಪ. ಹಾಗೇ ಪುಲ್ಲಿಂಗ 'ನ್' ಅಕ್ಕನ್ ಎಂಬಲ್ಲಿದೆ. ಇದಕ್ಕೆ ಉತ್ತರಿಸುವುದು ಕಷ್ಟವಾದರೂ ಸಾಮ್ಯವಿಧಿ ಇಲ್ಲಿ ಕೆಲಸ ಮಾಡಿರಬೇಕು ಅಥವಾ 'ಅಕ್ಕನ್' ಎಂಬುದೇ ಪ್ರಕೃತಿ ರೂಪವಿರಬಹುದು. ಏಕೆಂದರೆ ಅಣ್ಣಂದಿರು, ಅಕ್ಕಂದಿರು, ಅಣ್ಣಂಗಳ್, ಅಕ್ಕಂಗಳ್ ಎಂಬಲ್ಲಿ ಅಣ್ಣನ್, ಅಕ್ಕನ್ ಮೇಲೆ ದಿರ್, ಗಳ್ ಬಹುವಚನ ಪ್ರತ್ಯಯ ಹತ್ತಿರುವುದನ್ನು ಗಮನಿಸಬಹುದು. ತಮಿಳು, ಮಲೆಯಾಳಂ ಭಾಷೆಗಳಲ್ಲಿ ಅಕಾರಾಂತ ಪುಲ್ಲಿಂಗ ಶಬ್ದಗಳನ್ನು ನಕಾರಾಂತವಾಗಿಯೂ, ನಪುಂಸಕ ಲಿಂಗದ ಶಬ್ದಗಳನ್ನು ಮಕಾರಾಂತವಾಗಿಯೂ ಮಾರ್ಪಡಿಸಿಕೊಂಡಿರುವುದರಿಂದ ಆ ಭಾಷೆಯ ವೈಯಾಕರಣರು ಪ್ರಕೃತಿಯೇ ಪ್ರಥಮೆಯ ರೂಪವೆಂದಿರುವುದು ಸರಿಯಾಗಿದೆ. ಆದರೆ ಕನ್ನಡದಲ್ಲಿ ಅಕಾರಾಂತ ಶಬ್ದಗಳು ಲಿಂಗವಿಕರಣದೊಡನೆಯೂ, ಉಳಿದುವು ಪ್ರಕೃತಿರೂಪದಲ್ಲಿಯೂ ಪ್ರಥಮಾವಿಭಕ್ತಿಯಲ್ಲಿ ಪ್ರಯೋಗವಾಗುತ್ತವೆ ಎನ್ನುವುದು ಸರಿ.

**ಹೊಸಗನ್ನಡ ಪ್ರಥಮೆ 'ಉ' ವಿಚಾರ:** ಹೊಸಗನ್ನಡ ವ್ಯಾಕರಣಗಳಲ್ಲಿ ಪ್ರಥಮಾ ವಿಭಕ್ತಿ 'ಉ' ಎಂದು ಹೇಳಿದೆ. ಹಳಗನ್ನಡದಲ್ಲಿ ಅಕಾರಾಂತ ಪುಲ್ಲಿಂಗಕ್ಕೆ 'ನ್', ನಪುಂಸಕಕ್ಕೆ 'ಮ್', ಮಿಕ್ಕೆಡೆ ಪ್ರಕೃತಿಯೇ ಪ್ರಯೋಗದಲ್ಲಿದ್ದುದನ್ನು ನೋಡಿದ್ದೇವೆ. ಈ 'ಉ'ಕಾರ ಹೇಗೆ ಬಂದಿತು? ನಕಾರಾಂತ ಪ್ರಕೃತಿ ಶಬ್ದಗಳು ನಡುಗನ್ನಡದಲ್ಲಿ ಉಕಾರಾಂತವಾದುವು—ವ್ಯಂಜನಾಂತ ಶಬ್ದಗಳೆಲ್ಲ ಸ್ವರಾಂತವಾದುದರಿಂದ. ಬೆರಲ್ > ಬೆರಳು, ಕಣ್ > ಕಣ್ಣು, ಉಸಿರ್ > ಉಸಿರು ಇತ್ಯಾದಿ. ಹಾಗೇ ರಾಮನ್ > ರಾಮನು, ಭೀಮನ್ > ಭೀಮನು ಆದುವು. ಮರಂ, ಕೊಳಂ ಮೊದಲಾದುವುಗಳ 'ಮ್'ಗೆ 'ವ'ಕಾರಾದೇಶವಾಗಿ ಮರವು, ಕೊಳವು ಎಂದಾದುವು. ನಡುಗನ್ನಡದಲ್ಲಿ ವೃಕ್ಷವು ಶಬ್ದ ಸಿಗುತ್ತದೆ. ಹೀಗೆ ಅಕಾರಾಂತಕ್ಕೆ ಮಾತ್ರ ಸೇರುತ್ತಿದ್ದ ನ್, ಮ್ > ನು, ವು ಆಗಿ, ಎಲ್ಲ ಶಬ್ದಗಳಿಗೂ 'ಉ'ಕಾರ ಸೇರಿಸಲಾಯಿತು, 'ಮ್' ಎಂಬುದು ಪ್ರಥಮಾ ವಿಭಕ್ತಿ ಪ್ರತ್ಯಯ ಎಂಬ ಭ್ರಮೆಯಿಂದ. ಹಳಗನ್ನಡ ವ್ಯಂಜನಾಂತ ಶಬ್ದಗಳೆಲ್ಲವೂ 'ಉ' ಸ್ವರಾಂತವಾಗಿವೆ, ಅಷ್ಟೆ. ಎಂಟು, ಒಂಬತ್ತನೇ ಶತಮಾನದ ವೇಳೆಗೇ ಆಡುನುಡಿಯಲ್ಲಿ ಉಕಾರಾಂತ ಶಬ್ದಗಳಿದ್ದುವೆಂಬುದಕ್ಕೆ ಶಾಸನಗಳಲ್ಲಿ ಪ್ರಯೋಗವಿದೆ: ಗಾವುಣ್ಡರು, ಪಾರ್ವ್ವರು, ಅಯ್ಯಣ್ಣನು, ವಾರಣಾಸಿಯುಂ, ಕೆಱೆಯುಂ ಇತ್ಯಾದಿ. ಈಗ ಹೊಸಗನ್ನಡದಲ್ಲಿ ಗ್ರಾಂಥಿಕ ಭಾಷೆಯಲ್ಲಿ

ಮಾತ್ರ ಉಳಿದಿದೆ, ಆಡುನುಡಿಯುಲ್ಲಿಲ್ಲ. ನಗರಗಳ ದೇವಾಂಗ ಮೊದಲಾದ ಸಮುದಾಯುದವರಲ್ಲಿ ಮಾತ್ರ ಕ್ವಚಿತ್ ಪ್ರಯೋಗವಿದೆ. ಉಳಿದಂತೆ ಆಡುನುಡಿಯಲ್ಲಿ ಪ್ರಕೃತಿಯೇ ಪ್ರಥಮೆಯಾಗಿ ಪ್ರಯೋಗವಾಗುತ್ತಿದೆ. ಇತ್ತೀಚಿನ ತಲೆಮಾರಿನ ಬರಹಗಾರರೂ ಪ್ರಕೃತಿಯನ್ನೇ ಪ್ರಯೋಗಿಸುತ್ತಾರೆ.

**ದ್ವಿತೀಯಾ ವಿಭಕ್ತಿ :** ದ್ರಾವಿಡ ಭಾಷೆಗಳಾದ ತಮಿಳಿನಲ್ಲಿ ಐ (ಎನ್ನೈ) ಎಂದೂ, ತೆಲುಗಿನಲ್ಲಿ ನು, ನಿ (ನನ್ನು, ದರಿದ್ರುನಿ) ಎಂದೂ, ಮಲೆಯಾಳಂನಲ್ಲಿ ಎ (ಮರತ್ತೆ) ಎಂದೂ, ತುಳುವಿನಲ್ಲಿ ನು (ಮರೊನು) ಎಂದೂ, ಹಳಗನ್ನಡದಲ್ಲಿ 'ಅಂ' ಎಂದೂ ದ್ವಿತೀಯಾ ವಿಭಕ್ತಿ ಪ್ರತ್ಯಯ ಇವೆ. ಪೂರ್ವದ ಹಳಗನ್ನಡದಲ್ಲಿ ಆನ್, ಅನ್, ಅಮ್, ಆ, ಅ ಹೀಗೆ ಐದು ಪ್ರತ್ಯಯಗಳ ಪ್ರಯೋಗವನ್ನು ಕಾಣಬಹುದು. ಉದಾ : ಇದಾನ್, ದತ್ತಿಯಾನ್, ಕೋಟಿಯನ್, ಪುರಮನ್, ಪಲ್ಲವರಂ, ಕಟವಪ್ರವಂ, ಪೂರ್ವಮರಿಯಾದಯಾ, ಈ ಕಟನಿ ಫಲಮಾ, ಈ ಕಯ್ಯ ಪೊಕ್ಕು ಕಾದೆನ್ದು ಬೆಸಸೆ ಇತ್ಯಾದಿ. ಒಂದೇ ಶಾಸನದಲ್ಲಿ ಎರಡು ಮೂರು ಬಗೆಯ ಪ್ರತ್ಯಯ ಬಂದಿರುವುದುಂಟು. ಹಳಗನ್ನಡದಲ್ಲಿ ಆನ್ ದೀರ್ಘ ಪ್ರಯೋಗ ಕಡಮೆ. ಹಳಗನ್ನಡ ವ್ಯಾಕರಣಗಳಲ್ಲಿ 'ಅನ್'ಗೆ ದೀರ್ಘಾದೇಶ ಉಂಟು ಎನ್ನಲಾಗಿದೆ. ಒಟ್ಟನಲ್ಲಿ ಹ.ಗ.ದಲ್ಲಿ ಅನ್, ಅಂ ಗಳೇ ರೂಢಿಗೆ ಬಂದುವು. ಅದರಲ್ಲೂ ಅನ್ ಎಂಬುದೇ ಮೂಲ ದ್ವಿತೀಯಾ ಪ್ರತ್ಯಯವಿರಬೇಕು. ಏಕೆಂದರೆ ಸ್ವರ ಪರವಾದಾಗ 'ನ'ಕಾರವಾಗುತ್ತದೆ. ಇತರ ದ್ರಾವಿಡ ಭಾಷೆಗಳಲ್ಲಿ 'ಮ್' ಇಲ್ಲ, 'ನ್' ಇದೆ. ಉದಾ : ಕುರುಖ್ : ಕುಕೋಸ್–ಕುಕೋಸಿನ್, ಮುಕ್ಕಾ–ಮುಕ್ಕಾನ್ ಹುಡುಗ ನನ್ನು ಹೆಂಗುಸನ್ನು; ಗೊಂಡಿ : ಮರ್ರಿ–ಮರ್ರಿನ್ ಮಗನನ್ನು. ಹಳಗನ್ನಡದ 'ಅನ್' ನಡುಗನ್ನಡದಲ್ಲಿ 'ಅನು' ಆಗಿದೆ, ಅಮು ಆಗಿಲ್ಲ. ಹೊಸಗನ್ನಡ ಬರವಣಿಗೆ ಯಲ್ಲಿ 'ಅನ್ನು' ಎಂದೂ, ಆಡುನುಡಿಯಲ್ಲಿ 'ಅನ್ನ' ಎಂದೂ ಇದೆ.

'ಅ' ಪ್ರತ್ಯಯ ನಡುಗನ್ನಡ ಹೊಸಗನ್ನಡಗಳಲ್ಲಿ ಮಾತ್ರವಲ್ಲ ಪ್ರಾಚೀನ ಕನ್ನಡದಲ್ಲೂ ಕಂಡುಬರುತ್ತದೆ. ಇಲ್ಲೆಲ್ಲಾ 'ಅನ್' ಎಂಬುದರ ಅಂತ್ಯವ್ಯಂಜನ ಲೋಪವಾಗಿರಬೇಕು. ಪಂಪಭಾರತದಲ್ಲಿ "ತೆಂಕನಾಡ ಮರೆಯಲ್ಕಿನ್ನೇಂ ಮನಂ ಬರ್ಕುಮೆ" ಪ್ರಯೋಗವಿದೆ. ಕೇಶಿರಾಜ "ನೀನೆನ್ನ ಕೊಂದಯ್" ಪ್ರಯೋಗ ಉದಾಹರಿಸಿ, ಅಲ್ಲಿ ದ್ವಿತೀಯಾರ್ಥದಲ್ಲಿ ಷಷ್ಠೀ ಪ್ರಯೋಗವಾಗಿದೆ ಎನ್ನುತ್ತಾನೆ. ಇದನ್ನು ವಿಭಕ್ತಿಪಲ್ಲಟ ಎನ್ನುವುದಕ್ಕಿಂತಲೂ ಅಂತ್ಯವ್ಯಂಜನ ಲೋಪ ಎನ್ನಬಹುದು. ಕೊನೆಗೆ, ಅಕಾರವೂ ಹೋಗಿ ಪ್ರಕೃತಿರೂಪದಲ್ಲಿಯೇ ಹೊಸಗನ್ನಡದಲ್ಲಿ ದ್ವಿತೀಯೆ ಎಷ್ಟೋ ವೇಳೆ ಪ್ರಯೋಗವಾಗುತ್ತಿರುವುದನ್ನು ಕಾಣಬಹುದು : ಹಣವಂ> ಹಣವ>ಹಣಅ>ಹಣಾ>ಹಣ. ಕುರಿ ಕಾಯಿ, ರೂಪಾಯಿ ಕೊಡು, ಮನೆ ಕಟ್ಟು ಇತ್ಯಾದಿ. ಅಥವಾ ಪ್ರಕೃತಿ ಸ್ವರ ದೀರ್ಘಮಾಡಿ ದ್ವಿತೀಯಾರ್ಥ ತರುವುದುಂಟು : ಕರೂ ಬಿಡು, ತಿಂಡೀ ಕೊಡು, ಪುಸ್ತಕಾ ಎಲ್ಲಿ, ಹೊಳೇ ದಾಟು ಇತ್ಯಾದಿ.

ಹೀಗೆ ಹೊಸಗನ್ನಡದಲ್ಲಿ 'ಅನ್ನು' ಪ್ರತ್ಯಯವಲ್ಲದೆ, ಪ್ರಕೃತಿರೂಪ ಹಾಗೂ ಅಂತ್ಯಸ್ವರ ದೀರ್ಘ ದ್ವಿತೀಯ ವಿಭಕ್ತಿಯ ವೈಶಿಷ್ಟ್ಯವಾಗಿದೆ.

**ತೃತೀಯಾ ವಿಭಕ್ತಿ:** ಹಳಗನ್ನಡದಲ್ಲಿ ತೃತೀಯಾ ವಿಭಕ್ತಿ ಪ್ರತ್ಯಯ ಇಂ, ಇಂದ, ಇಂದೆ, ಆದೇಶವಾಗಿ 'ಎ' ಎಂದಿವೆ; ನಡುಗನ್ನಡದಲ್ಲಿ ಇಂ, ಇಂದಂ, ಇಂದ, ಇಂದೆ: ಹೊಸಗನ್ನಡದಲ್ಲಿ ಇಂದ. (ಹಳೆಯ ತಮಿಳಿನಲ್ಲಿ 'ಇನ್' ಇವೆ: ನಿನ್ನಿಜ್ಞಂದ. ಬಡಗದಲ್ಲಿ 'ಎಂದ್', ತೋದದಲ್ಲಿ 'ಎದ್ಟ' ಎಂದೂ ಇರುವುದನ್ನು ಗಮನಿಸಬೇಕು. ಆದ್ದರಿಂದ ತೃತೀಯೆ, ಪಂಚಮೀ ಎರಡೂ ಒಂದೇ ಆಗಿದ್ದು ಅವುಗಳ ಮೂಲ 'ಇನ್' ಇದ್ದಿರಬಹುದು). ವಿಭಕ್ತಿ ಪಲ್ಲಟವಾಗುವಾಗ ತೃತೀಯೆಗೆ ಪಂಚಮೀ, ಪಂಚಮೀಗೆ ತೃತೀಯೆ ಉಂಟೆಂದು ವ್ಯಾಕರಣದಲ್ಲಿ ಹೇಳಿದೆ. ಹೊಸಗನ್ನಡದಲ್ಲಿ 'ಇಂದಂ' ನಲ್ಲಿಯ ಅಂತ್ಯಬಿಂದು ಲೋಪವಾಗಿ ಇಂದ ಎಂಬ ಒಂದೇ ಪ್ರತ್ಯಯ ರೂಢಿಯಲ್ಲಿದೆ.

ಪ್ರಥಮಾ, ದ್ವಿತೀಯಾ, ಚತುರ್ಥೀ, ಷಷ್ಠೀ ವಿಭಕ್ತಿಗಳನ್ನು ಒಂದು ಗುಂಪಾಗಿಯೂ ತೃತೀಯಾ, ಪಂಚಮೀ, ಸಪ್ತಮೀಗಳನ್ನು ಇನ್ನೊಂದು ಗುಂಪಾಗಿಯೂ ಪರಿಗಣಿಸುವುದುಂಟು. ಇದಕ್ಕೆ ಮುಖ್ಯ ಕಾರಣ ಈ ಮೂರು ವಿ.ಪ್ರ.ಗಳು ಷಷ್ಠೀ ಮೇಲೆ ಸೇರುವುದಾಗಿದೆ. ಅಲ್ಲದೆ, ಕನ್ನಡ ತೃತೀಯಾ ವಿಭಕ್ತಿ 'ಇಂ'ನ ಮೂಲರೂಪ 'ಇನ್' ತಮಿಳಿನಲ್ಲಿ ಪಂಚಮೀ ಪ್ರತ್ಯಯವಾಗಿದೆ (ಮರತ್ತಿನ್). ಕನ್ನಡದ ಸಪ್ತಮೀ ವಿ.ಪ್ರ.ಗಳಾದ ಒಳ್, ಅಲ್ಲಿ ಎಂಬುದರ 'ಅಲ್ಲಿ'ಯ ಮೂಲ 'ಅಲ್' ತಮಿಳು, ಮಲೆಯಾಳಂಗಳಲ್ಲಿ ತೃತೀಯಾ ವಿಭಕ್ತಿ ಪ್ರತ್ಯಯವಾಗಿದೆ. (ತಮಿಳು: ಮರತ್ತಾಲ್, ಮರತ್ತಿನಾಲ್. ಮಲೆಯಾಳಂ: ಮರತ್ತಾಲ್). ತಮಿಳಿನಲ್ಲಿ ತೃತೀಯೆ ಆನ್, ಆಲ್ ಎಂದು ಎರಡೂ ಇವೆ. ಈ ಮೂರೂ ವಿಭಕ್ತಿಗಳು ದ್ರಾವಿಡ ಭಾಷೆಗಳಲ್ಲಿ ಅದಲು ಬದಲಾಗಿರುವುದನ್ನೂ ಒಂದೊಂದು ಭಾಷೆಯಲ್ಲಿ ಬೇರೆ ಬೇರೆ ಇರುವುದನ್ನು ಗಮನಿಸಬಹುದು. (ತೆಲುಗಿನಲ್ಲಿ ಚೇ, ನ ಗಳಿವೆ)

**ಚತುರ್ಥೀ ವಿಭಕ್ತಿ:** ಹಳಗನ್ನಡದಲ್ಲಿ ಗೆ, ಗ್ಗೆ, -ಂಗೆ, ಕೆ, ಕ್ಕೆ ಚತುರ್ಥೀ ಪ್ರತ್ಯಯಗಳೆಂದು ಕೇಶಿರಾಜ ಹೇಳಿದ್ದಾನೆ. ಇವು ಪೂ.ಹ.ಗ.ದಲ್ಲಿಯೂ ಇವೆ. ಉದಾ: ಪೆಣ್ಗೆ, ಕುರುಳ್ಗೆ, ಬುಧರ್ಗ್ಗೆ, ಕಾಂತೆಯರ್ಗ್ಗೆ; ಅಕಾರಾಂತ ಪುಲ್ಲಿಂಗದಲ್ಲಿ ಬಿಂದುಸಮೇತ: ಅರಸಂಗೆ, ಆತಂಗೆ; ಬನಕೆ, ಪೊಲಕ್ಕೆ ಇತ್ಯಾದಿ. ಹೊಸಗನ್ನಡದಲ್ಲಿ ಗೆ, ಇಗೆ, ಕ್ಕೆ, ಅಕ್ಕೆ ಎಂದಿವೆ. ಅಕಾರಾಂತ ಪುಲ್ಲಿಂಗದಲ್ಲಿ ಬರುವ ಬಿಂದು ಲಿಂಗಸೂಚಕ: ಸುತನ್ಗೆ, ಅಟುವೊನ್ಗೆ ಇತ್ಯಾದಿ. ಸಂಯುಕ್ತಾಕ್ಷರಗಳು ಹೊಸಗನ್ನಡದಲ್ಲಿ ಸ್ವರ ಪಡೆಯುತಿದ್ದ ಕಾರಣ (ಸ್ವರಭಕ್ತಿ–ನೋಡಿ) 'ಇಗೆ' ಪ್ರತ್ಯಯ ರೂಢಿಗೆ ಬಂದಿತು: ಭೀಮನ್ಗೆ–ಭೀಮನಿಗೆ, ಅರಸನ್ಗೆ–ಅರಸನಿಗೆ, ಕುರುಳ್ಗೆ–ಕುರುಳಿಗೆ.

ಇತರ ದ್ರಾವಿಡ ಭಾಷೆಗಳಲ್ಲಿ 'ಕು' ಪ್ರತ್ಯಯವಿದೆ. ತಮಿಳು, ಮಲೆಯಾಳಂಗಳಲ್ಲಿ 'ಕ್ಕು' (ಮನೈಕ್ಕು, ಕುಳಕ್ಕು–ಹಳೆಯ ತಮಿಳು. ಈಗಿನ ತಮಿಳಿನಲ್ಲಿ 'ಕುಳತ್ತುಕ್ಕು' ಎಂದಾಗುತ್ತದೆ); ತೆಲುಗಿನಲ್ಲಿ ಕು, ಕಿ (ತಲಕು, ತಲ್ಲಿಕಿ); ತುಳುವಿನಲ್ಲಿ ಕು, ಗು (ಮರಕು); ತೊದದಲ್ಲಿ ಕ, ಗ. ಇವನ್ನು ಗಮನಿಸಿದಾಗ ದ್ರಾವಿಡ ಭಾಷೆಯ ಚತುರ್ಥೀ ಪ್ರತ್ಯಯ 'ಕು' ಎಂಬುದು ಸ್ಪಷ್ಟವಾಗುತ್ತದೆ. ಇದು ಹೇಗೆ ಬಂದಿತೆಂಬುದಕ್ಕೆ ಸ್ಪಷ್ಟ ಉತ್ತರ ಸಿಗುವುದಿಲ್ಲ. ಡಾ. ಕಾಲ್ಡ್‌ವೆಲ್ ಒಂದು ಸೂಚನೆ ಕೊಡುತ್ತಾರೆ. ಆಖ್ಯಾತ ಪ್ರತ್ಯಯಗಳೂ ವಿಭಕ್ತಿ ಪ್ರತ್ಯಯಗಳೂ ಒಂದೇ ಮೂಲದಿಂದ ಬಂದಿರಬಹುದು. ಭವಿಷ್ಯತ್ತಿನಲ್ಲಿ ಗುಂ, ಕುಂ ಆದೇಶವಾಗಿ ಬರುತ್ತದೆ ಎನ್ನಲಾಗಿದೆ. ಉದಾ: ಬಿಸುಸುಯ್ಗುಂ, ಗೆಲ್ಗುಂ, ಮಾಳ್ಕುಂ ಇತ್ಯಾದಿ. ತಮಿಳಿನಲ್ಲೂ ಈ ರೂಪವಿದೆ: ಶೆಯ್ಗುಂ. ಹಾಗೇ ಕೃದಂತಾಮದಲ್ಲೂ ಕಕಾರ ಬರುತ್ತದೆ: ಕಾಣ್–ಕಾಣ್ಕೆ, ಒಡೆ–ಒಡಕು, ಮುಳ–ಮುಳುಕು, ಉಡು–ಉಡುಗೆ, ಕೊಡು–ಕೊಡುಗೆ. ತಮಿಳಿನ ವಡಕ್ಕು, ಕಿಟಕ್ಕು (ಕನ್ನಡದ ಮೇಲಕ್ಕೆ, ಕೆಳಕ್ಕೆ ಸಹ) ಎಂಬಲ್ಲಿ 'ಕ್ಕು' ದಿಗ್ವಾಚಿಯಾಗಿದೆ. ಇವೆಲ್ಲ ಒಂದೇ ಮೂಲವಿರಬಹುದೆ? ಅದು ಇದು ಉದು ವಸ್ತುವಾಚಕ ಸರ್ವನಾಮಗಳು, ಅಲ್ಲಿ ಇಲ್ಲಿ ಎಲ್ಲಿ ಸ್ಥಳವಾಚಕಗಳು, ಅತ್ತ ಇತ್ತ ಎತ್ತ ದಿಗ್ವಾಚಕಗಳು. ಇವುಗಳ ಮೂಲ ಅ ಇ ಉ (ಎ) ಎಂಬುವು. ಹಾಗೇ 'ಕು' ದಿಕ್ಸೂಚನೆಯ ಅರ್ಥದಿಂದ ಚತುರ್ಥಿಯ ಅರ್ಥ ಪಡೆದಿರಬಹುದೆ? ಇನ್ನಿತರ ಕೆಲವು ವಿದ್ವಾಂಸರು ಕಯ್ (ಕೈ hand) ನಿಂದ ಚತುರ್ಥಿಯ 'ಕೆ' ಬಂದಿದೆ ಎನ್ನುತ್ತಾರೆ. ಇದು ಸಂಪ್ರದಾನಕಾರಕ ತಾನೆ–ಕೊಡುವುದು 'ಕೈಗೆ' ಎಂಬುದು ಕಾಲಕ್ರಮೇಣ (ರಾಮನ ಕೈಗೆ ಕೊಡು>ರಾಮನಿಗೆ ಕೊಡು) ಸ್ವತಂತ್ರ ಶಬ್ದವಾಗಿದ್ದುದು 'ಕೆ' ಆಗಿರಬೇಕೆಂದು ಊಹೆ. ಆದರೆ 'ಮನೆಗೆ ಹೋಗು' ಎನ್ನುವಾಗ ದಿಗ್ವಾಚಿಯೇ ಆಗುವುದಿಲ್ಲವೆ. 'ಕು' ಸಹಜ ದ್ರಾವಿಡ ಭಾಷೆಗಳಲ್ಲಿದೆ.

**ಪಂಚಮೀ ವಿಭಕ್ತಿ ಕನ್ನಡದಲ್ಲಿದೆಯೇ? :** ತೃತೀಯಾ ವಿಭಕ್ತಿ ವಿವೇಚನೆಯ ಸಂದರ್ಭದಲ್ಲಿ ಪಂಚಮೀ ವಿಭಕ್ತಿಯ ಅರ್ಥದಲ್ಲಿಯೇ ತೃತೀಯಾ ವಿಭಕ್ತಿಯು ಪ್ರಯೋಗವಾಗುವುದನ್ನು ಹೇಳಿದೆ. ಕೇಶಿರಾಜನ ಪ್ರಕಾರ ಹಳಗನ್ನಡವಲ್ಲಿ 'ಅತ್ತಣಿಂ' ಪಂಚಮೀ ಪ್ರತ್ಯಯ. ಹೊಸಗನ್ನಡದ ಕೆಲವು ವ್ಯಾಕರಣಗಳಲ್ಲಿ 'ದೆಸೆಯಿಂದ' ಎಂಬುದನ್ನು ಪಂ.ವಿ. ಪ್ರತ್ಯಯ ಎಂದು ಹೇಳಲಾಗಿದೆ. ಸಂಸ್ಕೃತ ವ್ಯಾಕರಣದ ಅನುಕರಣೆಯಿಂದ ಪಂಚಮೀ ವಿಭಕ್ತಿಯನ್ನು ಹೇಳಿದ್ದಾರೆಯೇ ಹೊರತು ಸಹಜವಾಗಿ ದ್ರಾವಿಡ ಭಾಷೆಗಳಲ್ಲಿ ಇಲ್ಲ. ಅತ್ತಣಿಂ, ದೆಸೆಯಿಂದ ಪ್ರತ್ಯಯಗಳಲ್ಲಿನ ಅತ್ತಣ, ದೆಸೆ ಸ್ವತಂತ್ರ ದಿಗ್ವಾಚಕ ಶಬ್ದಗಳು; ಪ್ರತ್ಯಯಗಳಲ್ಲ. ಅವುಗಳ ಮೇಲೆ ಇಂ, ಇಂದ ಎಂಬ ತೃತೀಯಾ ಪ್ರತ್ಯಯಗಳು ಸೇರಿವೆ. ಆಧುನಿಕ ಭಾಷಾ ಶಾಸ್ತ್ರಜ್ಞರೂ ಪಂಚಮೀ ಪ್ರತ್ಯಯವಿಲ್ಲ ಎನ್ನುತ್ತಾರೆ. ತಮಿಳು

ಮಲೆಯಾಳಂ ತೆಲುಗುಗಳಲ್ಲೂ ಸಂಸ್ಕೃತ ಅನುಸರಣೆಯಿಂದ ಪಂಚಮಿಯನ್ನು ಹೇಳಲಾಗಿದೆ.

**ಷಷ್ಠೀ ವಿಭಕ್ತಿ :** ಹಳಗನ್ನಡದಲ್ಲಿ ಅ, ಆ ; ನಡುಗನ್ನಡ ಹೊಸಗನ್ನಡಗಳಲ್ಲಿ 'ಅ' ಮಾತ್ರ ಷಷ್ಠೀ ವಿಭಕ್ತಿ ಪ್ರತ್ಯಯವಾಗಿದೆ. ಪೂರ್ವದ ಹಳಗನ್ನಡದಲ್ಲಿ ದೀರ್ಘ 'ಆ' ಹೆಚ್ಚಾಗಿ ಕಾಣಬರುತ್ತದೆ. ಉದಾ : ನೃಪನಾ, ಬಂಧುಜನದಾ, ನಂದನನಾ ಇತ್ಯಾದಿ. ತಮಿಳು ತೆಲುಗು ಮಲೆಯಾಳಂಗಳಲ್ಲೂ 'ಅ' ಪ್ರತ್ಯಯವೇ ಷಷ್ಠಿಯಲ್ಲಿದೆ. ಈ 'ಅ' ಪ್ರತ್ಯಯ 'ಅದು' ಎಂಬುದರ ಸವೆದ ರೂಪವಿರಬೇಕು. ಕೆಲವೊಮ್ಮೆ ಕನ್ನಡವಲ್ಲಿ ಷಷ್ಠ್ಯರ್ಥದಲ್ಲಿ ಅದು, ಅತ್ತು, ಅತು ಪ್ರಯೋಗವಾಗುತ್ತವೆ. ಉದಾ : ನಿನ್ನದು, ನಿನತ್ತು, ನಿನತು, ತನತು. ಈ ರೀತಿ ತಮಿಳಿನಲ್ಲೂ ಉಂಟು : ಮರತ್ತಿನದು, ಮರತ್ತಿನ, ಮರತ್ತಿನಾದು ತಮಿಳಿನಲ್ಲಿ 'ಉಡೈಯ' ಸಹ ಇದೆ : ಇರಾಮನುಡೈಯ. ತೆಲುಗಿನಲ್ಲಿ ಯೊಕ್ಕ, ಲೋ, ಸಹ ಇವೆ. ಚೆಟ್ಟುಯೊಕ್ಕ, ಏಟಿಲೋ (ತೆಲುಗಿನ 'ಲೋ' ಸಪ್ತಮಿಯೇ ಸರಿ, ಕನ್ನಡದ ಉಳ್, ಒಳ್‌ಗಳಂತೆ). ಮಲೆಯಾಳಂನಲ್ಲೂ 'ಉಡೆ' ಇದೆ : ಮರತ್ತಿನುಡೆ, ಮರಙ್ಙಳುಡೆ.

ಷಷ್ಠಿಯ 'ಅ' ಸೇರುವ ಮುನ್ನ ಕನ್ನಡ ಅಕಾರಾಂತ ಪುಲ್ಲಿಂಗದಲ್ಲಿ 'ನ್', ನಪುಂಸಕ ಲಿಂಗದಲ್ಲಿನ 'ದ್' ವಿಕರಣಗಳು ಸೇರುತ್ತವೆ : ರಾಮ+ನ್+ಅ=ರಾಮನ, ಮರ+ದ್+ಅ=ಮರದ. ಇತರೆಡೆ ಸಂಧಿ ನಿಯಮಗಳಂತೆ ಯ, ವ, ಇನಾಗಮಗಳಾಗುತ್ತವೆ. ಉದಾ : ಮನೆ+ಅ ಮನೆಯ, ಮಗು+ಇನ್+ಅ=ಮಗುವಿನ.

**ಸಪ್ತಮೀ ವಿಭಕ್ತಿ:** ಹೊಸಗನ್ನಡದಲ್ಲಿ ಒಳಗೆ, ಅಲ್ಲಿ; ನಡುಗನ್ನಡದಲ್ಲಿ ಒಳ್, ಒಳು, ಒಳಗೆ, ಅಲು, ಆಲಿ, ಅಲ್ಲಿ; ಹಳಗನ್ನಡದಲ್ಲಿ ಒಳ್, ಒಳಗೆ, ಅಲ್ಲಿ, ಎ; ಪೂರ್ವದ ಹಳಗನ್ನಡವಲ್ಲಿ ಇದೇ ಅಲ್ಲದೆ (ಒಳಗೆ ಹೊರತಾಗಿ) ಉಳ್, ಉಳ್ಳೆಗಳೂ ಇವೆ. ಉದಾ : ನಾಡುಳ್, ವೆಟ್ಟದುಳ್, ಶ್ರೀ ಸಂಘದುಳ್ಳೆ, ಕಟ್ವಪ್ಪಿನುಳ್ಳೆ, ಸಮಾಧಿಯೊಳ್, 'ಭಟ್ಟರ್ಗೆ ಗದ್ದೆ ಒಡ್ಡಲಿ ಆಪತೊನ್ದು ವಿಟ್ಟಾರಕರ (ಹಲ್ಮಿಡಿ ಶಾಸನ), 'ಮನವೆ ನೆನೆವೋರುಂ' ಇತ್ಯಾದಿ.

ತಮಿಳಿನಲ್ಲಿ ಉಳ್, ಇಲ್ ಎಂದೂ (ಮನೈಯುಳ್, ವಚನತ್ತಿಲ್), ತೆಲುಗಿನಲ್ಲಿ ಲೋ, ಅಂದು, ನಗಳು (ಇಂಟಿಲೋ, ಮ್ರಾನಿಲೋ, ವಚನಮು-ನಂದು, ತೂರ್ಪುನ) ಸಪ್ತಮೀ ಪ್ರತ್ಯಯಗಳು. ಮಲೆಯಾಳಂನಲ್ಲಿ ಇಲ್ ಇದೆ (ಮರತ್ತಿಲ್).

ಉಳ್, ಉಳ್ಳೆ, ಒಳ್, ಮೊದಲಾದುವು ಮೂಲ 'ಉಳ್'ನಿಂದ ಬಂದುವು. ಉ>ಒ ಆಗುತ್ತದೆ. ಉಳ್+ಎ=ಉಳ್ಳೆ ಸಪ್ತಮ್ಯರ್ಥದ 'ಎ' ಸೇರಿ ಆಗಿದೆ. ತೆಲುಗಿನ 'ಲೋ' ಇದರ ಇನ್ನೊಂದು ಬದಲಾದ ರೂಪ. ಉಳ್ ಎಂಬ ಧಾತುವಿನಿಂದ ಉಳ್ಳ, ವಂತ ಬಂದಂತೆ 'ಉಳ್' ಪ್ರತ್ಯಯವೂ ಬಂದಿರಬೇಕು. ಉಳ್‌ನ

ಇನ್ನೊಂದು ರೂಪ 'ಉಡ್'ನಿಂದ ಒಡೆಯು ಆಗಿರುವುದನ್ನು ಗಮನಿಸಬೇಕು. ಹೊಸಗನ್ನಡದಲ್ಲಿ ಉಳ್ > ಒಳ್ > ಒಳಗು + ಎ ಸೇರಿ ಒಳಗೆ ಪ್ರತ್ಯಯು ಆಗಿದೆ.

ಅಲ್, ಅಲಿ, ಅಲ್ಲಿ ಪ್ರತ್ಯಯುಗಳ ಮೂಲ 'ಅಲ್' ಇರಬೇಕು. ಶಾಸನಗಳಲ್ಲಿ ಕಯ್ಯಲ್, ಮಠದಲ್ ಓದುವ ಎಂದೂ, ಪಂಪಭಾರತದಲ್ಲಿ 'ಕತ್ತುರಿಯಲ್ ಬರೆದಂತಪ್ಪ' ಎಂದೂ ಪ್ರಯೋಗಗಳಿವೆ. ತಮಿಳಿನ ತೃತೀಯಾ ಪ್ರತ್ಯಯ 'ಅಲ್'ನ ಮೂಲವೂ ಇದೇ ಇರಬೇಕು. ಈ 'ಅಲ್' ಎಂಬುದು ಅಲ್ಲಿ, ಇಲ್ಲಿ, ಎಲ್ಲಿ ಎಂಬ ಸ್ಥಳವಾಚಿಗಳಲ್ಲಿನ 'ಅಲ್ಲಿ' ಎಂಬುದರ ಮೂಲರೂಪವಿರಬೇಕು. ಅಲ್ ಎಂಬುದೇ ಅಲು, ಅಲಿ, ಅಲ್ಲಿ ಎಂದು ವಿವಿಧ ರೂಪ ತಾಳಿದೆ.

'ಎ' ಪ್ರತ್ಯಯು ತೃತೀಯಾ, ಸಪ್ತಮೀ ಎರಡು ವಿಭಕ್ತಿಗಳಲ್ಲೂ ಬರುತ್ತದೆ. ಇದು ಮೂಲತಃ ಸಪ್ತಮೀ ಪ್ರತ್ಯಯುವೆಂದು ಆಧುನಿಕ ಭಾಷಾ ತಜ್ಞರ ಅಭಿಪ್ರಾಯ. ಹೊಸಗನ್ನಡದಲ್ಲಿ 'ಎ' ಪ್ರತ್ಯಯ ಬಳಕೆಯಲ್ಲಿಲ್ಲ. ಇದು ವಿಶೇಷವಾಗಿ ನಪುಂಸಕ ಏಕವಚನದಲ್ಲಿ ಮಾತ್ರ ಪ್ರಯೋಗವಾಗಿರುವುದನ್ನು ಕಾಣಬಹುದು. 'ಎ'ನಲ್ಲಿ ಸ್ಥಾನ ಮತ್ತು ಕಾಲ ಸೂಚಿಸುವ ಶಕ್ತಿಯಿದ್ದು (ಸತಿಸಪ್ತಮಿ) ಬಹಳ ಪ್ರಾಚೀನ ಸಪ್ತಮೀ ಪ್ರತ್ಯಯುವಿರಬಹುದು ಎಂಬ ಅಭಿಪ್ರಾಯವಿದೆ. ಹವ್ಯಕರಲ್ಲಿ ಈಗಲೂ ಸಪ್ತಮಿಯಲ್ಲಿ 'ಎ' ಉಳಿದು ಬಂದಿದೆ.

ಉತ್ತರ ಕರ್ನಾಟಕದಲ್ಲಿ ಆಗ, ಆಗೆ ಪ್ರತ್ಯಯುಗಳು ಆಡುನುಡಿಯಲ್ಲಿ ಇವೆ. ಮನೆಯಾಗ. ಕೇರ್‍ಯಾಗ, ಹಾದ್ಯಾಗ ; ಮೈಸೂರು ಕಡೆ : ಅದರಾಗೆ, ಬಾವ್ಯಾಗೆ. ಇದು ಒಳಗೆ ಎಂಬುದರ ವಿಕೃತರೂಪ ಎಂದು ಕಿಟಿಲ್, ಕುಲಕರಣಿ ಹೇಳುತ್ತಾರೆ. ಅಥವಾ ಅಲ್ಲಿ ಮತ್ತು ಒಳಗೆ ಎರಡರ ಪ್ರಭಾವದಿಂದ ತಪ್ಪು ಸಾಹಚರ್ಯರೂಪ ಆಗಿರಬಹುದೇ ?

**ಸಂಬೋಧನಾ ವಿಭಕ್ತಿ :** ಕನ್ನಡದಲ್ಲಿಲ್ಲ. ಪ್ರಕೃತಿರೂಪವೇ ಅಥವಾ ಅಂತ್ಯಸ್ವರ ದೀರ್ಘದಿಂದ ಸೂಚಿತವಾಗುತ್ತದೆ. ಸಂಸ್ಕೃತ ಪ್ರಭಾವದಿಂದ 'ಏ' ದೀರ್ಘವನ್ನು ಬರವಣಿಗೆಯಲ್ಲಿ ಸೇರಿಸುತ್ತಿದ್ದರು, ಆಡುನುಡಿಯಲ್ಲಿಲ್ಲ. ಸಂಸ್ಕೃತದಲ್ಲಿ 'ಹೇ' ಸೇರಿಸುವುದರಿಂದ (ಹೇ ರಾಮಃ) ಆಗುತ್ತದೆ. ಉದಾ : ರಾಮ, ರಾಮಾ, ರಾಮನೇ. ತಮಿಳು, ತೆಲುಗುಗಳಲ್ಲಿ ಕನ್ನಡದಂತೆಯೇ ಕಾಣಬರುತ್ತದೆ. ದೇವ, ದೇವಾ, ದೇವನೇ ; ರಾಮುಡ, ರಾಮುೞ, ರಾಮುೞಾ. ಬಹುವಚನದಲ್ಲಿ 'ಇರ' ಪ್ರತ್ಯಯುವಾಗುತ್ತದೆ ; ದೇವರ್ಕಳಿರ, ನಂಟರಿರ. ತಮಿಳಿನಲ್ಲಿ ಇರ್, ಅಥವಾ ಈರ್ : ತೆವ್ವಿರ್, ಶಾಸ್ತ್ರೀರ್. ತೆಲುಗಿನಲ್ಲಿ ಆರ : ರಾಮುಲಾರ.

ವಿಭಕ್ತಿಪ್ರತ್ಯಯಗಳು ಸ್ವತಂತ್ರ ಶಬ್ದಗಳೇ ? : ಡಾ. ಕಾಲ್ಡ್‌ವೆಲ್ ಅವರು ದ್ರಾವಿಡ ಭಾಷೆಗಳ ವಿಭಕ್ತಿಪ್ರತ್ಯಯುಗಳು ಹಿಂದೊಮ್ಮೆ ಸ್ವತಂತ್ರ ಶಬ್ದಗಳಾಗಿರ ಬೇಕೆಂದೂ, ಅವು ಕಾಲಕ್ರಮದಲ್ಲಿ ಪ್ರತ್ಯಯುಗಳಾದುವೆಂದೂ ಹೇಳಿದ್ದಾರೆ. ಹಾಗೆ

ಹೇಳಲು ಈಗಲೂ ಆಧಾರ ಸಿಗುತ್ತವೆ. ಸಪ್ತಮಿಯ ಉಳ್, ಒಳ್, ಒಳಗೆ, ಅಲ್, ಅಲು, ಅಲ್ಲಿ, ರೂಪಗಳು ಉಳ್ ಮತ್ತು ಅಲ್ ಎಂಬ ಮೂಲದಿಂದ ಹುಟ್ಟಿದುವು ಎಂದು ನೋಡಿದ್ದೇವೆ. ಉಳ್ ಎಂದರೆ ಒಳಭಾಗ, ಅಲ್ ಎಂದರೆ ಸ್ಥಳ. ಇವು ಒಂದುಕಾಲಕ್ಕೆ ಸ್ವತಂತ್ರವಾಗಿ ಬಳಕೆಯಾಗುತ್ತಿದ್ದಿರಬೇಕು. ಈಗಲೂ 'ಒಳಗೆ ಇಲ್ಲ', 'ಅಲ್ಲಿ ಇದೆ' ಎಂಬ ಕಡೆ ಸ್ವತಂತ್ರ ಶಬ್ದಗಳಾಗಿ ಬಳಸುವುದನ್ನು ನೋಡಬಹುದು. ಷಷ್ಠಿಯ 'ಅ' ಪ್ರತ್ಯಯ 'ಅದು' ಎಂಬುದರಿಂದ ಹುಟ್ಟಿದ್ದು. ಎಲ್ಲ ವಿಭಕ್ತಿ ಪ್ರತ್ಯಯಗಳಿಗೂ ಹೀಗೇ ಮೂಲ ಹೇಳಲಾಗದಿದ್ದರೂ ಅವು ಮೂಲದಿಂದ ಈಗ ಬಹಳ ವ್ಯತ್ಯಾಸ ಹೊಂದಿವೆ ಎನ್ನಬಹುದು.

ಹಳಗನ್ನಡದ ಅನೇಕ ಪ್ರತ್ಯಯಗಳು ಹೊಸಗನ್ನಡದಲ್ಲಿ ಈಗಲೂ ಉಳಿದಿವೆ. ಚತುರ್ಥಿಯ ಕೆ, ಗೆ. ಮತ್ತೆ ಕೆಲವು ಅಂತ್ಯದಲ್ಲಿ ವ್ಯತ್ಯಾಸ ಹೊಂದಿವೆ. ಅನ್ > ಅನು > ಅನ್ನು ಇತ್ಯಾದಿ. ಕೆಲವು ರೂಢಿಯಿಂದ ಮರೆಯಾಗಿವೆ. 'ಇಂ' ಇತ್ಯಾದಿ.

## ೧೬. ಸರ್ವನಾಮಗಳು

ಸರ್ವನಾಮಗಳು ಭಾಷೆಯಲ್ಲಿ ಮೊಟ್ಟಮೊದಲು ಕಾಣಿಸಿಕೊಳ್ಳುವ ಶಬ್ದಗಳು ಎಂಬ ಅಭಿಪ್ರಾಯವಿದೆ. ಅದು, ಇದು, ಅವನು, ಇವನು ಮುಂತಾದ ದರ್ಶಕ ಸರ್ವನಾಮಗಳು ಪ್ರಾಚೀನವಾದುವು. ಆದ್ದರಿಂದಲೇ ಸಂಸ್ಕೃತ ವೈಯಾಕರಣರು ದರ್ಶಕ ಸರ್ವನಾಮಗಳನ್ನು ಪ್ರಥಮ ಪುರುಷ ಎಂದು ಕರೆದರು. ಇದೇ ತರ್ಕವನ್ನು ಇಂಗ್ಲಿಷಿಗೆ ಅನ್ವಯಿಸಿದರೆ ನಾನು, ನಾವು ಎಂಬುವು first person ಆಗುತ್ತವೆ. ಆದ್ದರಿಂದ ಕೆಲವು ವಿದ್ವಾಂಸರು ಉತ್ತಮ ಪುರುಷ ಸರ್ವನಾಮಗಳು ಮೊದಲು ಕಾಣಿಸಿಕೊಂಡುವು ಎನ್ನುತ್ತಾರೆ. ಏನೇ ಇರಲಿ ಸರ್ವನಾಮಗಳು ಭಾಷೆಯಲ್ಲಿ ಅತ್ಯಂತ ಮುಖ್ಯವಾದುವು. ಒಂದು ಭಾಷೆಯ ಮೇಲೆ ಬೇರೆ ಭಾಷೆಗಳ ಪ್ರಭಾವ ಎಷ್ಟೇ ಇದ್ದರೂ ಆ ಭಾಷೆಯಲ್ಲಿ ಸರ್ವನಾಮಗಳು ಮಾತ್ರ ಬದಲಾಗದೆ ಹಾಗೇ ಉಳಿಯುತ್ತವೆ. ಆದ್ದರಿಂದ ಭಾಷೆಗಳ ಪರಸ್ಪರ ಸಂಬಂಧ ತಿಳಿಯುವಾಗ ಸರ್ವನಾಮಕ್ಕೆ ಮೊದಲ ಸ್ಥಾನ.

**ಉತ್ತಮ ಪುರುಷ ಸರ್ವನಾಮಗಳು :** ಹಳಗನ್ನಡದಲ್ಲಿ ಎರಡು ಬಗೆಯ ಉತ್ತಮ ಪುರುಷ ಸರ್ವನಾಮಗಳನ್ನು ಕಾಣುತ್ತೇವೆ. ಆನ್, ಆಮ್ ಮತ್ತು ನಾನ್, ನಾಮ್. ಆನ್, ಆಮ್ ಎಂಬುವೇ ಹೆಚ್ಚು ರೂಢಿಯಲ್ಲಿದ್ದುವು. ನಡುಗನ್ನಡದಲ್ಲಿ ನಾನ್, ನಾವ್ ಹೆಚ್ಚು ಬಳಕೆಗೆ ಬಂದುವು. ಅವುಗಳಿಗೆ 'ಉ'ಕಾರ ಸೇರಿ ಹೊಸಗನ್ನಡದಲ್ಲಿ ಏಕವಚನದಲ್ಲಿ ನಾನು, ಬಹುವಚನದಲ್ಲಿ ನಾವು ಎಂಬುವು ಬಳಕೆಯಾಗುತ್ತಿವೆ. ಏಕವಚನದ 'ನಾನು'ವಿನ 'ನು' ಲೋಪವಾಗಿ ಆಡುಮಾತಿನಲ್ಲಿ 'ನಾ' ಎಂಬುದು ರೂಢಿಯಲ್ಲಿದೆ.

ದ್ರಾವಿಡ ಭಾಷೆಗಳ ಸರ್ವನಾಮಗಳೆಲ್ಲವೂ ದರ್ಶಕಸ್ವರಗಳಾದ ಆ, ಈ, ಊ (ಅ, ಇ, ಉ) ಗಳಿಂದಾದುವೆಂದು ಹೇಳಲಾಗಿದೆ. ಇದು ಪ್ರಥಮ ಪುರುಷ ಅವನ್, ಇವನ್, ಉವನ್‌ಗಳಿಗೆ ಹೊಂದಿಕೊಳ್ಳುತ್ತದೆ. ಆದರೆ ಉತ್ತಮ ಪುರುಷ ಮತ್ತು ಮಧ್ಯಮ ಪುರುಷ ಸರ್ವನಾಮಗಳೂ 'ಆ', 'ಈ' ದರ್ಶಕಗಳ ವಿಶಿಷ್ಟ ಉಚ್ಚಾರಣೆಯಿಂದ ಆದುವು ಎನ್ನುತ್ತಾರೆ. ಇಲ್ಲಿ ವಿಶಿಷ್ಟ ಉಚ್ಚಾರಣೆ ಎಂದರೆ ನಾಸಿಕೋಚ್ಚಾರಣೆಯಿಂದ ಕೂಡಿದ್ದು ಎಂದು. ಆ್ಯನ್, ಈ್ಯನ್ ಎಂಬುವುಗಳಿಂದ ದ್ರಾವಿಡ ಭಾಷೆಗಳ ಸರ್ವನಾಮಗಳು ರೂಪುಗೊಂಡುವೆಂಬುದು ಆ ವಿದ್ವಾಂಸರ ಅಭಿಪ್ರಾಯವಾಗಿದೆ.

| | ಉತ್ತಮ ಪುರುಷ | ಮಧ್ಯಮ ಪುರುಷ |
|---|---|---|
| ಕನ್ನಡ | ಆನ್ (ಎನ್), ನಾನ್ (ನನ್) | ನೀನ್ |
| ತಮಿಳು | ಯಾನ್, ನಾನ್ | ನೀ, ನೀವ್ |
| ಮಲಯಾಳಂ | ಞಾನ್ | ನೀ |

| | | |
|---|---|---|
| ತೆಲುಗು | ಏನು, ನೇನು | ನೀ, ನೀವು, ಈವು |
| ತುಳು | ಯಾನ್ | ಈ |
| ಕುಯಿ | ಆನು | ಈನು |
| ಕೊಡಗ | ನಾನ್ | ನೀನ್ |
| ಗೊಂಡಿ | ಅನ್ನಾ | ಇಮ್ಮಾ |
| ಕೋತ | ಆನೆ | ನೀ ಇತ್ಯಾದಿ. |

ಎರಡನೆಯದಾಗಿ, ದ್ರಾವಿಡ ಭಾಷೆಗಳ ಉತ್ತಮ ಪುರುಷದಲ್ಲಿ ಎರಡು ರೂಪಗಳಿವೆ. ಎದುರಿಗಿರುವವರನ್ನು ಒಳಗೊಂಡು, ಸೇರಿಸಿಕೊಂಡು ಹೇಳುವಾಗ Inclusive ಎಂದೂ, ಹಾಗೆ ಎದುಗಿರುವವರನ್ನು ಸೇರಿಸಿಕೊಳ್ಳದೆ ತಮ್ಮನ್ನು ಮಾತ್ರ ಕುರಿತು ಹೇಳಿದಾಗ Exclusive ಎಂದೂ ಹೇಳುತ್ತಾರೆ. ಇವನ್ನು ಸಮಾವೇಶಕ, ಅಸಮಾವೇಶಕ ಅಥವಾ ಸಸಮ್ಮುಖ, ಅಸಮ್ಮುಖ ಎಂದೂ ಹೇಳಬಹುದು. ಇದು ಬಹುವಚನದಲ್ಲಿ ಮಾತ್ರ. 'ಆಂ' ಎಂದಾಗ ಸಮಾವೇಶಕ 'ನಾಂ' ಎಂದಾಗ ಅಸಮಾವೇಶಕ. ಡಾ. ಕಾಲ್ಡ್‌ವೆಲ್ ಈ ಭೇದಕಲ್ಪನೆ ಕನ್ನಡದಲ್ಲಿಲ್ಲ ಎಂದಿದ್ದಾರೆ. ಆದರೆ ಜೂಲ್ಸ್‌ಬ್ಲಾಕ್ ಹೊರಗಿನ ಪ್ರಭಾವ ಕಾರಣವಾಗಿ ಹೊಸಗನ್ನಡ ಮತ್ತು ಬ್ರಾಹೂಈಗಳಲ್ಲಿ ಮಾತ್ರ ಇಲ್ಲ, ಹಳಗನ್ನಡದಲ್ಲಿತ್ತು ಎನ್ನುತ್ತಾರೆ. ಆರ್. ನರಸಿಂಹಾಚಾರ್ಯರು ಈ ಭೇದ ಕನ್ನಡದಲ್ಲಿದೆಯೆಂದು ಉದಾಹರಣೆ ಕೊಡುತ್ತಾರೆ.

| | ಹ.ಗ. | ಹೊ.ಗ. |
|---|---|---|
| ಸಮಾವೇಶಕ | ಆಂ | ನಾವು |
| ಅಸಮಾವೇಶಕ | ನಾಂ | ನಾವುಗಳು |

ಈ ವಿಷಯ ವಿವಾದಾಸ್ಪದ. ಉತ್ತಮ ಪುರುಷ ಬಹುವಚನದಲ್ಲಿ ಮಾತ್ರವಲ್ಲ ಕೆಲವು ಭಾಷೆಗಳಲ್ಲಿ ಏಕವಚನದಲ್ಲಿಯೂ ಎರಡೆರಡು ರೂಪಗಳಿರುವುದನ್ನು ಗಮನಿಸಬಹುದು. ಇನ್ನು ಕೆಲವು ಭಾಷೆಗಳಲ್ಲಿ ಒಂದೊಂದೇ ರೂಪ ಬಳಕೆಯಲ್ಲಿದೆ. ಆದ್ದರಿಂದ ಏಕವಚನದಲ್ಲಿ 'ಆನು, ನಾನು' ಎಂಬುದಕ್ಕೆ ಸಮಾವೇಶಕ, ಅಸಮಾವೇಶಕ ಎಂದು ಹೇಗೆ ಹೇಳುವುದು? ಪ್ರಾಚೀನ ತಮಿಳಿನಲ್ಲಿ ಈ ಭೇದಕಲ್ಪನೆ ಇರಲಿಲ್ಲ. ಹಳಗನ್ನಡ ವ್ಯಾಕರಣದಲ್ಲೂ ಈ ಬಗ್ಗೆ ಉಲ್ಲೇಖವಿಲ್ಲ. ವಡ್ಡಾರಾಧನೆಯಂತಹ ಪಂಪಪೂರ್ವಕೃತಿಯಲ್ಲಿ ಒಂದೇ ವಾಕ್ಯದಲ್ಲಿ ಎರಡೂ ರೂಪಗಳು ಪ್ರಯೋಗವಾಗಿರುವ ಉದಾಹರಣೆಗಳು ದೊರೆಯುತ್ತವೆ. ಹಳಗನ್ನಡದಲ್ಲಿ ಆಮ್ ಮಾತ್ರ ಬಳಕೆಯಲ್ಲಿತ್ತು. ಶಾಸನಗಳಲ್ಲೂ ಈ ವ್ಯತ್ಯಾಸ ಕಾಣಬರುವುದಿಲ್ಲ.

ಬಹುಶಃ ಎರಡೆರಡು ಉತ್ತಮ ಪುರುಷರೂಪಗಳಿದ್ದುದರಿಂದ ಕಾರಣ, ವಿವರಣೆ ನೀಡಲು ಹೋಗಿ ಈ ಪರಿಹಾರವನ್ನು ಕಂಡಿರಬಹುದು. ತೆಲುಗು

ಮಧ್ಯಮ ಪುರುಷದಲ್ಲಿ ಈರು, ಮೀರು ಇವೆ; ತಮಿಳಿನಲ್ಲಿ ನೀರ್, ನೀವಿರ್, ನೀಂಗಳ್ ಇವೆ; ತುಳುವಿನಲ್ಲಿ ಈರ್, ನಿಕುಳು ಇವೆ. ಅಲ್ಲದೆ ಪ್ರಥಮ ಪುರುಷ ಅಥವಾ ಅನ್ಯಪುರುಷದಲ್ಲಿ ಕನ್ನಡದಲ್ಲಿ ಅವರ್, ಅವರ್ಕಳ್; ತಮಿಳಿನಲ್ಲಿ ಅವ್ರೈ, ಅವ್ರೈಗಳ್; ತುಳುವಿನಲ್ಲಿ ಆರ್. ಆಕುಳು ಎಂದು ಎರಡೆರಡು ರೂಪಗಳೂ ಇವೆ. ಹೀಗೆ ಮಧ್ಯಮ ಪುರುಷ, ಅನ್ಯಪುರುಷಗಳಿಗೆ ಸಮಾವೇಶಕ, ಅಸಮಾವೇಶಕ ಎಂದು ಭೇದ ಮಾಡಲು ಹೇಗೆ ಸಾಧ್ಯ? ಭೇದವನ್ನು ಪ್ರತಿಪಾದಿಸುವ ವಿದ್ವಾಂಸರು ಇವುಗಳನ್ನು ಏಕೆ ಗಮನಿಸದೆ ಬಿಟ್ಟರು? ಆದ್ದರಿಂದ ಸಮಾವೇಶಕ, ಅಸಮಾವೇಶಕ ಎಂಬ ಕಲ್ಪನೆ ದ್ರಾವಿಡ ಭಾಷೆಗಳ ವೈಶಿಷ್ಟ್ಯವೆನ್ನಲು ಸಾಧ್ಯವಿಲ್ಲ. ಪ್ರ. ಗೋ. ಕುಲಕರಣಿಯವರು ತೆಲುಗು ಭಾಷೆಯಲ್ಲಿ ಹಾಗೂ ಕುಯಿ ಭಾಷೆಯಲ್ಲಿ ಈ ಭೇದವಿದೆ ಎನ್ನುತ್ತಾರೆ. ಅವರು ಕೊಡುವ ಉದಾಹರಣೆಗಳು: ಏಕವಚನದಲ್ಲಿ ಏನ್ (ಏನು); ನೇನ್ (ನೇನು); ಬಹುವಚನದಲ್ಲಿ ಏಮು, ಮೇಮು. 'ಮೇಮು' ಎಂಬುದು ಅಸಮಾವೇಶಕ (Exclusive), ಇದರದೇ ಇನ್ನೊಂದು ರೂಪವಾದ 'ಮನಮು' ಎಂಬುದು ಸಮಾವೇಶಕ (Inclusive) ಎನ್ನುತ್ತಾರೆ. ಕುಯಿಯಲ್ಲಿ 'ಆನು' ಏಕವಚನ. ಇದಕ್ಕೆ ಎರಡು ಬಹುವಚನ ರೂಪಗಳಿವೆ 'ಆಮು', 'ಆಜು'. 'ಆಮು' ಅಸಮಾವೇಶಕ, 'ಆಜು' ಸಮಾವೇಶಕ ಎನ್ನುತ್ತಾರೆ. ಆದರೆ ಕುಲಕರಣಿಯವರೂ ಸಹ ಏಕವಚನದ ಎರಡೆರಡು ರೂಪಗಳ ಬಗ್ಗೆ ವಿವರಣೆ ನೀಡುವುದಿಲ್ಲ. ಅಲ್ಲದೆ, ದ್ರಾವಿಡ ವರ್ಗದ ಭಾಷೆಗಳಲ್ಲೆಲ್ಲಾ ಈ ವೈಶಿಷ್ಟ್ಯವಿಲ್ಲ; ತೆಲುಗು, ಕುಯಿಗಳಲ್ಲಿರುವ ಈ ವೈಶಿಷ್ಟ್ಯ ಅಥವಾ ವೈಲಕ್ಷಣ್ಯವನ್ನು ಗಮನಿಸಿ ಎಲ್ಲಾ ಭಾಷೆಗಳಿಗೂ ಆರೋಪಿಸಲಾಗಿದೆ ಎನ್ನುತ್ತಾರೆ. ಆದರೆ ಮೂಲದ್ರಾವಿಡದಲ್ಲಿ ಈ ವೈಶಿಷ್ಟ್ಯ ಇದ್ದಿದ್ದೇ ಆಗಿದ್ದರೆ ಎಲ್ಲಾ ಭಾಷೆಗಳಲ್ಲೂ ಅಥವಾ ಹಲವಾರು ಭಾಷೆಗಳಲ್ಲಾದರೂ ಉತ್ತಮಪುರುಷ ಭೇದ ಉಳಿದುಬರಬೇಕಿತ್ತು. ಎರಡನೆಯದಾಗಿ, ಉತ್ತಮ ಪುರುಷ ಸರ್ವನಾಮಗಳ ಎರಡು ರೂಪ 'ಅ' (ಅಥವಾ 'ಯ')ಕಾರಯುಕ್ತ, 'ನ'ಕಾರಯುಕ್ತ (ಅಥವಾ 'ಮ'ಕಾರ) ಎನ್ನಬಹುದು. ತೆಲುಗಿನ ಉದಾಹರಣೆಯಲ್ಲಿ ಏಮು; ಮೇಮು ಮತ್ತು ಮನಮುಗಳು 'ಅ' ಮತ್ತು 'ನ'ಕಾರಗಳ ರೂಪಾಂತರವೆಂದರೂ ಏಮು ಅಸಮಾವೇಶಕ ಆಗಬೇಕಿತ್ತು. ಆದರೆ ಅವರು ಒಂದೇ ಶಬ್ದದ ಎರಡು ಭಿನ್ನರೂಪಗಳಾದ ಮೇಮು ಮತ್ತು ಮನಮುಗಳಲ್ಲಿ ಒಂದನ್ನು ಅಸಮಾವೇಶಕವೆಂದೂ, ಇನ್ನೊಂದನ್ನು ಸಮಾವೇಶಕವೆಂದೂ ಹೇಳುತ್ತಾರೆ. ಕುಯಿಯಲ್ಲಿ ಆಮು, ಆಜು ಎರಡೂ 'ಅ'ಕಾರಯುಕ್ತ. ನಕಾರಯುಕ್ತ ಶಬ್ದವೇ ಇಲ್ಲ. ಆದ್ದರಿಂದ ಇವರ ವಿವರಣೆಯೂ ಈ ಸಮಸ್ಯೆಗೆ ಪರಿಹಾರ ಸೂಚಿಸುವುದಿಲ್ಲ. 'ಆ' ಎನ್ನುವುದು ನಾಸಿಕೋಚ್ಚಾರಣೆ ಪಡೆದಾಗ 'ಆಂ' ಆಗಿ, 'ನ'ಕಾರಯುಕ್ತವಾಗಿರಬಹುದು. ಹೀಗಾಗಿ 'ಆ' (ಎ, ಯ) ಮತ್ತು 'ನೇ' ಸೇರಿದ ಜೋಡಿ ರೂಪಾಂತರ ಶಬ್ದಗಳು ದ್ರಾವಿಡ ಭಾಷೆಗಳಲ್ಲಿ ರೂಢಿಗೆ

ವಿನ್ನೂ ಬಂದಿಲ್ಲ. ಬಹುಶಃ ೯ ಅರ್ಥದಲ್ಲಿ ತೊನ್ ಇದ್ದು, 'ಒಂಬತ್ತು' ಸಮಾಸ ಪದ ರೂಢಿಗೆ ಬಂದು ತೊನ್ ಬಿಟ್ಟುಹೋಗಿರಬಹುದು. ತೆಲುಗಿನಲ್ಲೇ 'ತೊಮ್ಮಿದಿ' ಎಂದಾಗ ಹಿಂದಿನ ಎಂದರ್ಥ ಹೇಳುವುದು, ತೊಂಬದಿ, ತೊಮ್ಮನೂಱು (೯೦, ೯೦೦ ಒಂಬತ್ತುಹತ್ತು, ಒಂಬತ್ತುನೂರು) ಎಂದಾಗ 'ಒಂಭತ್ತು' ಅರ್ಥ ಹೇಳುವುದು ಸಮಸ್ಯೆ ಇರುವುದನ್ನು ಸೂಚಿಸುತ್ತದೆ.

ಕೇಶಿರಾಜ ಒಂಬತ್ತಕ್ಕೆ ಪತ್ತು ಪರವಾದರೆ 'ತೊಮ್' ಎಂದೂ, ನೂರು ಸಾಸಿರ ಪರವಾದರೆ 'ಒಂಬಯ್' ಎಂದೂ ಆದೇಶವಾಗುತ್ತದೆ ಎಂದಿದ್ದಾನೆ.

೧೦. ಪತ್ತು>ಹತ್ತು ಆಗಿದೆ, ಹೊಸಗನ್ನಡದಲ್ಲಿ. ಹತ್ತಕ್ಕೆ ತೆಲುಗಿನಲ್ಲಿ ಮಾತ್ರ ಪದಿ, ಮಿಕ್ಕ ಭಾಷೆಗಳಲ್ಲಿ ಪತ್ತು ಎಂದಿದೆ. ಹತ್ತಕ್ಕೆ ಒಂದು, ಎರಡು ಪರವಾದರೆ 'ಪನ್' ಆಗುತ್ತದೆ: ಪನ್ನೊಂದು>ಹನ್ನೊಂದು, ಪನ್ನೆರಡು> ಹನ್ನೆರಡು. ಮೂರು, ನಾಲ್ಕು ಮುಂತಾಗಿ ಉಳಿದ ಸಂಖ್ಯೆಗಳು ಪರವಾದಾಗ 'ಪದಿ' ಆಗುತ್ತದೆ. ಹತ್ತರ ಪಟ್ಟುಗಳನ್ನು ಹೇಳುವಾಗ ಸಂಖ್ಯೆ ಮೊದಲು ಬಂದು ಹತ್ತು ಅನಂತರ ಬರುತ್ತದೆ: ಇಪ್ಪತ್ತು, ಮೂವತ್ತು, ನಾಲ್ವತ್ತು (ನಲವತ್ತು), ಐವತ್ತು, ಅರುವತ್ತು ಇತ್ಯಾದಿ. ಇಲ್ಲಿ 'ಪತ್ತು'ವಿನ 'ಪ'ಕ್ಕೆ 'ವ' ಆದೇಶವಾಗುತ್ತದೆ.

೧೧. ನೂಱು>ನೂರು ಎಂದು ಹೊಸಗನ್ನಡದಲ್ಲಿದೆ. ತುಳುವಿನಲ್ಲಿ 'ನೂಡು' ಎಂದಿದ್ದರೆ ತಮಿಳು, ತೆಲುಗು, ಮಲೆಯಾಳಂಗಳಲ್ಲಿ ನೂಱು ಎಂದೇ ಇದೆ. ತೆಲುಗಿನಲ್ಲಿ ಇದರ ಜೊತೆಗೆ 'ವಂದ' ಎಂಬ ಶಬ್ದವಿದೆ.

೧೨. ಸಂಸ್ಕೃತ ಸಹಸ್ರದಿಂದ ಸಾವಿರ, ಆಯಿರ (ತ) ಎಂದು ತದ್ಭವ ಮಾಡಿಕೊಳ್ಳಲಾಗಿದೆ. ತೆಲುಗಿನಲ್ಲಿ ಮಾತ್ರ 'ವೇಯಿ' ಎಂಬ ಶಬ್ದವಿದೆ.

ಸಂಖ್ಯಾವಾಚಕಗಳಿಗೆ 'ಅನೆಯ' ಪ್ರತ್ಯಯ ಸೇರಿಸಿದಾಗ ಆ ಶಬ್ದರೂಪ ವಸ್ತುವಿನ ಕ್ರಮವನ್ನು ಸೂಚಿಸುತ್ತದೆ. ಉದಾ: ಒಂದನೆಯ, ಎರಡನೆಯ ಇತ್ಯಾದಿ. ಸಂಖ್ಯಾವಾಚಕಗಳ ಮೂಲರೂಪಗಳು ಪ್ರತ್ಯಯಗಳನ್ನು ಪಡೆದು ಪುರುಷವಾಚಕಗಳಾಗುತ್ತವೆ. ಅಲ್ಲಿ 'ವ'ಕಾರಾಗಮವೂ ಆಗುತ್ತದೆ. ಉದಾ: ಒರ್ವನ್, ಇರ್ವರ್, ಮೂವರ್, ನಾಲ್ವರ್ ಇತ್ಯಾದಿ. ಹೊಸಗನ್ನಡದಲ್ಲಿ ಒಬ್ಬನು, ಒಬ್ಬಳು, ಇಬ್ಬರು ಇತ್ಯಾದಿ. ಹೊಸಗನ್ನಡದಲ್ಲಿ ಮಾತ್ರ ಮೂರಕ್ಕಿಂತ ಹೆಚ್ಚು ಸಂಖ್ಯೆಯವರನ್ನು ಕುರಿತು ಹೇಳುವಾಗ ಪುರುಷವಾಚಕರೂಪ ಮಾಡಿಕೊಳ್ಳದೆ, ಸಂಖ್ಯೆಯೊಡನೆ ಜನ, ಮಂದಿ ಶಬ್ದವನ್ನು ಸೇರಿಸಲಾಗುವುದು. ಉದಾ: ನಾಲ್ಕು ಜನ, ಐದು ಮಂದಿ, ಎಂಟು ಜನ, ಹತ್ತು ಮಂದಿ ಇತ್ಯಾದಿ.

## ೧೮. ಕ್ರಿಯಾಪದಗಳು

**ಧಾತುಗಳು :** ಭಾಷೆಯಲ್ಲಿ ಕ್ರಿಯಾಪದಗಳೇ ಕೋಶದ ಮೂಲ, ಉಗಮ ಸ್ಥಾನ. ಆದ್ದರಿಂದ ಒಂದು ಭಾಷೆಯ ಮೂಲ ತಿಳಿಯಬೇಕಿದ್ದರೆ ಕ್ರಿಯಾಪದವನ್ನು ನೋಡಬೇಕು. ಕ್ರಿಯಾಪದ ಮತ್ತು ಸರ್ವನಾಮಗಳು ಮಾರ್ಪಾಡಾಗುವುದು, ಬೇರೆ ಭಾಷೆಯ ಪ್ರಭಾವಕ್ಕೆ ಒಳಗಾಗಿ ಬದಲಾಗುವುದು, ಸಾಧ್ಯವೇ ಇಲ್ಲ ಎನ್ನಬಹುದು. ಕೋಶದ ಮೂಲ ಕ್ರಿಯಾಪದ ಎನ್ನಲು ಕಾರಣ ಕ್ರಿಯಾಪದ ಅಥವಾ ಧಾತುವಿನಿಂದ ಅನೇಕ ಪದಗಳು ಹುಟ್ಟುವುದಾಗಿದೆ. 'ಮಿನ್' ಧಾತುವಿನಿಂದ ಮಿನುಗುವುದು, ಮಿಂಚು, ಮೀನು, ಮಿಣುಕುಹುಳ ಮೊದಲಾದುವೂ, 'ಬೆಳ್' ಧಾತುವಿನಿಂದ ಬೆಳಗು, ಬೆಳಕು, ಬೆಳಗ್ಗೆ, ಬೆಳ್ಳಿ, ಬಿಳುಪು ಮೊದಲಾದ ಶಬ್ದಗಳೂ ಹುಟ್ಟಿದುವು, ಕೋಶದ ಬೆಳವಣಿಗೆಗೆ ಕಾರಣವಾದುವು.

ಭಾಷೆಯ ಮೂಲ ಧಾತು ಎಂದಾಯಿತು. 'ಧಾ' ಎಂದರೆ ಆಧಾರವಾಗು ಎಂದರ್ಥ. ಯಾವುದು ಧಾತು ಎಂದು ತಿಳಿಯುವ ಬಗೆ ಹೇಗೆ? ಕೇಶಿರಾಜ ಹೀಗೆ ಹೇಳಿದ್ದಾನೆ: "ಕ್ರಿಯಾರ್ಥದ ಮೂಲಂ, ಪ್ರತ್ಯಯರಹಿತಂ ಧಾತು, ಅದಂ ಅಭಾವ ಕ್ರಿಯೆಯೊಳ್ ನಿಯತಂ ನಿಶ್ಚಯಿಪುದು." ಕ್ರಿಯಾಪದದ ಅರ್ಥದ ಮೂಲವೂ ಪ್ರತ್ಯಯವಿಲ್ಲದುದೂ, ನಿಷೇಧಕ್ರಿಯೆಯಲ್ಲಿ ಕಾಣುವ ಸ್ವರೂಪದ್ದೂ ಧಾತು. ನಿಷೇಧ ಕ್ರಿಯೆಗಿಂತಲೂ ವಿಧ್ಯರ್ಥದಲ್ಲಿ ಮಧ್ಯಮಪುರುಷ ಏಕವಚನದಲ್ಲಿ ಧಾತುವನ್ನು ಕಾಣಬಹುದು. ಕನ್ನಡದಲ್ಲಿ ಧಾತುವೇ ಮಧ್ಯಮ ಪುರುಷ ಏಕವಚನವನ್ನು ಸೂಚಿಸುತ್ತದೆ: ಮಾಡು, ಹೋಗು, ಗೆಯ್, ಸಾಯ್ ಇತ್ಯಾದಿ.

ಡಾ. ರಾಮಕೃಷ್ಣಯ್ಯನವರು ಎಲ್ಲ ಭಾಷೆಗಳೂ ಧಾತುವಿನಿಂದಲೇ ಪ್ರಾರಂಭವಾದುವು, ಆ ಧಾತುಗಳು ಮೊದಲು ಏಕಾಕ್ಷರದವೇ ಆಗಿದ್ದುವು ಎನ್ನುತ್ತಾರೆ. ಕನ್ನಡದ ಮೂಲ ಧಾತುಗಳು ಬಹುಪಾಲು ಏಕಾಕ್ಷರದವೇ ಆಗಿದ್ದುವು. ಉದಾ: ಬಾ, ಪೋ, ಬೇ, ಸಾ, ತೇ (ಯ್), ಈ, ಮೇ ಇತ್ಯಾದಿ. ಕೇಶಿರಾಜ ಧಾತು ಪ್ರಕರಣದಲ್ಲಿ ಪಟ್ಟಿ ಕೊಟ್ಟಿದ್ದಾನೆ. ಮಕ್ಕಳೂ ಒಂದಕ್ಷರದ ಧಾತುಗಳಿಂದಲೇ ಅರ್ಥ ಸೂಚಿಸುತ್ತವೆ. ಕನ್ನಡದ ಅನೇಕ ಧಾತುಗಳು ತಮಿಳಿನಂತೆ ವ್ಯಂಜನಾಂತಗಳಾಗಿದ್ದುವು. ಉದಾ: ಕಾಣ್, ತಿನ್, ನೋನ್, ಪಣ್, ಕಾಯ್, ಉಣ್, ನಿಲ್, ಕೊಲ್, ಕೊಳ್, ಕಳ್, ಕೇಳ್, ಪೂಣ್ ಇತ್ಯಾದಿ. ತೆಲುಗು ಮಾತ್ರ ಸ್ವರಾಂತ ಧಾತುಗಳನ್ನು ಬಹಳ ಕಾಲದಿಂದಲೂ ಪಡೆದಿದೆ. ಉದಾ: ಕನು, ನೋಮು, ತಿನು, ಚೇಯು, ಪೂನು, ಪೊಗಡು, ತೆಲಿಯು ಇತ್ಯಾದಿ. ಹೊಸಗನ್ನಡದಲ್ಲಿ ಧಾತುಗಳು ಸ್ವರಾಂತವಾಗಿವೆ.

**ದ್ರಾವಿಡ ಭಾಷೆಗಳಲ್ಲಿ ಕ್ರಿಯಾಪದಗಳಿವೆಯೇ? :** ಆಧುನಿಕ ವಿದ್ವಾಂಸರು "ದ್ರಾವಿಡ ಭಾಷೆಗಳಲ್ಲಿ ನ್ಯಾಯವಾಗಿ ಕ್ರಿಯಾಪದಗಳೇ ಇಲ್ಲ" ಎನ್ನುತ್ತಾರೆ ಎಂದು

(ಅವನ್, ಇವನ್, ಉವನ್ ಇರುವಂತೆ) ಆಗಿರಬೇಕು. ಆದ್ದರಿಂದ ಎ>ಏ–ಎದು, ಎವನ್>ಏವನ್, ಏವಳ್, ಏವರ್, ಏವುದು, ಏವುವು ಎಂಬ ಮೂಲದಿಂದಲೇ ಹಳಗನ್ನಡದ ಆವನ್, ಆವಳ್ ಇತ್ಯಾದಿ ಬಂದಿರಬೇಕು. ತಮಿಳಿನಲ್ಲಿ ಯಾವನ್, ಯಾವಳ್, ಯಾದು, ಯಾರ್, ಎವಂ, ಎವೈ ಇವೆ. ತೆಲುಗಿನಲ್ಲೂ ಏವಡು, ಏದಿ, ಎವತೆ, ಎವರಿತೆ, ಎವಿ, ಏವಿ, ಎವಿ ಎಂದು ಇವೆ. ಆದ್ದರಿಂದ 'ಏ' (<ಎ) ಸ್ಥಾನ ನಿರ್ದೇಶಕವು ಪ್ರಶ್ನಾರ್ಥಕ ಸರ್ವನಾಮಗಳ ಮೂಲ. ಹಾಗಿದ್ದರೆ ಹಳಗನ್ನಡದಲ್ಲಿ 'ಆ(ವನ್)' ಹೇಗೆ ಬಂದಿತು. ಹಳಗನ್ನಡದಲ್ಲಿ ಶಬ್ದಾದಿಯ 'ಯ'ಕಾರವನ್ನು ನಿಷೇಧಿಸಲಾಯಿತು ಎನ್ನಲಾಗಿದೆ. ಆಗ 'ಆವನ್' (<ಯಾವನ್) ಉಳಿಯುತ್ತದೆ. ಆದರೆ ಏ>ಯಾ ಆಗಬಹುದು. 'ಆ' ಆಗುತ್ತದೆಯೆ? ಬಹುಶಃ ಪ್ರಶ್ನಾರ್ಥಕ ಸರ್ವನಾಮ ಮೂಲವಾದ 'ಎ' ಅಥವಾ 'ಏ' ಎಂಬುದನ್ನು 'ಆ' ಮತ್ತು 'ಎ' ಸ್ವರಗಳಿಗೆ ಮಧ್ಯಸ್ಥವಾಗಿ ಉಚ್ಚರಿಸುತ್ತಿದ್ದು, ಹಳಗನ್ನಡದಲ್ಲಿ 'ಆ' ಆಗಿ, ತಮಿಳು ತೆಲುಗುಗಳಲ್ಲಿ 'ಏ' ಆಗಿರಬಹುದು. ಡಾ. ಕಾಲ್ಡ್‌ವೆಲ್ 'ಯ'ಕಾರವೇ ಮೂಲವು ಎನ್ನುತ್ತಾರೆ.

**ಆತ್ಮಾರ್ಥಕ ಸರ್ವನಾಮಗಳು:** ಹಳಗನ್ನಡದಲ್ಲಿ ತಾನ್, ತಾಂ; ಹೊಸಗನ್ನಡದಲ್ಲಿ ತಾನು, ತಾವು; ತಮಿಳಿನಲ್ಲಿ ತಾನ್, ತಾಂ; ತೆಲುಗಿನಲ್ಲಿ ತಾನು ತಾಮು (ತಮರು) ಎಂದು ಒಂದೇ ಬಗೆಯಾಗಿ ಆತ್ಮಾರ್ಥಕ ಸರ್ವನಾಮಗಳ ಏಕವಚನ ಮತ್ತು ಬಹುವಚನಗಳಲ್ಲಿವೆ. 'ತಾ' ಎಂಬುದರಿಂದ ಇವು ಬಂದುವು ಎನ್ನಲಾಗಿದೆ. 'ತಾ'ಗೆ ನಾಸಿಕೋಚ್ಚಾರಣೆ ಬಂದಾಗ ತಾನ್, ತಾಮ್ ಆಗುತ್ತದೆ. ಆತ್ಮಾರ್ಥಕ ಸರ್ವನಾಮ ಬಹುವಚನವನ್ನು ಗೌರವಾರ್ಥದಲ್ಲಿಯೂ ಬಳಸಲಾಗುತ್ತಿದೆ.

ಕನ್ನಡದಲ್ಲಿ ಸಂಬಂಧಾರ್ಥಕ ಸರ್ವನಾಮಗಳಿಲ್ಲ.

# ೧೭. ಗುಣವಾಚಕ, ಸಂಖ್ಯಾವಾಚಕಗಳು

**ಗುಣವಾಚಕಗಳು**

ಕೇಶಿರಾಜ ಗುಣವಾಚಕಗಳನ್ನು ನಾಮಪ್ರಕರಣದಲ್ಲಿ ಸೇರಿಸಿದ್ದಾನೆ. ಕನ್ನಡದಲ್ಲಿ ಗುಣವಾಚಕ ನಾಮಪದದಲ್ಲಿ ಸೇರುತ್ತದೆ. ಗುಣವಾಚಕಗಳಲ್ಲಿ ಕಾರಕರೂಪ, ವಿಶೇಷಣರೂಪ ಎಂದು ಎರಡು ವಿಧ ಉಂಟು. ದ್ರಾವಿಡ ಭಾಷೆಗಳಲ್ಲಿ ವಿಶೇಷಣಗಳು (adjectives) ಇಲ್ಲ; ಇರುವುದೆಲ್ಲ ಗುಣವಾಚಕಗಳು, ಸಂಬಂಧಸೂಚಕ ನಾಮಪದಗಳು (nouns of quality or relation); ಈ ಗುಣವಾಚಕ ನಾಮಗಳೇ ವಿಶೇಷ್ಯದ ಹಿಂದೆ ಬಂದಾಗ, ಸ್ಥಾನಬಲದಿಂದ, ವಿಶೇಷಣಗಳಾಗುತ್ತವೆ—ಎಂದು ಡಾ. ಕಾಲ್ಡ್‌ವೆಲ್ ಹೇಳುತ್ತಾರೆ. ಇದನ್ನು ಒಪ್ಪದೆ ಆರ್. ನರಸಿಂಹಾಚಾರ್ ಅವರು ತಮಿಳು, ಕನ್ನಡ ಹಾಗೂ ತೆಲುಗುಗಳಲ್ಲಿ ಇಂಗ್ಲಿಷಿನ good, long, short ಗಳಂತಹ ಶಬ್ದರೂಪಗಳು ಇವೆ ಎನ್ನುತ್ತಾರೆ. ನನ್ಪು, ನಲ್ಮೆ ಗುಣವನ್ನು ಸೂಚಿಸುವ ನಾಮಪದ; ಅವುಗಳ ಪ್ಪು, ಮೆ ಪ್ರತ್ಯಯಗಳನ್ನು ತೆಗೆದೊಡನೆಯೇ 'ನಲ್' (good) ಎಂಬ ರೂಪ ಉಳಿಯುತ್ತದೆ. ಇದು ಇಂಗ್ಲಿಷಿನ adjective ಗೆ ಸರಿಸಮಾನ ರೂಪ ಎನ್ನುತ್ತಾರೆ. ಏಕೆಂದರೆ ನಾಮಪದದ ಹಿಂದೆ ಬರುವ ರೂಪ 'ನಲ್ಮೆ' ಅಲ್ಲ, ಅದರ ಪ್ರಕೃತಿರೂಪವಾದ 'ನಲ್' ಎಂಬುದು. ನಲ್ ನಿಂದ ನಲ್ಮೆ ಬಂದಿದೆ. ಆದ್ದರಿಂದ ಡಾ. ಕಾಲ್ಡ್‌ವೆಲ್‌ರ ವಾದವನ್ನು ಒಪ್ಪುವಂತಿಲ್ಲ ಎನ್ನುತ್ತಾರೆ.

ಕೇಶಿರಾಜ ತು, ದು ಎಂದು ಗುಣವಾಚಕಗಳನ್ನು ಹೇಳಿರುವುದು ನಿಜ: ಒಳ್ಳಿತು, ಮೆಲ್ಲಿತು, ತೆಳ್ಳಿತು, ಇನಿದು, ಬಿಳಿದು, ಕರಿದು ಇತ್ಯಾದಿ. ಇವುಗಳ ಆದೇಶರೂಪ ಒಳ್, ಮೆಲ್, ತೆಳ್, ಇನ್, ಬೆಳ್, ಕರ್ ಎಂದು ಹೇಳುತ್ತಾನೆ. ಆದರೆ ವಾಸ್ತವವಾಗಿ ಇವೇ ಮೂಲ ಪ್ರಕೃತಿರೂಪಗಳು. ಇವು ಸಮಾಸಗಳಲ್ಲಿ ಕಂಡುಬರುತ್ತವೆ. ಉದಾ: ಒಳ್ನುಡಿ, ಮೆಲ್ನುಲಿ, ತೆಳ್ವಸಿರ್, ಇವಪ್ಪು, ಬೆಳ್ಗದಿರ್, ಕರ್ಮುಗಿಲ್ ಇತ್ಯಾದಿ. ಈ ಮೂಲ ಪ್ರಕೃತಿಗಳನ್ನೇ ವಿಶೇಷಣಗಳೆನ್ನಬಹುದು (adjectives).

೧. ಆ ಮೂಲ ಪ್ರಕೃತಿಗಳಿಗೆ ತು, ದು ಸೇರಿ ಗುಣವಾಚಕಗಳಾಗಿವೆ. ಹಾಗೇ ಅನ್, ಅಳ್ ಪ್ರತ್ಯಯಗಳು ಸೇರಿದಾಗ ಒಳ್ಳಿದನ್, ಒಳ್ಳಿದಳ್ ಆಗುತ್ತವೆ. ತು, ದು ಮಾತ್ರ ನಪುಂಸಕ ಲಿಂಗ.

೨. ಮೂಲಪ್ರಕೃತಿಗಳಿಗೆ ಪು, ಮೆ, ವು ಪ್ರತ್ಯಯಗಳು ಸೇರಿದಾಗ ಭಾವನಾಮಗಳಾಗುತ್ತವೆ. ಉದಾ: ಕಮ್ಪು, ಕೂರ್ಪು, ಬೆಳ್ಪು, ನಲ್ಮೆ; ಜಾಣ್ಮೆ, ಪಟುಮೆ, ಪೆರ್ಮೆ, ತೆಳುವು ಇತ್ಯಾದಿ.

೩. ಮೂಲ ಪ್ರಕೃತಿಗಳಿಗೆ ಗು, ಚು ಸೇರಿಸಿ ಧಾತುಗಳನ್ನಾಗಿ ಮಾಡಬಹುದು. ಉದಾ: ಬೆಳ್ > ಬೆಳಗು, ಪೆರ್ > ಪೆರ್ಚು, ನುಣ್ > ನುಣ್ಚು ಇತ್ಯಾದಿ.

೪. ಮೂಲ ಪ್ರಕೃತಿಗಳಿಗೆ ಅಗೆ, ಅನೆ ಪ್ರತ್ಯಯಗಳು ಸೇರಿದಾಗ ಕ್ರಿಯಾ-ವಿಶೇಷಣಗಳಾಗುತ್ತವೆ. ಉದಾ: ಕರ್‍ರನೆ, ಕಮ್ಮನೆ, ಬೆಳ್ಳಗೆ, ಮೆಲ್ಲಗೆ, ನುಣ್ಣನೆ, ತಣ್ಣನೆ ಇತ್ಯಾದಿ. ಈ ಕ್ರಿಯಾವಿಶೇಷಣಕ್ಕೆ ಪುನಃ 'ಅ', 'ಇನ' ಪ್ರತ್ಯಯ ಸೇರಿಸಿ ಹೊಸಗನ್ನಡದಲ್ಲಿ ಹೊಸ ವಿಶೇಷಣ ಮಾಡಿಕೊಳ್ಳಲಾಗುತ್ತಿದೆ. ಉದಾ: ಬೆಳ್ಳನೆ> ಬೆಳ್ಳನೆಯ, ಬೆಳ್ಳಗಿನ; ತೆಳ್ಳನೆ> ತೆಳ್ಳನೆಯ, ತೆಳ್ಳಗಿನ; ತಣ್ಣನೆ> ತಣ್ಣನೆಯ, ತಣ್ಣಗಿನ. ಅಂತ್ಯ 'ಅನೆಯ' ಆಡುಮಾತಿನಲ್ಲಿ 'ಅನ್ನ' ಆಗಿದೆ; ತೆಳ್ಳನ್ನ, ತಣ್ಣನ್ನ, ಉದ್ದನ್ನ, ದಪ್ಪನ್ನ ಇತ್ಯಾದಿ. ಪೆರ್ + ಅ = ಪಿರಿಯ, ಕಿರಿಯ, ಕರಿಯ, ಬಿಳಿಯ, ಇನಿಯ, ಪಸಿಯ ಇತ್ಯಾದಿ ಸಹ ಆಗುತ್ತವೆ.

೫. ಮೆಲ್ಲಿತು, ದೊಡ್ಡಿತು, ಒಳ್ಳಿತು, ಪಿರಿದು ಮೊದಲಾದ ಗುಣವಾಚಕಗಳಿಗೆ ಅಪ್ಪ, ಆದ (ಅಹ) ಪ್ರತ್ಯಯ ಸೇರಿಸಿದರೆ ವಿಶೇಷಣಗಳಾಗುತ್ತವೆ. ಉದಾ: ಪಿರಿದಹ, ಮೆಲ್ಲಿದಹ, ಕೂರಿತ್ತಾದ, ಬಲ್ಲಿದರಪ್ಪರಕ್ಕಸರ್, ಬೆಟ್ಟಿತಪ್ಪಧ್ವನಿ ಇತ್ಯಾದಿ.

೬. ಹಳಗನ್ನಡದಲ್ಲಿ ಉಳ್ಳ, ಇಲ್ಲದ ಪ್ರತ್ಯಯಗಳನ್ನು ನಾಮವಾಚಕಗಳಿಗೆ ಸೇರಿಸಿದರೆ ಗುಣವಾಚಕಗಳಾಗುತ್ತವೆ. ಉದಾ: ಪೊನ್–ಪೊನ್ನುಳ್ಳವನೆ ಕುಲೀನಂ, ಅಱಿವುಳ್ಳ ಮಾನಿಸರ್.

ಮೇಲಿನ ವಿವರಣೆಯಿಂದ ಮೂಲಪ್ರಕೃತಿಗಳೇ ವಿಶೇಷಣರೂಪವಾಗಿರುವುದೂ, ಪ್ರತ್ಯಯಗಳು ಸೇರಿ ಗುಣವಾಚಕಗಳಾಗಿರುವುದೂ ಸ್ಪಷ್ಟ. ಹಾಗೇ ಗುಣವಾಚಕ, ವಿಶೇಷಣಗಳನ್ನು ರೂಢಿಸಿಕೊಳ್ಳುವ ಬಗೆಗಳನ್ನೂ ವಿವರಿಸಿದೆ.

ಗುಣವಾಚಕಗಳ ಇನ್ನೆರಡು ಬಗೆಗಳನ್ನು ಗಮನಿಸಬಹುದು. ಅನಿತು, ಇನಿತು, ಎನಿತು (ಅನಿಸು, ಇನಿಸು, ಎನಿಸು) ಇವೂ ಸಹ ಗುಣವಾಚಕಗಳೇ ಆಗಿವೆ. ಇವುಗಳಿಗೆ ಪರಿಮಾಣವಾಚಕಗಳೆನ್ನುತ್ತಾರೆ. ಹಳಗನ್ನಡದ ಈ ಶಬ್ದಗಳೇ ಹೊಸಗನ್ನಡದಲ್ಲಿ ಬೇರೆ ರೂಪ ಪಡೆದಿವೆ. ನಡುಗನ್ನಡದ ಆಸು, ಈಸು, ಏಸು ಶಬ್ದಗಳಿಗೆ 'ಟು' ಪ್ರತ್ಯಯ ಸೇರಿ ಅಷ್ಟು, ಇಷ್ಟು, ಎಷ್ಟು ಎಂದಾಗಿವೆ. (ಇಲ್ಲಿ ಹಳಗನ್ನಡದ ಅಂತುಟು, ಇಂತುಟು, ಎಂತುಟು ಶಬ್ದಗಳನ್ನು ನೆನೆಯಬಹುದು). ಗ್ರಾಮ್ಯರೂಪವಾಗಿ ಸ್ವಲ್ಪ ಎಂಬರ್ಥದಲ್ಲಿ ಓಸು, ಒಸ್ಸಿ, ಓಷ್ಟು ರೂಪಗಳೂ ಉಂಟು. ಪರಿಮಾಣವಾಚಕಗಳಿಗೆ 'ಅನೆಯ' ಪ್ರತ್ಯಯ ಸೇರುವುದುಂಟು. ಅಷ್ಟನೆಯ, ಎಷ್ಟನೆಯ ಇತ್ಯಾದಿ.

ಸಂಸ್ಕೃತ ಗುಣವಾಚಕಗಳಿಂದ ಕನ್ನಡ (ಅಂತೇ ದ್ರಾವಿಡ) ಗುಣವಾಚಕಗಳು ಮೂರು ರೀತಿಯಲ್ಲಿ ಭಿನ್ನವಾಗಿವೆ.

೧. ಸಂಸ್ಕೃತದಲ್ಲಿ ವಿಶೇಷಣಗಳು ವಿಶೇಷ್ಯದ ಲಿಂಗ, ವಚನ, ವಿಭಕ್ತಿಗಳನ್ನು ಅನುಸರಿಸುತ್ತವೆ. ಉದಾ: ಅಹೋ ಪಾವನೀ ಭಗವತೀ ಭಾಗೀರಥೀ. ಆದರೆ ಕನ್ನಡದಲ್ಲಿ ಹಾಗಲ್ಲ. ಇಲ್ಲಿ ವಿಶೇಷಣಗಳು ವಿಶೇಷ್ಯದ ಯಾವ ಬಗೆಯ ಲಿಂಗ ವಚನ ವಿಭಕ್ತಿಪ್ರತ್ಯಯಗಳನ್ನೂ ಪಡೆಯದೆ ಹಾಗೆಯೇ ಇರುತ್ತವೆ. ಉದಾ: ಒಳ್ಳೆಯ ಹುಡುಗ, ಒಳ್ಳೆಯ ಹುಡುಗಿ, ಒಳ್ಳೆಯ ಪುಸ್ತಕ. ಫ್ರೆಂಚ್, ಜರ್ಮನ್, ಸಂಸ್ಕೃತ, ಹಿಂದಿ ಮೊದಲಾದ ಆರ್ಯ ಭಾಷೆಗಳೆಲ್ಲ ಈ ವಿಷಯದಲ್ಲಿ ತೊಡಕಾಗಿವೆ. ಇಂಗ್ಲಿಷ್ ಆರ್ಯಭಾಷೆಯಾದರೂ ದ್ರಾವಿಡ ಭಾಷೆಗಳಂತೆ ವರ್ತಿಸುತ್ತಿದೆ, ಬದಲಾಗಿದೆ: good boy, good girl, good book.

೨. ದ್ರಾವಿಡ ಭಾಷೆಗಳಲ್ಲಿ ಗುಣವಾಚಕಗಳಿಗೆ ತರ–ತಮಭಾವವನ್ನು ಸೂಚಿಸುವ ಪ್ರತ್ಯೇಕ ಪ್ರತ್ಯಯಗಳಿಲ್ಲ. ಸಂಸ್ಕೃತ ಮತ್ತಿತರ ಆರ್ಯ ಭಾಷೆಗಳಲ್ಲಿ ತರ–ತಮ ಭಾವವುಂಟು (comparative and superlative). ಉದಾ: small, smaller, smallest. ಹಳಗನ್ನಡದಲ್ಲಿ ತೃತೀಯಾ ಅಥವಾ ಚತುರ್ಥೀ ವಿಭಕ್ತಿಯ ಸಹಾಯದಿಂದ ಈ ಅರ್ಥವನ್ನು ಹೇಳಲಾಗುತ್ತಿತ್ತು. ಉದಾ: ಆತನಿಂದೀತಂ ಪಿರಿಯಂ, ಇನಿಯನೆ ಬೆಲ್ಲದಿನ್ನಿನಿಯಂ, ಅದರ್ಕಿದು ಕಿಱಿದು. ಇಲ್ಲವೆ, ಸಪ್ತಮೀ ವಿಭಕ್ತಿಯ ಸಹಾಯದಿಂದ: ರತ್ನಂಗಳೊಳ್ ಮಾಣಿಕ್ಯಂ ಉತ್ತಮಂ. ಸಪ್ತಮಿಗೆ ಬದಲಾಗಿ ಷಷ್ಠೀ: ಚಾಗಿಗಳ ಬಲ್ಲಹಂ, ರಸಿಕರ ಚಕ್ರವರ್ತಿ ಇತ್ಯಾದಿ.

೩. ಕನ್ನಡದಲ್ಲಿ ಗುಣವಾಚಕಗಳು ಎಷ್ಟೋವೇಳೆ ಆಖ್ಯಾತಪ್ರತ್ಯಯಗಳನ್ನು ಪಡೆದು ಕ್ರಿಯಾರ್ಥವನ್ನು ಕೊಡುತ್ತವೆ. ನಾನು ಒಳ್ಳೆಯವನಾಗಿದ್ದೇನೆ ಎಂದು ಕ್ರಿಯಾಪದ ಸೇರಿಸಿ ಹೇಳುವ ಬದಲು ಗುಣವಾಚಕಕ್ಕೆ ನೇರವಾಗಿ ಆಖ್ಯಾತ ಪ್ರತ್ಯಯ ಹತ್ತುವುದುಂಟು: ಒಳ್ಳಿದನೆಂ, ಸುಂದರನಯ್ ಇತ್ಯಾದಿ. (ನಾಮ ಪದಗಳಿಗೂ ಹೀಗೇ ಆಖ್ಯಾತಪ್ರತ್ಯಯಗಳು ಸೇರುವುದುಂಟು: ಕವಿ ಕೇಶವನೆನ್, ದೌಹಿತ್ರನೆನ್). ಇದು ದ್ರಾವಿಡ ಭಾಷೆಗಳ ಗುಣವಾಚಕಗಳ ವೈಶಿಷ್ಟ್ಯ.

**ಸಂಖ್ಯಾವಾಚಕಗಳು**

ದ್ರಾವಿಡ ಭಾಷೆಗಳಲ್ಲಿ ಸಂಖ್ಯೆಯನ್ನು ಸೂಚಿಸುವ ಶಬ್ದಗಳು ಹನ್ನೊಂದು ಮಾತ್ರ ಇವೆ ಇವು ಮೂಲ, ಸ್ವತಂತ್ರ ಶಬ್ದಗಳು. ಉಳಿದ ಶಬ್ದಗಳು ಸಮಾಸ ದಿಂದ ಆದುವು. ಕನ್ನಡ ಇದರಿಂದ ಹೊರತಲ್ಲ. ಒಂದರಿಂದ ಹತ್ತರವರೆಗಿನ ಸಂಖ್ಯಾವಾಚಕಗಳು ಮತ್ತು ನೂಱು ಸ್ವತಂತ್ರವಾದುವು, ದ್ರಾವಿಡ ಮೂಲದವು. ಸಾವಿರ<ಸಹಸ್ರ ಎಂಬ ಸಂಸ್ಕೃತ ಶಬ್ದದ ತದ್ಭವವಾಗಿದೆ. ಲಕ್ಷ, ಕೋಟಿ ಶಬ್ದಗಳು ಸಂಸ್ಕೃತದ ಸ್ವೀಕರಣಗಳಾಗಿವೆ. ಸಾಮಾನ್ಯವಾಗಿ ದೇಹದ ಅಂಗಸೂಚಕ,

ಸಂಬಂಧ ಸೂಚಕ. ದಿನನಿತ್ಯ ಅಗತ್ಯ ವಸ್ತು ಸೂಚಕ ಶಬ್ದಗಳಂತೆ ಸಂಖ್ಯಾವಾಚಕಗಳೂ ಮೂಲಭಾಷೆಯವೇ ಆಗಿರುತ್ತವಾದರೂ ಇಲ್ಲಿ ಕೆಲವು ಅಪವಾದವನ್ನು ಕಾಣುತ್ತೇವೆ. ಉತ್ತರ ಕರ್ನಾಟಕದ ಇಂದಿನ ಕನ್ನಡ ಆಡುನುಡಿಯಲ್ಲಿ ಮರಾಠಿ ಹಾಗೂ ಉರ್ದು ಪ್ರಭಾವದಿಂದ ಪಾವಾಣೆ, ದೀಡಾಣೆಯಂತಹ ಸಂಖ್ಯಾಸೂಚಕ ಶಬ್ದಗಳು ಸೇರಿಹೋಗಿವೆ.

ಸಂಖ್ಯಾವಾಚಕಗಳ ಮೂಲರೂಪಗಳನ್ನು ಸಮಾಸಪದಗಳಲ್ಲಿ ಕಾಣಬಹುದು: ಒರ್ಮಡಿ (ಒಂದೆಸೆ), ಇರ್ಕಟ್ಟು, ಮೂಗಾವುದಂ (ಮುಯ್ಯಡಿ), ನಾಲ್ವೆರಲ್, ಅಯ್ಗಂಡುಗ, ಅಱುವಡಿ, ಏೞ್ಪತ್ತು, ಎಣ್ದೆಸೆ. ಕನ್ನಡದ ಒಂಬತ್ತು ಸಮಾಸ ಪದ, ಪತ್ತು ಮತ್ತು ನೂಱು ಇತರ ಎರಡು ಶಬ್ದಗಳು.

೧. ಒನ್, ಒರ್ ಮೂಲಶಬ್ದ. ಒಂದು ಎಂಬುದು ಗುಣವಾಚಕದಂತೆ ತು, ದು ಪ್ರತ್ಯಯ ಸೇರಿ ಆಗಿದೆ. ಇದಕ್ಕೆ ಸಮಾನವಾಗಿ ಇತರ ದ್ರಾವಿಡ ಭಾಷೆಗಳಲ್ಲಿ ಶಬ್ದರೂಪಗಳು ಹೀಗಿವೆ: ಒನ್ರು (ತ), ಒಕಟಿ (ತೆ), ಒನ್ನು (ಮ) ಒಞ್ಜಿ (ತು).

೨. ಇರ್ > ಎರಡು ಆಯಿತು. ಇರ್ವರ್ (ಇಬ್ಬರು) ಎಂಬಲ್ಲಿ ಹಾಗೇ ಉಳಿದಿದೆ. ಈ 'ಎರಡು' ಶಬ್ದ ಹಳಗನ್ನಡದಲ್ಲಿ ಎರಟ್ಟಾತು ಎಂದು 'ಟ್' ಆಗಿರುವುದು ಆಶ್ಚರ್ಯ ಎನ್ನುತ್ತಾರೆ ನರಸಿಂಹಾಚಾರ್ಯರು. ಕನ್ನಡದಲ್ಲಿ ಮಾತ್ರ ಹೀಗಾಗಿದೆ. ಇರಂಡು (ತ), ರೆಂಡು (ತೆ), ರೆಂಡು (ಮ), ರಡ್ಡ್ (ತು).

೩. ಮೂ > ಮೂಱು > ಮೂರು. ಸಮಾಸಪದಗಳಲ್ಲಿ 'ಮೂ' ಎಂಬುದು 'ಮು' ಎಂದು ಹ್ರಸ್ವವಾಗುತ್ತದೆ. ಕೈಪಿಡಿಯಲ್ಲಿ 'ಮುಯ್' ಎಂದಿದೆ. ಮೂನ್ರು (ತ), ಮೂಡು (ತೆ), ಮೂನ್ನು (ಮ), ಮೂಜಿ (ತು). ಎರಡು, ಮೂಱು ಎಂಬ ಕನ್ನಡ ಶಬ್ದಗಳೇ ಮೂಲದವು, ತಮಿಳು, ತೆಲುಗಿನ ಅನುನಾಸಿಕಸಹಿತ ಉಚ್ಚಾರಣೆ (ಇರಂಡು, ಮೂನ್ರು, ರೆಂಡು) ಅನಂತರದವು. ತುಳುವಿನಲ್ಲೂ ಅನುನಾಸಿಕವಿಲ್ಲ.

೪. ನಾಲ್ ಎಂಬ ಕನ್ನಡ ಶಬ್ದವೇ ಪ್ರಾಚೀನವಾದದ್ದು. ನಾಲ್ > ನಾಲ್ಕು ಎಂದು ಹೊಸಗನ್ನಡದಲ್ಲಾಗಿದೆ. ತಮಿಳಿನ 'ನಾಂಗು' ಎಂಬಲ್ಲಿ ಲ್ > ನ್ ಆಗಿದೆ. ಹಳೆಯ ತಮಿಳಿನಲ್ಲಿ 'ನಾಲ್' ಇದೆ. ನಾಲುಗು (ತೆ), ನಾಲ್, ನಾಂಗು (ಮ) ನಾಲು (ತು).

೫. ಅಯ್, ಐ > ಅಯ್ದು, ಐದು. ತಮಿಳು, ಮಲೆಯಾಳಂನಲ್ಲಿ ಮಾತ್ರ ಐನ್ದು, ಅಞ್ಜು ಎಂದಿದೆ. ತುಳುವಿನಲ್ಲಿ ಐನು.

೬. ಅಱ್ ಮೂಲದಿಂದ ಆಱು ಆಗಿದೆ. ತಮಿಳು, ತೆಲುಗು, ಮಲೆಯಾಳಗಳಲ್ಲಿ ಆಱು ಎಂದೇ ಇದ್ದರೆ ತುಳುವಿನಲ್ಲಿ ಮಾತ್ರ 'ಆಜಿ' ಎಂದಿದೆ.

೭. ಏಟ್ > ಏಟು > ಏಳು ಎಂದಾಗಿದೆ. ತೆಲುಗಿನಲ್ಲಿ ಳ್ > ಡ್ ಆಯಿತು-ಏಡು. ತಮಿಳು, ಮಲೆಯಾಳಂಗಳಲ್ಲಿ 'ಟ'ಕಾರಯುಕ್ತ ಏಟು ಇದೆ. ತುಳುವಿನಲ್ಲಿ ಕನ್ನಡದಂತೆ ಏಳು ಆಗಿದೆ. ಏಟ್ ಸಮಾಸಪದವಾದಾಗ ಎಟ್ಪತ್ತು > ಎರ್ಪತ್ತು > ಎಪ್ಪತ್ತು ಎಂದು ಸಜಾತೀಯ ದ್ವಿತ್ವ ಪಡೆದಿದೆ.

೮. ಎಣ್ > ಎಣ್ + ಟು – ಎಂಟು. ತುಳುವಿನಲ್ಲಿ ಎಣ್ಮ ಇದೆ. ತೆಲುಗಿನಲ್ಲಿ ಎನಿಮಿದಿ. ತಮಿಳು, ಮಲೆಯಾಳಂಗಳಲ್ಲಿ ಎಟ್ಟು. ಮೂಲದ್ರಾವಿಡದಲ್ಲಿ 'ಣ್' ಇದ್ದುದು ಸ್ಪಷ್ಟ.

೯. ದ್ರಾವಿಡ ಭಾಷೆಗಳಲ್ಲಿ 'ಒಂಬತ್ತು' ಸಂಖ್ಯಾವಾಚಕ ಶಬ್ದದ ವಿವರಣೆ ತೊಡಕಿನದಾಗಿದೆ. ಒಂದರಿಂದ ಎಂಟು ಮತ್ತು ನೂರು ಸ್ವತಂತ್ರಶಬ್ದಗಳಾದರೆ ಒಂಬತ್ತು ಮಾತ್ರ ಸಮಾಸ ಶಬ್ದವಾಗಿದೆ, ಎಲ್ಲ ದ್ರಾವಿಡ ಭಾಷೆಗಳಲ್ಲಿ. ಹಾಗಿದ್ದರೆ 'ಒಂಬತ್ತು'ಕ್ಕೆ ಸ್ವತಂತ್ರಶಬ್ದವಿಲ್ಲವೆ? ಡಾ. ಕಾಲ್ಡ್‌ವೆಲ್ ಇದರ ಮೂಲರೂಪ ಮರೆಯಾಗಿ 'ತೊನ್' ಮತ್ತು 'ಪತ್ತು' ಸೇರಿ ಇದಾಗಿದೆ ಎನ್ನುತ್ತಾರೆ. ತೆಲುಗಿನಲ್ಲಿ ಮಾತ್ರ ಹೀಗೆ. 'ತೊಮ್ಮಿದಿ' ಎಂದಿದೆ. ತೊಮ್ಮಿದಿ ಎಂದರೆ ಒಂಬತ್ತು. ತಮಿಳಿನಲ್ಲಿ ಒನ್ಬದು (ತೊಂಡು), ಮಲೆಯಾಳ 'ಒನ್ಬದು', ತುಳು 'ಒನ್ಬ', ಕೊಡಗು 'ಒಯಿನ್ಬ', ಕನ್ನಡ 'ಒಂಬತ್ತು'. ಇಲ್ಲೆಲ್ಲ ಒಂದು ಕಡಮೆ ಹತ್ತು ಎಂದರ್ಥವಾಗುತ್ತದೆ. ಆದರೆ ತೆಲುಗಿನ ತೊಮ್ಮಿದಿ? ಎನಿಮಿದಿ (ಎಂಟು) ಎಂಬಂತೆ ತೊಮ್ಮಿದಿ ದ್ರಾವಿಡ ಮೂಲದಲ್ಲಿದ್ದುದನ್ನು ಸೂಚಿಸುತ್ತದೆಯೆ? 'ತೊನ್'ಗೂ ಮೂಲ 'ತೊಳ್' ಎನ್ನುತ್ತಾರೆ ಕಾಲ್ಡ್‌ವೆಲ್. ತೊಳ್ ಎಂದರೆ ತೆಲುಗಿನಲ್ಲಿ ಮೊದಲಿನ, ಹಿಂದಿನ ಎಂದರ್ಥವಿದೆ ಎನ್ನುತ್ತಾರೆ. ಉದಾ : ತೊಲಿವಾರ (ಮೊದಲನೆಯ ವಾರ), ತೊಲ್‌ನಾಡು (ಹಿಂದಿನ ದಿನ) ಇತ್ಯಾದಿ. ಕನ್ನಡ, ತಮಿಳು, ಮಲೆಯಾಳಂ, ತುಳು ಮೊದಲಾದ ದ್ರಾವಿಡ ಭಾಷೆಗಳಲ್ಲಿ ತೆಲುಗಿನ ತೊಳ್ > ತೊನ್ ಎಂಬುದು 'ಒನ್' ಆಗಿರಬೇಕು ಎಂದು ಒಪ್ಪಿದರೂ, ಇನ್ನೊಂದು ತೊಡಕಿದೆ. ೯೦ ಸಂಖ್ಯೆ. ಕನ್ನಡ 'ತೊಂಬತ್ತು', ತೆಲುಗು 'ತೊಂಭೈ'–'ತೊಂಬದಿ', ತುಳು 'ಸೊಣ್ಬ'–ಇಲ್ಲೆಲ್ಲ ತೊನ್–೯, ಹತ್ತು–ತೊಂಬತ್ತು ಎನ್ನುತ್ತಾರೆ. ಒಂಬತ್ತು ಹತ್ತು ತೊಂಬತ್ತು ಎಂಬಲ್ಲಿ ಮಾತ್ರ 'ತೊನ್'ಗೆ ೯ ಎಂಬ ವಿವರಣೆ ಏಕೆ? ಇಲ್ಲಿ ಹಿಂದಿನ, ಮೊದಲಿನ ಎಂದು ಏಕೆ ಹೇಳುವುದಿಲ್ಲ? ಹಾಗೇ ತೆಲುಗಿನಲ್ಲಿ 'ತೊಮ್ಮನೂಱು' ಎಂದರೆ ೯೦೦. ಇಲ್ಲೂ ತೊನ್ ಎಂದರೆ ೯. ಆದರೆ ತಮಿಳಿನಲ್ಲಿ ತೊಣ್ಣೂರು–೯೦. ತೊಣ್ + ನೂರು, ನೂರಕ್ಕೆ ಹಿಂದಿನ ಎಂದರ್ಥ. ತೊಣ್ಣಾಯಿರ–೯೦೦, ಸಾವಿರಕ್ಕೆ ಹಿಂದಿನ ಎಂದರ್ಥ. ಹೀಗೆ ತೊನ್, ತೊಳ್, ತೊಣ್ ಎಂಬುವಕ್ಕೆ ಒಂದೆಡೆ ಹಿಂದಿನ ಎಂದರ್ಥ ಹೇಳುವುದು, ಇನ್ನೊಂದೆಡೆ ೯ ಎನ್ನುವುದು ಸಮಂಜಸವಾಗಿಲ್ಲ. ಆದ್ದರಿಂದಲೇ ಇದು ತೊಡಕಾಗಿಯೇ ಉಳಿದಿದೆ, ಸರ್ವಸಮ್ಮತ ಪರಿಹಾರ

ವಿನ್ನೂ ಬಂದಿಲ್ಲ. ಬಹುಶಃ ೯ ಅರ್ಥದಲ್ಲಿ ತೊನ್ ಇದ್ದು, 'ಒಂಬತ್ತು' ಸಮಾಸ ಪದ ರೂಢಿಗೆ ಬಂದು ತೊನ್ ಬಿಟ್ಟುಹೋಗಿರಬಹುದು. ತೆಲುಗಿನಲ್ಲೇ 'ತೊಮ್ಮಿದಿ' ಎಂದಾಗ ಹಿಂದಿನ ಎಂದರ್ಥ ಹೇಳುವುದು, ತೊಂಬದಿ, ತೊಮ್ಮನೂಱು (೯೦, ೯೦೦ ಒಂಬತ್ತುಹತ್ತು, ಒಂಬತ್ತುನೂರು) ಎಂದಾಗ 'ಒಂಭತ್ತು' ಅರ್ಥ ಹೇಳುವುದು ಸಮಸ್ಯೆ ಇರುವುದನ್ನು ಸೂಚಿಸುತ್ತದೆ.

ಕೇಶಿರಾಜ ಒಂಬತ್ತಕ್ಕೆ ಪತ್ತು ಪರವಾದರೆ 'ತೊಮ್' ಎಂದೂ, ನೂರು ಸಾಸಿರ ಪರವಾದರೆ 'ಒಂಬಯ್' ಎಂದೂ ಆದೇಶವಾಗುತ್ತದೆ ಎಂದಿದ್ದಾನೆ.

೧೦. ಪತ್ತು > ಹತ್ತು ಆಗಿದೆ, ಹೊಸಗನ್ನಡದಲ್ಲಿ. ಹತ್ತಕ್ಕೆ ತೆಲುಗಿನಲ್ಲಿ ಮಾತ್ರ ಪದಿ, ಮಿಕ್ಕ ಭಾಷೆಗಳಲ್ಲಿ ಪತ್ತು ಎಂದಿದೆ. ಪತ್ತಕ್ಕೆ ಒಂದು, ಎರಡು ಪರವಾದರೆ 'ಪನ್' ಆಗುತ್ತದೆ: ಪನ್ನೊಂದು > ಹನ್ನೊಂದು, ಪನ್ನೆರಡು > ಹನ್ನೆರಡು. ಮೂರು, ನಾಲ್ಕು ಮುಂತಾಗಿ ಉಳಿದ ಸಂಖ್ಯೆಗಳು ಪರವಾದಾಗ 'ಪದಿ' ಆಗುತ್ತದೆ. ಹತ್ತರ ಪಟ್ಟುಗಳನ್ನು ಹೇಳುವಾಗ ಸಂಖ್ಯೆ ಮೊದಲು ಬಂದು ಹತ್ತು ಅನಂತರ ಬರುತ್ತದೆ: ಇಪ್ಪತ್ತು, ಮೂವತ್ತು, ನಾಲ್ವತ್ತು (ನಲವತ್ತು), ಐವತ್ತು, ಅರುವತ್ತು ಇತ್ಯಾದಿ. ಇಲ್ಲಿ 'ಪತ್ತು'ವಿನ 'ಪ'ಕ್ಕೆ 'ವ' ಆದೇಶವಾಗುತ್ತದೆ.

೧೧. ನೂಱು > ನೂರು ಎಂದು ಹೊಸಗನ್ನಡದಲ್ಲಿದೆ. ತುಳುವಿನಲ್ಲಿ 'ನೂಡು' ಎಂದಿದ್ದರೆ ತಮಿಳು, ತೆಲುಗು, ಮಲೆಯಾಳಂಗಳಲ್ಲಿ ನೂಱು ಎಂದೇ ಇದೆ. ತೆಲುಗಿನಲ್ಲಿ ಇದರ ಜೊತೆಗೆ 'ವಂದ' ಎಂಬ ಶಬ್ದವಿದೆ.

೧೨. ಸಂಸ್ಕೃತ ಸಹಸ್ರದಿಂದ ಸಾವಿರ, ಆಯಿರ (ತ) ಎಂದು ತದ್ಭವ ಮಾಡಿಕೊಳ್ಳಲಾಗಿದೆ. ತೆಲುಗಿನಲ್ಲಿ ಮಾತ್ರ 'ವೇಯಿ' ಎಂಬ ಶಬ್ದವಿದೆ.

ಸಂಖ್ಯಾವಾಚಕಗಳಿಗೆ 'ಅನೆಯ' ಪ್ರತ್ಯಯ ಸೇರಿಸಿದಾಗ ಆ ಶಬ್ದರೂಪ ವಸ್ತುವಿನ ಕ್ರಮವನ್ನು ಸೂಚಿಸುತ್ತದೆ. ಉದಾ: ಒಂದನೆಯ, ಎರಡನೆಯ ಇತ್ಯಾದಿ. ಸಂಖ್ಯಾವಾಚಕಗಳ ಮೂಲರೂಪಗಳು ಪ್ರತ್ಯಯಗಳನ್ನು ಪಡೆದು ಪುರುಷವಾಚಕಗಳಾಗುತ್ತವೆ. ಅಲ್ಲಿ 'ವ'ಕಾರಾಗಮವೂ ಆಗುತ್ತದೆ. ಉದಾ: ಒರ್ವನ್, ಇರ್ವರ್, ಮೂವರ್, ನಾಲ್ವರ್ ಇತ್ಯಾದಿ. ಹೊಸಗನ್ನಡದಲ್ಲಿ ಒಬ್ಬನು, ಒಬ್ಬಳು, ಇಬ್ಬರು ಇತ್ಯಾದಿ. ಹೊಸಗನ್ನಡದಲ್ಲಿ ಮಾತ್ರ ಮೂರಕ್ಕಿಂತ ಹೆಚ್ಚು ಸಂಖ್ಯೆಯವರನ್ನು ಕುರಿತು ಹೇಳುವಾಗ ಪುರುಷವಾಚಕರೂಪ ಮಾಡಿಕೊಳ್ಳದೆ, ಸಂಖ್ಯೆಯೊಡನೆ ಜನ, ಮಂದಿ ಶಬ್ದವನ್ನು ಸೇರಿಸಲಾಗುವುದು. ಉದಾ: ನಾಲ್ಕು ಜನ, ಐದು ಮಂದಿ, ಎಂಟು ಜನ, ಹತ್ತು ಮಂದಿ ಇತ್ಯಾದಿ.

## ೧೮. ಕ್ರಿಯಾಪದಗಳು

**ಧಾತುಗಳು :** ಭಾಷೆಯಲ್ಲಿ ಕ್ರಿಯಾಪದಗಳೇ ಕೋಶದ ಮೂಲ, ಉಗಮ ಸ್ಥಾನ. ಆದ್ದರಿಂದ ಒಂದು ಭಾಷೆಯ ಮೂಲ ತಿಳಿಯಬೇಕಿದ್ದರೆ ಕ್ರಿಯಾಪದವನ್ನು ನೋಡಬೇಕು. ಕ್ರಿಯಾಪದ ಮತ್ತು ಸರ್ವನಾಮಗಳು ಮಾರ್ಪಾಡಾಗುವುದು, ಬೇರೆ ಭಾಷೆಯ ಪ್ರಭಾವಕ್ಕೆ ಒಳಗಾಗಿ ಬದಲಾಗುವುದು, ಸಾಧ್ಯವೇ ಇಲ್ಲ ಎನ್ನಬಹುದು. ಕೋಶದ ಮೂಲ ಕ್ರಿಯಾಪದ ಎನ್ನಲು ಕಾರಣ ಕ್ರಿಯಾಪದ ಅಥವಾ ಧಾತುವಿನಿಂದ ಅನೇಕ ಪದಗಳು ಹುಟ್ಟುವುದಾಗಿದೆ. 'ಮಿನ್' ಧಾತುವಿನಿಂದ ಮಿನುಗುವುದು, ಮಿಂಚು, ಮೀನು, ಮಿಣುಕುಹುಳ ಮೊದಲಾದುವೂ, 'ಬೆಳ್' ಧಾತುವಿನಿಂದ ಬೆಳಗು, ಬೆಳಕು, ಬೆಳಗ್ಗೆ, ಬೆಳ್ಳಿ, ಬಿಳುಪು ಮೊದಲಾದ ಶಬ್ದಗಳೂ ಹುಟ್ಟಿದುವು, ಕೋಶದ ಬೆಳವಣಿಗೆಗೆ ಕಾರಣವಾದುವು.

ಭಾಷೆಯ ಮೂಲ ಧಾತು ಎಂದಾಯಿತು. 'ಧಾ' ಎಂದರೆ ಆಧಾರವಾಗು ಎಂದರ್ಥ. ಯಾವುದು ಧಾತು ಎಂದು ತಿಳಿಯುವ ಬಗೆ ಹೇಗೆ? ಕೇಶಿರಾಜ ಹೀಗೆ ಹೇಳಿದ್ದಾನೆ: "ಕ್ರಿಯಾರ್ಥದ ಮೂಲಂ, ಪ್ರತ್ಯಯರಹಿತಂ ಧಾತು, ಅದಂ ಅಭಾವ ಕ್ರಿಯೆಯೊಳ್ ನಿಯತಂ ನಿಶ್ಚಯಿಪುದು." ಕ್ರಿಯಾಪದದ ಅರ್ಥದ ಮೂಲವೂ ಪ್ರತ್ಯಯವಿಲ್ಲದುದೂ, ನಿಷೇಧಕ್ರಿಯೆಯಲ್ಲಿ ಕಾಣುವ ಸ್ವರೂಪದ್ದೂ ಧಾತು. ನಿಷೇಧ ಕ್ರಿಯೆಗಿಂತಲೂ ವಿಧ್ಯರ್ಥದಲ್ಲಿ ಮಧ್ಯಮಪುರುಷ ಏಕವಚನದಲ್ಲಿ ಧಾತುವನ್ನು ಕಾಣಬಹುದು. ಕನ್ನಡದಲ್ಲಿ ಧಾತುವೇ ಮಧ್ಯಮ ಪುರುಷ ಏಕವಚನವನ್ನು ಸೂಚಿಸುತ್ತದೆ: ಮಾಡು, ಹೋಗು, ಗೆಯ್, ಸಾಯ್ ಇತ್ಯಾದಿ.

ಡಾ. ರಾಮಕೃಷ್ಣಯ್ಯನವರು ಎಲ್ಲ ಭಾಷೆಗಳೂ ಧಾತುವಿನಿಂದಲೇ ಪ್ರಾರಂಭವಾದುವು, ಆ ಧಾತುಗಳು ಮೊದಲು ಏಕಾಕ್ಷರದವೇ ಆಗಿದ್ದುವು ಎನ್ನುತ್ತಾರೆ. ಕನ್ನಡದ ಮೂಲ ಧಾತುಗಳು ಬಹುಪಾಲು ಏಕಾಕ್ಷರದವೇ ಆಗಿದ್ದುವು. ಉದಾ : ಬಾ, ಪೋ, ಜೀ, ಸಾ, ತೇ (ಯ್), ಈ, ಮೇ ಇತ್ಯಾದಿ. ಕೇಶಿರಾಜ ಧಾತು ಪ್ರಕರಣದಲ್ಲಿ ಪಟ್ಟಿ ಕೊಟ್ಟಿದ್ದಾನೆ. ಮಕ್ಕಳೂ ಒಂದಕ್ಷರದ ಧಾತುಗಳಿಂದಲೇ ಅರ್ಥ ಸೂಚಿಸುತ್ತವೆ. ಕನ್ನಡದ ಅನೇಕ ಧಾತುಗಳು ತಮಿಳಿನಂತೆ ವ್ಯಂಜನಾಂತಗಳಾಗಿದ್ದುವು. ಉದಾ : ಕಾಣ್, ತಿನ್, ನೋನ್, ಪಣ್, ಕಾಯ್, ಉಣ್, ನಿಲ್, ಕೊಲ್, ಕೊಳ್, ಕಳ್, ಕೇಳ್, ಪೂಣ್ ಇತ್ಯಾದಿ. ತೆಲುಗು ಮಾತ್ರ ಸ್ವರಾಂತ ಧಾತುಗಳನ್ನು ಬಹಳ ಕಾಲದಿಂದಲೂ ಪಡೆದಿದೆ. ಉದಾ : ಕನು, ನೋಮು, ತಿನು, ಚೇಯು, ಪೂನು, ಪೊಗಡು, ತೆಲಿಯು ಇತ್ಯಾದಿ. ಹೊಸಗನ್ನಡದಲ್ಲಿ ಧಾತುಗಳು ಸ್ವರಾಂತವಾಗಿವೆ.

**ದ್ರಾವಿಡ ಭಾಷೆಗಳಲ್ಲಿ ಕ್ರಿಯಾಪದಗಳಿವೆಯೇ? :** ಆಧುನಿಕ ವಿದ್ವಾಂಸರು "ದ್ರಾವಿಡ ಭಾಷೆಗಳಲ್ಲಿ ನ್ಯಾಯವಾಗಿ ಕ್ರಿಯಾಪದಗಳೇ ಇಲ್ಲ" ಎನ್ನುತ್ತಾರೆ ಎಂದು

ಕನ್ನಡ ಕೈಪಿಡಿಯಲ್ಲಿ ಹೇಳಿದೆ. ಅದೇ ಅರ್ಥದಲ್ಲಿ ಡಾ. ರಾಮಕೃಷ್ಣಯ್ಯನವರು "Dravidian roots are not all verbal roots" ಎಂದಿದ್ದಾರೆ. ಕನ್ನಡದಲ್ಲಿ, ದ್ರಾವಿಡಭಾಷೆಗಳಲ್ಲಿ, ಕ್ರಿಯಾರ್ಥಕೊಡುವ ಧಾತುಗಳೇ ಇಲ್ಲವೆಂದು ಅರ್ಥವಲ್ಲ. ಧಾತುಗಳಿವೆ. ಧಾತುಗಳಿಗೆ ಆಖ್ಯಾತಪ್ರತ್ಯಯ ಸೇರಿಸಿ ಆದ ಕ್ರಿಯಾ ಪದಗಳು ವಾಸ್ತವವಾಗಿ 'ಕ್ರಿಯಾಪದ' ಎಂಬರ್ಥದಲ್ಲಿ, ಸಂಸ್ಕೃತ, ಇಂಗ್ಲಿಷ್ ಮುಂತಾದ ಭಾಷೆಗಳಲ್ಲಿರುವಂತೆ, ಕ್ರಿಯಾಪದಗಳಲ್ಲ. ಉದಾ: ಗಮ್=to go, ಹೋಗು. ಗಚ್ಛಾಮಿ ಹೋಗುತ್ತೇನೆ. ಗಚ್ಛಸಿ=ಹೋಗುತ್ತೀಯೆ. ಗಚ್ಛತಿ= ಹೋಗುತ್ತಾನೆ, ಹೋಗುತ್ತಾಳೆ, ಹೋಗುತ್ತದೆ. ಇಲ್ಲಿ ಮಿ, ಸಿ, ತಿ ಆಖ್ಯಾತ ಪ್ರತ್ಯಯಗಳು, ವರ್ತಮಾನಕಾಲ ಏಕವಚನ, ಉತ್ತಮಪುರುಷ ಮಧ್ಯಮಪುರುಷ ಅನ್ಯಪುರುಷಕ್ಕೆ ಸೇರಿದುವಾಗಿವೆ. ಕನ್ನಡದಲ್ಲಿ ಪೋದಪೆಂ, ಪೋದಪಯ್, ಪೋದಪಂ (ಪೋದಪಳ್, ಪೋದಪುದು) ಎಂದುಂಟು. ಈ ಮೂರು ಕ್ರಿಯಾಪದಗಳೂ ನ್ಯಾಯವಾಗಿ ಕ್ರಿಯಾಪದಗಳಲ್ಲ. ಏಕೆಂದರೆ 'ಪೋ' (ಪೋಗು) ಧಾತುವಿಗೆ ಎನ್. ಅಯ್, ಅನ್ ಎಂಬ ಆಖ್ಯಾತ ಪ್ರತ್ಯಯಗಳು ಸೇರಿ ಆಗಿವೆ. ಈ ಆಖ್ಯಾತ ಪ್ರತ್ಯಯಗಳು ಕನ್ನಡದಲ್ಲಿ ವಾಸ್ತವವಾಗಿ ಸರ್ವನಾಮಗಳು. ದ್ರಾವಿಡ ಭಾಷೆ ಗಳಲ್ಲಿ ಸರ್ವನಾಮಗಳೇ ಆಖ್ಯಾತಪ್ರತ್ಯಯಗಳಾಗಿವೆಯೆಂದು ಹಿಂದೆ ಹೇಳಲಾಯಿತು. ಆದ್ದರಿಂದ ಧಾತು+ಸರ್ವನಾಮ ಕ್ರಿಯಾಪದ ಹೇಗಾಗುತ್ತದೆ. ಅದೂ ನಾಮಪದ ವಾಗುತ್ತದೆ, ನಿಜವಾದ ಅರ್ಥದಲ್ಲಿ. ಅಂದರೆ ಒಂದು ವಾಕ್ಯದಲ್ಲಿ ಎರಡು ನಾಮಪದ ಗಳಾದುವು. ಅವನ್ ಬಂದನ್ ಎಂದಾಗ ಅವನ್+ಬಂದ+ಅವನ್=ಅವನು ಬಂದವನು ಎಂದು ನ್ಯಾಯವಾಗಿ ಅರ್ಥ. ಇಲ್ಲಿ ಎರಡೂ ನಾಮಪದಗಳು. ಒಂದು ನಾಮಪದ (ಸರ್ವನಾಮ), ಇನ್ನೊಂದು ಸಾಧಿತನಾಮ (ಕೃದಂತ_ಧಾತುವಿನಿಂದ ಸಾಧಿಸಿದ ನಾಮಪದ; ಉಳಿದ ನಾಮಪದಗಳಂತೆ ಇದಕ್ಕೂ ವಿಭಕ್ತಿ ಪ್ರತ್ಯಯ ಸೇರಿಸಬಹುದು: ಬಂದವನು, ಬಂದವನನ್ನು, ಬಂದವನಿಂದ, ಬಂದವನಿಗೆ, ಬಂದವನ, ಬಂದವನಲ್ಲಿ) ಸಂಸ್ಕೃತದಲ್ಲಿ ಹಾಗಲ್ಲ. ಆಖ್ಯಾತಪ್ರತ್ಯಯಗಳು (Conjugational terminations) ಕ್ರಿಯಾರ್ಥವನ್ನೇ ಕೊಡುತ್ತವೆ.

ಎರಡನೆಯದಾಗಿ, ಕನ್ನಡದ ಆಖ್ಯಾತಪ್ರತ್ಯಯಗಳು (ಇವನ್ನು ಈ ವೈಶಿಷ್ಟ್ಯ ಕಾರಣವಾಗಿ Pronominal terminations ಎನ್ನುತ್ತಾರೆ) ಧಾತುಗಳಿಗೆ ಮಾತ್ರವಲ್ಲದೆ ನಾಮಪದ, ಗುಣವಚನ, ಸಂಖ್ಯಾವಾಚಕಗಳಿಗೂ ಹತ್ತುತ್ತವೆ. ಉದಾ: ಕವಿ ಕೇಶವನೆನ್, ನೀನ್ ಬೆಡಂಗನಯ್, ಅವನೊಳ್ಳಿದನ್, ಇವರ್ ನಲ್ಲರ್, ನೀನಾರ್, ಬಂದನಾರ್ ಇತ್ಯಾದಿ. ಇಲ್ಲೆಲ್ಲ ಆಖ್ಯಾತಪ್ರತ್ಯಯಗಳು ಸೇರಿರುವುದನ್ನು ಗಮನಿಸಬಹುದು. ಹೊಸಗನ್ನಡದಲ್ಲೂ ಸುಂದರನಾಗಿದ್ದೇನೆ, ಸುಂದರನಾಗಿದ್ದೀಯೆ, ಸುಂದರನಾಗಿದ್ದಾನೆ ಎಂದು ಹೇಳುವುದು ರೂಢಿಯಲ್ಲಿದೆ.

ಆದರೆ ಸಂಸ್ಕೃತದಲ್ಲಿ, ಇತರ ಆರ್ಯಭಾಷೆಗಳಲ್ಲಿ ಹೀಗಿಲ್ಲ. ಹಿಂದೆ ಉದಾಹರಿಸಿದ ಸಂಸ್ಕೃತದ ಮಿ, ಸಿ, ತಿ ಆಖ್ಯಾತಪ್ರತ್ಯಯಗಳನ್ನು 'ರಾಮ' ನಾಮಪದಕ್ಕಾಗಲೀ, 'ಸುಂದರ' ಗುಣವಚನಕ್ಕಾಗಲೀ ಸೇರಿಸುವಂತಿಲ್ಲ, ಸೇರುವುದೂ ಇಲ್ಲ. ಅಂದರೆ ಕನ್ನಡದಲ್ಲಿ ಕ್ರಿಯಾಪದವೆನ್ನುವುದು ನ್ಯಾಯವಾಗಿ ಹೇಳುವುದಾದರೆ ನಾಮಪದವೆ. ಆ ಕಾರಣವೆ ಕ್ರಿಯಾಪದಗಳಿಗೂ ವಿಭಕ್ತಿಪ್ರತ್ಯಯಗಳನ್ನು ಸೇರಿಸಬಹುದಾಗಿದೆ. ಉದಾ : ಪಿರಿದು, ಪಿರಿದಂ, ಪಿರಿದಱಿಂ ಎಂಬಂತೆ ಮಾಡಿದುದು, ಮಾಡಿದುದಱಿಂ, ನಲಿದರ್, ನಲಿದರಂ, ನಲಿದರಿಂ, ನಲಿದರ್ಗೆ ಇತ್ಯಾದಿ. ಆದುದರಿಂದ ಮಾಡು, ಹೋಗು, ಬಾ ಮೊದಲಾದ ವಿಧ್ಯರ್ಥ ಕ್ರಿಯಾಪದಗಳನ್ನು ಬಿಟ್ಟರೆ ಉಳಿದ ಪೂರ್ಣ ಕ್ರಿಯಾಪದಗಳೆಲ್ಲ ನಾಮಪದಗಳೇ ಆಗಿವೆ. ವಿಧ್ಯರ್ಥದಲ್ಲೂ ಮಧ್ಯಮಪುರುಷ ಏಕವಚನದಲ್ಲಿ ಧಾತುಗಳೇ ಇರುವುದರಿಂದ ಮಾತ್ರ. ಉಳಿದೆಡೆ ಅವು ಕೃದಂತವೋ, ಭಾವನಾಮವೋ ಆಗಿರುತ್ತವೆ.

ಆಖ್ಯಾತಪ್ರತ್ಯಯಗಳು ಅಥವಾ ಪುರುಷವಾಚಕಪ್ರತ್ಯಯಗಳು : ಕನ್ನಡ ತಮಿಳುಗಳಲ್ಲಿ ಆಖ್ಯಾತಪ್ರತ್ಯಯಗಳು ಹೆಚ್ಚುಕಡಿಮೆ ಒಂದೇ ಬಗೆಯಾಗಿವೆ. ತೆಲುಗಿನಲ್ಲಿ ಮಾತ್ರ ವ್ಯತ್ಯಾಸ ಸ್ಪಷ್ಟವಾಗಿ ಕಾಣಬರುತ್ತದೆ.

| | | ಉತ್ತಮಪುರುಷ | ಮಧ್ಯಮಪುರುಷ | ಅನ್ಯಪುರುಷ |
|---|---|---|---|---|
| ಕನ್ನಡ | (ಏ.ವ.) | ಎನ್ | ಅಯ್, ಐ | ಅನ್, ಅಳ್, ಉದು, ತ್ತು, ತು |
| | (ಬ.ವ.) | ಎಮ್ | ಇರ್ | ಅರ್, ಉವು |
| ತಮಿಳು | | ಎನ್, ಏನ್, | ಅಯ್,ಐ,ಇ | ಅನ್, ಆನ್, ಅಳ್, ಆಳ್, ಅದು, ಉ, ಟಿ, ತು |
| | | ಎಮ್, ಎಮ್ | ಇರ್, ಈರ್ | ಅರ್, ಆರ್, ಅನ, ಅ |
| ತೆಲುಗು | | ನು | ವು | ಡು, ಅದಿ |
| | | ಮು | ರು | ರು, ಅವಿ |

ಹೊಸಗನ್ನಡದಲ್ಲಿ ಇವು ವರ್ತಮಾನ, ಭೂತ, ಭವಿಷ್ಯತ್ತುಗಳಲ್ಲಿ ವಿಕರಣಗಳನ್ನು ಪಡೆದು ಅಲ್ಪಸ್ವಲ್ಪ ಬದಲಾವಣೆ ಹೊಂದಿವೆ. ವ್ಯಂಜನಾಂತಗಳು ಸ್ವರಾಂತವಾಗಿರುವುದು ಮುಖ್ಯವಾಗಿ ಗಮನಿಸಬೇಕಾದುದು. ಎನ್ > ಏನು, ಏನೆ ; ಎಮ್ > ಎವು, ಏವೆ ; ಅಯ್ > ಎ ; ಇರ್ > ಇರಿ, ಈರಿ ; ಅನ್ > ಅನು, ಆನೆ ; ಅಳ್ < ಅಳು, ಆಳೆ ; ಅರ್ > ಅರು, ಆರೆ ಇತ್ಯಾದಿ. ಅನ್ಯಪುರುಷ ನಪುಂಸಕದಲ್ಲಿ ಹಳೆಯ ರೂಪಗಳೂ ಉಳಿದಿವೆ.

ಉತ್ತಮಪುರುಷ ಏಕವಚನದ 'ಎನ್' ಪ್ರತ್ಯಯ ನಡುಗನ್ನಡದಲ್ಲಿ 'ಎನು' ಎಂದಾಯಿತು. ಹೊಸಗನ್ನಡದಲ್ಲಿಯೂ ಅದು ಉಳಿದಿದೆ : ಬಂದೆನು, ಬರುವೆನು,

ಬರುತ್ತೇನೆ. ಆಡುನುಡಿಯಲ್ಲಿ 'ಎ' ಎಂದಾಗಿದೆ: ಬಂದೆ, ಹೋದೆ, ಮಾಡಿದೆ. ಉತ್ತಮಪುರುಷ ಬಹುವಚನದಲ್ಲಿ ಎಮ್ > ಎವು, ಏವೆ ಎಂದಾಗಿದೆ, ಹೊಸಗನ್ನಡ ದಲ್ಲಿ. ಉದಾ: ಬರುವೆವು, ಬಂದೆವು, ಬರುತ್ತೇವೆ ಇತ್ಯಾದಿ. ಮ್ > ವ್ ಆಗಿ ಉಕಾರ ಸೇರಿ 'ಎವು' ಎಂದಾಯಿತು.

ಮಧ್ಯಮಪುರುಷ ಏಕವಚನದಲ್ಲಿ ಹಳಗನ್ನಡದಲ್ಲಿ 'ಅಯ್', ಕೆಲವೆಡೆ 'ಎ' ಪ್ರತ್ಯಯ ರೂಢಿಯಲ್ಲಿತ್ತು. ನಡುಗನ್ನಡದಲ್ಲಿ 'ಎ' ರೂಪ ಹೆಚ್ಚು ರೂಢಿಗೆ ಬಂದಿತು; ಹೊಸಗನ್ನಡದಲ್ಲೂ ಅದೇ ಉಳಿದಿದೆ. ಆಡುನುಡಿಯಲ್ಲಿ 'ಇ' ಕಾಣ ಬರುತ್ತದೆ. ಉದಾ: ನೀನು ಬಂದೆ, ನೀನು ಬರುವೆ, ನೀನು ಬರುತ್ತೀಯೆ; ನೀ ಬಂದಿ, ಬರುತ್ತೀ ಇತ್ಯಾದಿ. ಬಹುವಚನದಲ್ಲಿ ಹಳಗನ್ನಡದ ಇರ್ > ಇರಿ ಆಗಿದೆ, ನಡುಗನ್ನಡ ಹೊಸಗನ್ನಡ ಎರಡರಲ್ಲೂ. ಬಂದಿರಿ, ಹೋದಿರಿ ಇತ್ಯಾದಿ.

ಅನ್ಯಪುರುಷದಲ್ಲಿ ಪುಲ್ಲಿಂಗ ಸ್ತ್ರೀಲಿಂಗ ಏಕವಚನಗಳಿಗೆ ಬೇರೆ ಬೇರೆ ಪ್ರತ್ಯಯ ಗಳಿದ್ದುವು: ಅನ್, ಅಳ್. ಅವು ಸ್ವರಾಂತವಾಗಿ ಅನು, ಅಳು, ಅ ಎಂದಾಗಿವೆ. ಬಂದನು, ಬಂದಳು, ಹೋದ, ಕೇಳಿದ ಇತ್ಯಾದಿ. ಅಳು > ಅಲು ಎಂದು ಆಡುನುಡಿ ಯಲ್ಲಿ ಕೆಲವೆಡೆ ಆಗಿದೆ: ಬಂದ್ಲು, ಹೋದ್ಲು ಎಂಬಂತೆ. ಪುಲ್ಲಿಂಗ ಸ್ತ್ರೀಲಿಂಗ ಎರಡಕ್ಕೂ ಬಹುವಚನದಲ್ಲಿ ಒಂದೇ ಪ್ರತ್ಯಯವಿತ್ತು: ಆರ್. ಪೂರ್ವದ ಹಳಗನ್ನಡ ದಲ್ಲಿ ಒನ್, ಒರ್, ಅಳ್, ಆರ್ ಎಂಬ ರೂಪಗಳೂ ಇದ್ದುವು. ಹಳಗನ್ನಡದಲ್ಲಿ ಕೆಲವೊಮ್ಮೆ ಪ್ರಯೋಗವಾಗುತ್ತಿದ್ದುವು. ಉದಾ: ಅಱಿವೊನ್ (ಏ.ವ.), ಇತ್ತೋರ್, ಕೊಟ್ಟಾಳ್, ಬಿಟ್ಟಾರ್ ಇತ್ಯಾದಿ. ಹೊಸಗನ್ನಡ ಬಹುವಚನದಲ್ಲಿ ಅರ್ > ಅರು ಆಗಿದೆ. ಬಂದರು, ಹೋದರು ಎಂಬಂತೆ. ಒರ್ > ಎಂಬುದಕ್ಕೆ ಕೃದಂತನಾಮ ರೂಪದಲ್ಲಿ ಬಂದವರು, ಹೋದವರು ಎಂದಾಗಿದೆ.

ಅನ್ಯಪುರುಷ ನಪುಂಸಕ ಏಕವಚನದಲ್ಲಿ ಹಳಗನ್ನಡದ ಉದು, ಅತ್ತು, ಇತ್ತು, ತು ಎಂಬ ಪ್ರತ್ಯಯಗಳಿದ್ದುವು. ನಡುಗನ್ನಡದಲ್ಲೂ ಅವೇ ರೂಢಿಯಲ್ಲಿದ್ದುವು. 'ಉದು'ಗೆ ಬದಲು 'ಅದು' (ಬಂದುದು > ಬಂದದು) ಎಂದೂ ಅಪರೂಪಕ್ಕೆ ಆಗುತ್ತಿತ್ತು. ಈಗ ಹೊಸಗನ್ನಡದಲ್ಲಿ 'ಉದು' ರೂಢಿ. ಜೊತೆಗೆ ಇತು, ತು ರೂಢಿಯಲ್ಲಿವೆ. ಬಂದುದು, ಬಂದಿತು, ಬಂತು ಇತ್ಯಾದಿ. ಉತ್ತರ ಕರ್ನಾಟಕದಲ್ಲಿ ಅದು ಹೆಚ್ಚು ಬಳಕೆಯಲ್ಲಿದೆ. ಕುಲಕರಣಿಯವರು ಬಂತು, ತಂತು ರೂಪಗಳೇ ಹಳೆಯ ರೂಪಗಳೆನ್ನುತ್ತಾರೆ. ಅವು ಗ್ರಾಮ್ಯರೂಪಗಳಾಗಿರುವುದು ಸಾಧ್ಯ.

ಅನ್ಯಪುರುಷ ನಪುಂಸಕ ಬಹುವಚನದಲ್ಲಿ 'ಉವು' ಪ್ರತ್ಯಯ ಹಳಗನ್ನಡ ನಡುಗನ್ನಡ ಎರಡರಲ್ಲೂ ರೂಢಿಯಲ್ಲಿತ್ತು. ಜೊತೆಗೆ 'ಅವು' ಸಹ ಇತ್ತು. ಈಗ ಈ ಎರಡೂ ಪ್ರತ್ಯಯಗಳು ರೂಢಿಯಲ್ಲಿವೆ. ಬಂದುವು, ಹೋದುವು, ತಿಂದವು, ಹಾರಿದವು ಇತ್ಯಾದಿ.

ಹಳಗನ್ನಡದಲ್ಲಿ ಲಿಂಗವಚನ ಪುರುಷಭೇದವಿಲ್ಲದೆ ಪ್ರಯೋಗವಾಗುತ್ತಿದ್ದ ಕುಂ, ಗುಂ ಪ್ರತ್ಯಯಗಳು ನಡುಗನ್ನಡದಲ್ಲಿ 'ಮ್' ಲೋಪವಾಗಿ ಮಾಡುಗು, ಅಕ್ಕು, ಬರ್ಕು ಎಂದಾಯಿತು. ಆದರೆ ಹೊಸಗನ್ನಡದಲ್ಲಿ ಈ ಬಗೆಯ ಪ್ರಯೋಗ ಬೇಕು, ಸಾಕು ಎಂಬಲ್ಲಿ ಮಾತ್ರ ಉಳಿದಿದೆ.

### ವಿಧ್ಯರ್ಥಕ ಕ್ರಿಯೆ

ವಿಧ್ಯರ್ಥಕ ಕ್ರಿಯಾರೂಪಗಳು ಕೇವಲ 'ವಿಧಿ'ಯಲ್ಲಿ (imperative) ಮಾತ್ರವಲ್ಲದೆ ಆಶೀರ್ವಾದ, ಆಜ್ಞೆ, ಪ್ರಾರ್ಥನೆ, ಆಮಂತ್ರಣ ಮೊದಲಾದ ಅರ್ಥಗಳನ್ನು ಸೂಚಿಸುತ್ತವೆ.

ಮಧ್ಯಮಪುರುಷ ಏಕವಚನ: ಕೇಶಿರಾಜ "ಪರಿಣಮಿಸಿರ್ಕುಂ ಪ್ರಕೃತಿ ಸ್ವರೂಪದಿಂ ಮಧ್ಯಮೈಕವಚನ ವಿಧಿಯೊಳ್" ಎಂದಿದ್ದಾನೆ. ಧಾತುವೇ ಮಧ್ಯಮ ಏಕವಚನದಲ್ಲಿ ವಿಧ್ಯರ್ಥ ಕೊಡುತ್ತದೆಂದು ಹಿಂದೆಯೂ ಹೇಳಿದೆ. ಉದಾ: ಪಾಡೆಲೆ ದುಂಬಿ, ಒಗ್ಗಿಸೆಲೆ ಕೋಗಿಲೆ, ಹರಿ ಕೇಳ್ ಧೂಮಪತಾಕ ಕೇಳ್ ನಿಋತಿ ಕೇಳ್ ಇತ್ಯಾದಿ. ಭಟ್ಟಾಕಳಂಕನು ಮಧ್ಯಮಪುರುಷ ಏಕವಚನಕ್ಕೆ 'ಅ' ಎಂಬ ಪ್ರತ್ಯಯವನ್ನೂ ಹೇಳಿದ್ದಾನೆ. ಕೇಶಿರಾಜ 'ಅ' ಪ್ರತ್ಯಯ ಹೇಳದಿದ್ದರೂ 'ಸಂಬೋಧನೆಯಿದ್ದಲ್ಲಿ ವಿಕಲ್ಪದಿಂದ ಧಾತು ಅತ್ವ ಪಡೆಯುತ್ತದೆ' ಎಂದಿದ್ದಾನೆ. ಅದು ವಿಧ್ಯರ್ಥವೇ ಆಗಿದೆ. ಕೇಶಿರಾಜನ ಉದಾಹರಣೆಗಳನ್ನೇ ಭಟ್ಟಾಕಳಂಕನೂ ಕೊಟ್ಟಿದ್ದಾನೆ. ಉದಾ: ಬಾರ ಮುರಾಳಿಕಾಗಮನೆ. ಹೊಸಗನ್ನಡದಲ್ಲಿ ಎ, ಒ ಗಳುಂಟು. ಬಾರೆ, ಹೋಗೆ, ಬಾರೊ, ಹೋಗೊ ಇತ್ಯಾದಿ. ಇದು ಬಹುಶಃ ಬಾರಯ್ಯ, ಬಾರವ್ವ ಎಂಬುದರಿಂದ ಪ್ರಭಾವಿತವಾಗಿ ಬಾರೈ, ಬಾರೌ ಆಗಿ ಅನಂತರ ಬಾರೆ, ಬಾರೊ ಆಗಿರಬಹುದು.

ಮಧ್ಯಮಪುರುಷ ಏಕವಚನದಲ್ಲಿ ಧಾತುವೇ ಇರುವುದು ಬಹುಶಃ ಎಲ್ಲ ಭಾಷೆಗಳಲ್ಲೂ ಕಾಣಬರುವ ಲಕ್ಷಣ: go, come, run ಇತ್ಯಾದಿ. ಇದನ್ನು ಆಧುನಿಕರೂ ಒಪ್ಪಿದ್ದಾರೆ. ಅಷ್ಟೇ ಅಲ್ಲ "Imperative seems to be the most elemental as it expresses the first needs of human society." ಎಂದು ಡಾ. ರಾಮಕೃಷ್ಣಯ್ಯ ಹೇಳಿದ್ದಾರೆ.

ಮಧ್ಯಮಪುರುಷ ಬಹುವಚನ: ಹಳಗನ್ನಡದಲ್ಲಿ 'ಇಂ' ಪ್ರತ್ಯಯವಿತ್ತು. ಹೊಸಗನ್ನಡದಲ್ಲಿ ಇ, ಇರಿ, ಆಗಿದೆ. ಉದಾ: ಮಾಡಿಂ, ಪೇಳಿಂ, ಮಾಡಿ, ಹೇಳಿರಿ. ಹಳಗನ್ನಡದ ಇಂ ಎಂಬುದು ನೀನ್ ಎಂಬ ಸರ್ವನಾಮದ ಮೂಲವಾದ 'ಇನ್' ಎಂಬುದರ ಬಹುವಚನರೂಪವಿರಬೇಕು. 'ಇಂ' ಎಂಬುದರ ಅನುಸ್ವಾರ ಲೋಪವಾಗಿ ನಡುಗನ್ನಡದಲ್ಲಿ 'ಇ' ಎಂದಾಯಿತು. ಇದು ಈಗಲೂ ಉಳಿದಿದೆ.

ಇರಿ ಅಥವಾ ರಿ ಹೇಗೆ ಬಂದಿತು? ಕೊಡಿಂ, ಬನ್ನಿಂ ಎಂಬುವುಗಳ ಅನುಸ್ವಾರ ಲೋಪವಾಗಿ ಕೊಡಿ, ಬನ್ನಿ ಎಂದಾಗ ಅರ್ಥಕ್ಕೆ ಧಕ್ಕೆ ಇಲ್ಲ. ಆದರೆ ಇಕಾರಾಂತ ಎಕಾರಾಂತ ಧಾತುಗಳಾದ ಪಿಡಿ, ನಡೆ ಮೊದಲಾದುವು ವಿಧ್ಯರ್ಥ ಬಹುವಚನದಲ್ಲಿ ಪಿಡಿಯಿಂ, ನಡೆಯಿಂ ಎಂದಾಗುತ್ತವೆ. ಇಲ್ಲಿ ಅನುಸ್ವಾರ ಬಿಟ್ಟುಹೋದರೆ ಪಿಡಿಯಿ, ನಡೆಯಿ ಎಂದಾಗಿ ಏಕವಚನದ ಭ್ರಮೆ ಉಂಟುಮಾಡುತ್ತವೆ. ಆಕಾರಣ ಮಧ್ಯಮ ಪುರುಷ ಬಹುವಚನದ ಆಖ್ಯಾತಪ್ರತ್ಯಯ 'ಇರ್' (ಪೊಗಳ್ದಪಿರ್, ಪೊಗಳ್ದಿರ್, ಪೊಗಳ್ವಿರ್) ಎಂಬುದಕ್ಕೆ ವಿಧಿ ಪ್ರತ್ಯಯ 'ಇ' ಸೇರಿಸಿ 'ಇರಿ' ಎಂದು ಮಾಡಿಕೊಂಡು ರೂಢಿಗೆ ಬಂದಿರಬಹುದು. ಮೊದಮೊದಲು ಹೀಗಾಗಿ, ಅನಂತರ ಎಲ್ಲ ಧಾತು ಗಳಿಗೂ ಬಳಕೆಯಲ್ಲಿ ಬಂದಿರಬೇಕು. ಉತ್ತರ ಕರ್ನಾಟಕದಲ್ಲಿ ಇದು ಬರ್ರಿ, ತರ್ರಿ, ಎಂದೂ ಆಗಿದೆ. ಇವುಗಳ ಜೊತೆಗೆ ಏಕವಚನ, ಬಹುವಚನ ಎರಡರಲ್ಲೂ 'ಉದು' ಪ್ರತ್ಯಯವೂ ಬಳಕೆಯಲ್ಲುಂಟು. ಉದಾ: ಮಾಡುವುದು, ಬರುವುದು ಇತ್ಯಾದಿ.

ಉತ್ತಮಪುರುಷ ಏಕವಚನ: ಕೇಶಿರಾಜ ಇದಕ್ಕೆ ಯಾವ ಪ್ರತ್ಯಯವನ್ನೂ ಹೇಳಿಲ್ಲ. ಬಹುವಚನಮಾತ್ರ ಹೇಳುತ್ತಾನೆ. ಭಟ್ಟಾಕಳಂಕ ಕೊಡುವ ಉದಾಹರಣೆ "ಆಂ ಜಿನನಂ ಪೂಜಿಸುವೆಂ" ಎಂಬುದು ಭವಿಷ್ಯತ್ಕಾಲದ್ದಾಗಿದೆ. ಕೇಶಿರಾಜನ ಬಹುವಚನ ಉದಾಹರಣೆ "ಅನಿಬರುಮೊಂದಾಗಿ ತಾಗುವಂ ಫಲ್ಗುಣನೊಳ್." ಇದಕ್ಕೆ ನಿಟ್ಟೂರ ನಂಜಯ್ಯನು ಟೀಕೆಯಲ್ಲಿ "ಏಕವಚನಕ್ಕೆ ಹೇಗೆಂದರೆ ಭವಿಷ್ಯತ್ತಿನ ವಕಾರದ ಮೇಲೆ 'ಎನ್' ಎಂಬುದು ಹತ್ತಿ 'ಆನ್ ಮಾಡುವೆಂ' ಎಂದಾಗುವುದರಿಂದ ಹೇಳಲಿಲ್ಲ" ಎಂದಿದ್ದಾನೆ. ಭಟ್ಟಾಕಳಂಕನ ಮಾತನ್ನು ಕಿಟೆಲ್ ಒಪ್ಪಿದ್ದಾರೆ. ಹೀಗಾಗಿ ನಡುಗನ್ನಡದಲ್ಲಿ ವೆಂ > ವೆನ್, ವೆನು, ವೆ ಎಂದೂ ಹೊಸಗನ್ನಡದಲ್ಲಿ ವೆನು, ವೆ ಎಂದೂ ಆಗಿವೆ.

ಉತ್ತಮಪುರುಷ ಬಹುವಚನ: ಹಳಗನ್ನಡದಲ್ಲಿ ಅಂ, ವಂ ಎಂದಿದೆ. ಉದಾ: ಮಾಟ್ಪಂ, ಮಾಡುವಂ. ನಡುಗನ್ನಡ, ಹೊಸಗನ್ನಡಗಳಲ್ಲಿ 'ಅಂ'ನ ಅಂತ್ಯಬಿಂದು ಲೋಪವಾಗಿ ಅ, ವ ಮಾತ್ರ ಉಳಿದುವು. ಉದಾ: ಹೋಗುವ, ಮಾಡುವ. ಅಲ್ಲದೆ ಈಗ 'ಓಣ' ರೂಪ ಹೆಚ್ಚು ರೂಢಿಯಾಗಿದೆ. ಕೇಶಿರಾಜ ಇನ್ನೊಂದೆಡೆ ಹೇಳುವ "ಪದಾಂತ್ಯದ ಅಕಾರಕ್ಕೆ ಹ್ರಸ್ವೋತ್ವಮುಂ ವಿಕಲ್ಪ ದಿನಕ್ಕುಂ" ಎಂಬಂತೆ (ಉದಾ: ಆವಂ > ಆವೊಂ, ನುಡಿದಂ > ನುಡಿದೊಂ, ಪಾಡಿದಂ > ಪಾಡಿದೊಂ) ಇಲ್ಲೂ ಆಗಿರಬಹುದು. ತಾಗುವಂ, ಪಾಡುವಂ ಎಂಬುವು ತಾಗುವೊಂ, ಪಾಡುವೊಂ ಆಗಿ ತಾಗುವೊಣ, ಪಾಡುವೊಣ > ತಾಗೋಣ, ಪಾಡೋಣ ಎಂದಾಗಿರಬಹುದು. ಇಲ್ಲಿ ಒಂದು ಎಚ್ಚರಿಕೆ, ಕೃದಂತನಾಮದಲ್ಲೂ 'ಓಣ' ಪ್ರಯೋಗ ಉಂಟು: ಮಾಡೋಣದರಿಂದ.

ಅನ್ಯಪುರುಷ ಏಕ ಮತ್ತು ಬಹುವಚನ: ಈ ಪುರುಷದಲ್ಲಿ ಎರಡು ವಚನ ಗಳಿಗೂ ಗೆ, ಕೆ ಗಳು ಪ್ರತ್ಯಯವಾಗಿವೆ. ಲಿಂಗಭೇದವೂ ಇಲ್ಲ. ಉದಾ: ಪೋಕೆ,

ಅಕ್ಕೆ, ಮಾಡುಗೆ. ಪೂರ್ವದ ಹಳಗನ್ನಡದಲ್ಲೂ ಈ ಪ್ರಯೋಗವಿದೆ. ಉದಾ: ಕುಲಂ ಪೆರ್ಚುಗೆ, ಪೆಳಿಯಮಾಡೆ ಕೆಡುಗೆ, ನೆಲನುಂ ಪೆಳಿಗೆ ಆ ಪಾರ್ವರುಂ ಪ್ರಜೆಯುಂ ತಣಿಗೆ, ಮಕ್ಕಳ್ ಪುಟ್ಟದೆ ಕೆಡುಗ ಇತ್ಯಾದಿ. ಕೊನೆಯ 'ಕೆಡುಗ' ಗಮನಿಸಿ. ಗುಂ, ಕುಂ ಪ್ರತ್ಯಯಗಳಿಂದ ವರ್ತಮಾನ ಭವಿಷ್ಯತ್ಕಾಲ ಕ್ರಿಯಾರೂಪಗಳಾಗುತ್ತವೆಯಷ್ಟೆ. ಅವುಗಳ ಅನುಸ್ವಾರರಹಿತ ಗು, ಕು ಗಳಿಗೆ ಅವಧಾರಣೆಯ 'ಎ' ಸೇರಿ ಗೆ, ಕೆಗಳು ಆಗಿರಬಹುದು.

ಹೊಸಗನ್ನಡದಲ್ಲಿ 'ಅಲಿ' ಪ್ರತ್ಯಯ ಹೆಚ್ಚು ರೂಢಿಯಲ್ಲಿದೆ. ನಡುಗನ್ನಡದಲ್ಲೂ 'ಅಲಿ' ಇತ್ತು. ಉದಾ: ಆನಂದಮಂ ನಮಗೀಯಲಿ. ಹಳಗನ್ನಡದಲ್ಲೂ ಇದು ಇದ್ದಿರಬೇಕು. ಏಕೆಂದರೆ ಕೇಶಿರಾಜ ಅವಧಾರಣೆ, ವಿಶಂಕೆ, ನಿಪಾತದ ಮುಂದೆ ಸ್ವರಪರವಾದಾಗ ಸಂಧಿಯಿಲ್ಲ ಎಂದು ಹೇಳಿ ಈ ಉದಾಹರಣೆ ಕೊಟ್ಟಿದ್ದಾನೆ: ಓಹೋ ಇರಲಿಂ ಪೆಜಿವಜಿ ಮಾಹಾತ್ಮ್ಯಮುಂ. ಇಲ್ಲಿ 'ಇರಲಿಂ' ಎಂಬುದು ಸ್ಪಷ್ಟವಾಗಿ ವಿಧ್ಯರ್ಥ. ಬರಲಿಂ ಪ್ರಯೋಗ ಸಹ ಸಿಗುತ್ತದೆ. ಹೊಸಗನ್ನಡದಲ್ಲಿ ಇವು ಇರಲಿ, ಬರಲಿ ಆಗಿವೆ. ಇವು ರೂಢಿಗೆ ಬಂದ ಕಾರಣ ನಿಷೇಧಾರ್ಥದ (ಪುಗಲ್, ಬರಲ್—ಪುಗಬೇಡ, ಬರಬೇಡ) 'ಅಲ್' ಯುಕ್ತ ಶಬ್ದಗಳು ಕಣ್ಮರೆಯಾಗಿರಬೇಕು.

ತೆಲುಗಿನಲ್ಲಿ ಧಾತುರೂಪವಲ್ಲದೆ ಮು, ವು, ಡು ಇವೆ: ಪಾಡುಮು, ಪಿಲುವುಮು, ಪೋಹಿಂಪುಮು, ಜೇಯುಡು. ತಮಿಳಿನಲ್ಲಿ ಮೂಲಧಾತುವಲ್ಲದೆ ಮಿನ್, ಉಂ, ಈರ್, ಕ, ಗ ಎಂಬುವೂ ಇವೆ: ಶೆಯ್ಮಿನ್, ಪಾಡುಂ, ಕೇಳೀರ್, ವಾಳ್ಗ.

ನಿಷೇಧ ಕ್ರಿಯಾರೂಪ: ಹಳಗನ್ನಡದಲ್ಲಿ ನಿಷೇಧ ಪ್ರತ್ಯಯವಿಲ್ಲ. ಧಾತುವಿನ ಮೇಲೆ ನೇರವಾಗಿ (ಕಾಲಸೂಚಕ ವಿಕರಣಗಳು ಸೇರದೆ) ಆಖ್ಯಾತ ಪ್ರತ್ಯಯ ಸೇರಿದರೆ ನಿಷೇಧಾರ್ಥ ಬರುತ್ತದೆ. ಉದಾ: ಮಾಡು+ಎನ್=ಮಾಡೆನ್, ನೋಡು+ಅಳ್=ನೋಡಳ್. ಆದರೆ ತಮಿಳು, ತೆಲುಗುಗಳಲ್ಲಿ 'ಅ' ಪ್ರತ್ಯಯವಿದೆ. ಕನ್ನಡದಲ್ಲಿಯೂ ನಿಷೇಧಕಾರಕ ಕೃದಂತದಲ್ಲಿ ಭಾವನಾಮದಲ್ಲಿ ಇದು ಸ್ಪಷ್ಟವಾಗಿ ಕಾಣ ಬರುತ್ತದೆ. ಉದಾ: ಮಾಡು+ಅ+ದ=ಮಾಡದ, ಬರ್+ಅ+ದ=ಬಾರದ; ಅಱಿಯಮೆ, ಪೊಲ್ಲಮೆ (ಪೊಲ್+ಅ+ಮೆ), ಅಟ್ಕಮೆ. ಆದ್ದರಿಂದ ಧಾತುವಿಗೆ ನೇರವಾಗಿ ಆಖ್ಯಾತಪ್ರತ್ಯಯ ಸೇರುವಾಗಲೂ ನಿಷೇಧಾರ್ಥ 'ಅ' ಪ್ರತ್ಯಯ ಸೇರಿದೆ ಎಂದು ಭಾವಿಸಬಹುದು. ಅದು ಪುರುಷ ಪ್ರತ್ಯಯದ ಆದಿಯಲ್ಲಿ ಬಂದು ಲೋಪವಾಗುತ್ತದೆ ಎನ್ನಬಹುದು. ಉದಾ: ಮಾಡು+ಅ+ಎನ್=ಮಾಡೆನ್, ಮಾಡು+ಅ+ಅಯ್=ಮಾಡಯ್, ಮಾಡು+ಅ+ಇರ್=ಮಾಡಿರ್, ಮಾಡು+ಅ+ಅಂ=ಮಾಡಂ ಇತ್ಯಾದಿ. 'ಅ' ಅಲ್ಲದೆ 'ಅದೆ' ಪ್ರತ್ಯಯವೂ ಇತ್ತು. ಉದಾ: ನೋಡು+ಅ+ಅದೆ=ನೋಡದೆ, ಕಾಣ್+ಅ+ಅದೆ=ಕಾಣದೆ. ಪೂರ್ವದ

ಹಳಗನ್ನಡದಲ್ಲಿ ನೋಡಾದೆ, ನೋಡಾನ್ ಎಂದು ದೀರ್ಘವಿತ್ತು. ಶಾಸನಗಳಲ್ಲಿ ತಪ್ಪಾದೆ, ಇಲ್ಲಾದೆ, ವಿತ್ತಿದಲ್ಲಿ ವೆಳೆಯಾವೆ ಕೆಡುಗ ಪ್ರಯೋಗಗಳಿವೆ. ಈಗಲೂ ತಮಿಳು, ಮಲೆಯಾಳಂಗಳಲ್ಲಿ ಉಂಟು : ಶೆಯ್ಯಾನ್, ಚೆಯ್ಯಾಳ್. ದೀರ್ಘವನ್ನು ಕೇಶಿರಾಜನೂ ಒಪ್ಪಿದ್ದಾನೆ. ಈ 'ಅ', 'ಅದೆ' ಸೇರಿ ನಿಷೇಧಕ್ರಿಯೆಯಾದಾಗ ಕಾಲವಿವಕ್ಷೆ ಇಲ್ಲ. ಶಬ್ದಮಧ್ಯದಲ್ಲಲ್ಲದೆ ಶಬ್ದಾಂತ್ಯದಲ್ಲೂ 'ಅ' ಸೇರುವುದುಂಟು : ಅಲ್+ಅ=ಅಲ್ಲ, ಇಲ್ಲ, ಸಲ್ಲ, ಆಗ ಇತ್ಯಾದಿ. ಈ ಅಲ್ಲ, ಇಲ್ಲ ಎಂಬುವು ಹಳಗನ್ನಡ ಶಬ್ದಗಳೊಡನೆ ಸೇರಿ ನಿಷೇಧಾರ್ಥ ಸೂಚಿಸುತ್ತಿದ್ದುವು. ನೋಡಿದನಿಲ್ಲ, ಕೇಳಿದನಿಲ್ಲಂ. 'ಅಲ್ತು' ಎಂಬುದೂ ಸೇರುತ್ತಿತ್ತು: ನೋಡಿದಳಲ್ತು, ಮಾಡಿದನಲ್ತು. ಇಲ್ಲ ಎಂಬುದರ ರೂಪ 'ಇಲಿ' ಸಹ ನಿಷೇಧ ಸೂಚಿಸುತ್ತಿತ್ತು: ಪಲ್ಲಿಲಿವಾಯ್, ನಾಣಿಲಿ ಪೆಣ್. ಹಳಗನ್ನಡದಲ್ಲಿ ಏಕವಚನದಲ್ಲಿ 'ಅಲ್', ಬಹುವಚನದಲ್ಲಿ 'ಅಲಿಂ' ಸೇರಿಸಿ ನಿಷೇಧಕ್ರಿಯೆ ಮಾಡಲಾಗುತ್ತಿತ್ತು. ಉದಾ: ಪುಗಲ್ ಪುಗಲ್ ಎಂಬ ಗಂಡು ಕೋಗಿಲೆ, ಸಾರಲಿಂ, ಉಸಿರಲಿಂ ಇತ್ಯಾದಿ. 'ಅಲ್' ನಿಷೇಧ ಪ್ರತ್ಯಯ ಹೇಗೆ ಬಂದಿತೆಂದು ತಿಳಿಯುವುದಿಲ್ಲ. ಏಕೆಂದರೆ ಭಾವಾರ್ಥಕ ಕ್ರಿಯೆಗೂ 'ಅಲ್' ಇತ್ತು. ಸತಿಸಪ್ತಮಿಯಲ್ಲಿ ಅಲ್, ಆಲೊಡಂ ಇತ್ತು. ಕರ್ಮಣೀ ಪ್ರಯೋಗದಲ್ಲಿ 'ಅಲ್ಪಡು' ಇತ್ತು; ಈಗಲೂ ಅಲು, ಅಲ್ಪಡು ಉಳಿದಿವೆ. ನಿಷೇಧಾರ್ಥದಲ್ಲಿ ಮಾತ್ರ ಉಳಿದಿಲ್ಲ. ಈಗ ಹೊಸಗನ್ನಡದಲ್ಲಿ ಭೂತಕಾಲದ 'ಅಲ್' ವಿಕರಣದೊಂದಿಗೆ, ಮತ್ತು ಭವಿಷ್ಯತ್ಕಾಲದ 'ಉದು' ವಿಕರಣದ ಜೊತೆಗೆ 'ಇಲ್ಲ' ಸೇರಿಸಿ ನಿಷೇಧಕ್ರಿಯೆ ಮಾಡಿಕೊಳ್ಳಲಾಗಿದೆ. ಉದಾ : ನೋಡಲಿಲ್ಲ, ಮಾಡಲಿಲ್ಲ, ನೋಡುವುದಿಲ್ಲ, ಮಾಡುವುದಿಲ್ಲ.

**ಕಾಲಸೂಚಕ ಪ್ರತ್ಯಯಗಳು**

ಭಾಷೆಯ ಪ್ರಾರಂಭದ ಹಂತದಲ್ಲಿ ಮೂಲಧಾತುಗಳನ್ನೇ ಕ್ರಿಯಾಪದಗಳಂತೆ ಬಳಸುವುದು ರೂಢಿಯಲ್ಲಿದ್ದಿರಬೇಕು. ಇಂದಿಗೂ ಕನ್ನಡದಲ್ಲಿ ಮಧ್ಯಮಪುರುಷ ವಿಧ್ಯರ್ಥಕ್ರಿಯೆಯಲ್ಲಿ ಧಾತುವೇ ಬಳಕೆಯಾಗುವುದು ಇದಕ್ಕೆ ಸಮರ್ಥನೆ, ಎಂಬುದು ಪ್ರ. ಗೋ. ಕುಲಕರಣಿಯವರ ಮತ. ಮಕ್ಕಳ ಭಾಷೆಯಲ್ಲಿ ಈಗಲೂ ಸಹ ಧಾತು ಪ್ರಯೋಗವನ್ನು ಗಮನಿಸಬಹುದು. ಎರಡನೆಯ ಘಟ್ಟದಲ್ಲಿ ಧಾತುವಿನ ಮೇಲೆ ಮೂಲಸರ್ವನಾಮಗಳನ್ನು ಸೇರಿಸಿ ಕ್ರಿಯಾಪದಗಳನ್ನು ಮಾಡಿಕೊಂಡು ಪ್ರಯೋಗಿಸುವುದು ರೂಢಿಗೆ ಬಂದಿತು. ಅಲ್ಲಿ ಆಗ ಕಾಲಸೂಚಕ ವಿಕರಣಗಳು ಇರಲಿಲ್ಲ. ಇದಕ್ಕೆ ಸಮರ್ಥನೆಯಾಗಿ ಎರಡು ಅಂಶಗಳತ್ತ ಗಮನ ಸೆಳೆಯುತ್ತಾರೆ. ಒಂದು– ಕುಂ, ಗುಂ ಪ್ರತ್ಯಯಗಳು; ಎರಡು–ಕೆಲವು ವ್ಯಂಜನಾಂತ ಶಬ್ದಗಳು ಭೂತಕಾಲದಲ್ಲಿ ದ್ವಿತ್ವವಾಗುವುದು. ದ್ರಾವಿಡ ಭಾಷೆಗಳಲ್ಲಿ ಕಂಡುಬರುವ ಕು–ಕುಂ, ಗು–ಗುಂ ಪ್ರತ್ಯಯಗಳನ್ನುಳ್ಳ ಶಬ್ದಗಳು ಎಲ್ಲ ಪುರುಷಗಳಲ್ಲೂ ಲಿಂಗ-ವಚನ ಭೇದವಿಲ್ಲದೆ ಪ್ರಯೋಗವಾಗುತ್ತಿದ್ದುವು. ಇಲ್ಲೂ ಸ್ಪಷ್ಟವಾಗಿ ಕಾಲಸೂಚನೆ ಇರುವುದಿಲ್ಲ.

ನಾಗವರ್ಮ ಒಂದೆಡೆ ಭವಿಷ್ಯತ್‌ಕಾಲದಲ್ಲಿ ಗುಂ, ಕುಂ ಗಳು ಬರುತ್ತವೆ ಎಂದೂ, ಇನ್ನೊಂದೆಡೆ ವರ್ತಮಾನ, ಭವಿಷ್ಯತ್ ಎರಡು ಕಾಲಗಳಲ್ಲಿಯೂ ಅವು ಬರುತ್ತವೆ ಎಂದಿದ್ದಾನೆ. ಕೇಶಿರಾಜ ಮೂರು ಕಾಲಗಳಲ್ಲಿಯೂ, ಎಲ್ಲ ಲಿಂಗ ವಚನಗಳಲ್ಲಿಯೂ, ಗುಂ ಕುಂ ಬರುತ್ತವೆ ಎಂದಿದ್ದಾನೆ. ಅವನು ಕೊಡುವ ಉದಾಹರಣೆಗಳು: ಅಂದು ಮಾಡುಗುಂ, ಅಂದು ಮಾಳ್ಕುಂ; ಭೂವಳಯಾಧಿಪಂ ನುಡಿಗುಂ, ತಳೋದರಿ ಬಿಸುಸುಯ್ಗುಂ, ಕೋಗಿಲೆಯುಲಿಗುಂ; ಒರ್ವನೆ ಗೆಲ್ಗುಂ, ಬಲನಾರಾಯಣರಿರ್ವರುಂ ನುಡಿಗುಂ, ಮೂಡೇವರುಮುಂ ಮೂಱು ಕೋಣೆವುಗಿಸುಗುಂ ಅಸುರರ್ ಇತ್ಯಾದಿ. ಪ್ರಾಚೀನ ತಮಿಳಿನಲ್ಲೂ ಈ ಬಗೆಯ ಪ್ರಯೋಗಗಳು ಕಂಡುಬರುತ್ತವೆ: ಶೆಯ್ಗು, ಶೆಯ್ಗುಂ. ಮಲೆಯಾಳಂನಲ್ಲೂ ಕುಂ ಪ್ರತ್ಯಯ ವರ್ತಮಾನ ಭವಿಷ್ಯತ್ ಕಾಲಗಳಲ್ಲಿ ಪುರುಷ–ಲಿಂಗ–ವಚನ ಭೇದವಿಲ್ಲದೆ ಪ್ರಯೋಗವಾಗುತ್ತದೆ. ಞಾನ್ ಪೋಕುನ್ನು, ನೀ ಪೋಕುನ್ನು, ಅವನ್ ಪೋಕುನ್ನು, ಅವ ಪೋಕುನ್ನು ಇತ್ಯಾದಿ. ಕನ್ನಡದಲ್ಲಿ 'ಬೇಕು' ಶಬ್ದದಲ್ಲಿ 'ಕು' ಇದ್ದು, ಎಲ್ಲ ಲಿಂಗ, ವಚನ, ಪುರುಷಗಳಲ್ಲೂ ಆ ರೂಪ ಪ್ರಯೋಗವಾಗುತ್ತದೆ. ಇದನ್ನು ನೋಡಿದರೆ 'ಕು' ಎಂಬುದು ದ್ರಾವಿಡ ವರ್ಗದ ಭಾಷೆಗಳಲ್ಲಿ ಲಿಂಗ, ವಚನ, ಪುರುಷ ಭೇದಗಳು ಕಾಣಿಸಿಕೊಳ್ಳುವುದಕ್ಕೂ ಮೊದಲು ಕ್ರಿಯೆಯನ್ನು ಸೂಚಿಸುತ್ತಿದ್ದ ಪ್ರತ್ಯಯ ಎನ್ನಬಹುದು. ಅದೂ ಸಹ ಲಿಂಗಾತೀತ ಸರ್ವನಾಮ ಎಂಬುದು ಕುಲಕರಣಿಯವರ ಅಭಿಪ್ರಾಯ ಇದೇ ಅಭಿಪ್ರಾಯ ಎಂ. ಮರಿಯಪ್ಪಭಟ್ಟರದೂ ಆಗಿದೆ. ಮೇಲಿನ ಮಲೆಯಾಳಂ ಉದಾಹರಣೆಯನ್ನು ಅವರೂ ಕೊಟ್ಟಿದ್ದಾರೆ. ಕುಂ-ಗುಂ ಗಳೇ ಮುಂದೆ ವರ್ತಮಾನ ಭವಿಷ್ಯತ್ ರೂಪಗಳಾಗಿ ಪರಿಗಣಿತವಾದುವು. ಮೂರನೆಯ ಘಟ್ಟದಲ್ಲಿ ಪುರುಷವಾಚಕ ಪ್ರತ್ಯಯಗಳಾಗಿ ಸರ್ವನಾಮಗಳು ಧಾತುವಿನ ಮೇಲೆ ಸೇರಿ ಭೂತಕಾಲದ ಕ್ರಿಯಾರೂಪಗಳಾದುವು ಎಂದು ಅವರು ಹೇಳುತ್ತಾರೆ. ಇದು ಒಂದು ವಾದ, ಕಾಲಸೂಚಕ ಪ್ರತ್ಯಯಗಳು ಕಾಣಿಸಿಕೊಂಡ ಬಗೆ.

ಕನ್ನಡ ವೈಯಾಕರಣರು ಸಂಸ್ಕೃತ ವ್ಯಾಕರಣವನ್ನನುಸರಿಸಿ ಕನ್ನಡದಲ್ಲೂ ಭೂತ, ವರ್ತಮಾನ, ಭವಿಷ್ಯತ್ ಎಂದು ಮೂರು ಕಾಲಗಳಿವೆ ಎಂದು ಹೇಳಿದ್ದಾರೆ. ಧಾತು ಮತ್ತು ಪುರುಷವಾಚಕ ಪ್ರತ್ಯಯಗಳ ನಡುವೆ ಕಾಲವನ್ನು ಸೂಚಿಸುವ ಪ್ರತ್ಯಯಗಳು ಸೇರುತ್ತವೆ.

ಕನ್ನಡದಲ್ಲಿ ವಾಸ್ತವವಾಗಿ ಭೂತಕಾಲ ಮತ್ತು ವರ್ತಮಾನ-ಭವಿಷ್ಯತ್ ಕಾಲ ಎಂಬ ಎರಡು ಕಾಲಗಳು ಮಾತ್ರ ಇವೆಯೆಂದು ಆಧುನಿಕ ಭಾಷಾ ತಜ್ಞರ ಅಭಿಪ್ರಾಯ. ಅವರು ಕೊಡುವ ಕಾರಣಗಳು ಹೀಗಿವೆ:

(೧) ವರ್ತಮಾನಕಾಲದ ಕ್ರಿಯೆ ಭವಿಷ್ಯತ್‌ಕಾಲವನ್ನೂ ಸೂಚಿಸುತ್ತದೆ. ಹಳಗನ್ನಡದಲ್ಲೂ ಇಂತಹ ಪ್ರಯೋಗಗಳು ಕಂಡುಬರುತ್ತವೆ. ಉದಾ: ನಾಳೆ

ಬಂದಪೆನ್. ಹೊಸಗನ್ನಡದಲ್ಲಿ ಇದೇ ರೂಢಿಯಾಗಿದೆ. ಉದಾ : ಈಗ ಬರುತ್ತೇನೆ, ನಾಳೆ ಬರುತ್ತೇನೆ, ಮುಂದಿನ ತಿಂಗಳು ಬರುತ್ತೇನೆ. ಇಲ್ಲಿ ವರ್ತಮಾನ-ಭವಿಷ್ಯತ್ ವ್ಯತ್ಯಾಸವೇ ಇಲ್ಲ.

(೨) ವರ್ತಮಾನಕಾಲವನ್ನು ಸೂಚಿಸುವ ಪ್ರತ್ಯಯಗಳು ಕೆಲವು ದ್ರಾವಿಡ ಭಾಷೆಗಳಲ್ಲಿಲ್ಲ. ಇರುವ ಭಾಷೆಗಳಲ್ಲೂ ಬೇರೆ ಬೇರೆ ಬಗೆಯಾಗಿವೆ. ಆದರೆ ಭೂತಕಾಲ ಭವಿಷ್ಯತ್‌ಕಾಲವನ್ನು ಸೂಚಿಸುವ ಪ್ರತ್ಯಯಗಳು ಎಲ್ಲ ದ್ರಾವಿಡ ಭಾಷೆಗಳಲ್ಲೂ ಇವೆ; ಹೆಚ್ಚು ಕಡಿಮೆ ಒಂದೇ ಬಗೆಯಾಗಿವೆ.

(೩) ಹಳಗನ್ನಡದ ವರ್ತಮಾನಕಾಲಸೂಚಿ ಪ್ರತ್ಯಯವಾದ ದಪ, ದಪ್ಪ ಗಳಲ್ಲಿ ಎರಡು ಭಾಗಗಳು ಸೇರಿವೆ. ಅಪ, ಅಪ್ಪ ಎಂಬುದು 'ಆಗು' ಧಾತುವಿನಿಂ ಆದ ರೂಪ, ಭವಿಷ್ಯತ್‌ಕಾಲಸೂಚಿ. ದ್+ಅಪ, ದ್+ಅಪ್ಪ=ದಪ, ದಪ್ಪಗಳ ಭವಿಷ್ಯತ್ ಕಾಲವನ್ನು ಸೂಚಿಸುವುವೇ ಸ್ವಾಭಾವಿಕವಾದದ್ದು.

ಹಳಗನ್ನಡ ವ್ಯಾಕರಣಗಳಲ್ಲಿ 'ದ', 'ದಪ', 'ವ'ಗಳನ್ನು ಕ್ರಮವಾ ಭೂತಕಾಲ, ವರ್ತಮಾನಕಾಲ, ಭವಿಷ್ಯತ್‌ಕಾಲದ ಪ್ರತ್ಯಯಗಳೆಂದು ಹೇಳಲಾಗಿದೆ ಹೊಸಗನ್ನಡದಲ್ಲಿ ಆಗಿರುವ ಬದಲಾವಣೆಗಳನ್ನೂ ಗಮನಿಸಬಹುದು.

**ವರ್ತಮಾನಕಾಲ:** ಹಳಗನ್ನಡದಲ್ಲಿ ದಪ, ದಪ್ಪ ವರ್ತಮಾನ ಪ್ರತ್ಯಯ ಗಳೆಂದು ಹೇಳಿದೆ. ಅದೇ ನಡುಗನ್ನಡದಲ್ಲಿ 'ದಹ' ಎಂದಾಯಿತು; ಪ>ಹ ರೂಪಾಂತರ ಹೊಂದಿತು. ಹೊಸಗನ್ನಡದಲ್ಲಿ ಈ ಪ್ರತ್ಯಯಗಳು ಬಳಕೆಯಲ್ಲಿಲ್ಲ ಉತ್ತ ಅಥವಾ ಉತ್ತ ಎಂಬ ಬೇರೆ ಪ್ರತ್ಯಯ ರೂಢಿಗೆ ಬಂದಿದೆ. ಇದಕ್ಕೆ ಕಾರ ವೇನು? ಕೈಪಿಡಿಕಾರರು ಹಳಗನ್ನಡದ 'ದಪ' ಪ್ರತ್ಯಯ ಸಂಶಯವನ್ ಸೂಚಿಸುತ್ತಿದ್ದುದೂ ಉಂಟು ಎನ್ನುತ್ತಾರೆ. ಬಂದಪೆನ್ ಎಂದಾಗ ಬಂದೇನು ಎಂ ಸಂಶಯಾರ್ಥವೂ ಸೂಚಿತವಾಗುತ್ತಿದ್ದುದರಿಂದ ಕಾಲಕ್ರಮೇಣ ಅದು ಸಂಶ ಸೂಚಿಸುವ ಅರ್ಥದಲ್ಲಿಯೇ ಪ್ರಯೋಗದಲ್ಲಿ ರೂಢಿಗೆ ಬಂದಿತು. ಬಂದಪೆನ್ ಬಂದಹೆನ್>ಬಂದಹೆನು>ಬಂದೇನು. ಆಗ ವರ್ತಮಾನಕಾಲ ಸೂಚಿಸ ಬೇರೊಂದು ಪ್ರತ್ಯಯ ಅಗತ್ಯವಾಯಿತು. ಹಳಗನ್ನಡದಲ್ಲಿ ವರ್ತಮಾನ ಕೃದ ಯಾಗಿ ಪ್ರಯೋಗವಾಗುತ್ತಿದ್ದ ಉತ, ಉತ್ತಗಳು ವರ್ತಮಾನ ಕ್ರಿಯಾವಾ ಯಾಗಿಯೂ ಬಳಕೆಗೆ ಬಂದುವು. ಹೊಸಗನ್ನಡದಲ್ಲಿ ಈಗ 'ಉತ್ತ' ಪ್ರತ್ಯಯ ರೂಢಿಯಲ್ಲಿ ಉಳಿದಿದೆ: ಬರುತ್ತಾನೆ, ಹೋಗುತ್ತಾನೆ, ಮಾಡುತ್ತಾನೆ ಇತ್ಯಾ ಇಲ್ಲಿ ಈ ಪ್ರತ್ಯಯವನ್ನು ವರ್ತಮಾನಕಾಲಸೂಚಿ ಎಂದು ಹೇಳಿದರೂ, ಹಿಂದೆ ಹೇಳಿದಂತೆ, ಭವಿಷ್ಯತ್ಕಾಲವನ್ನೂ ಸೂಚಿಸುತ್ತದೆ.

**ಭೂತಕಾಲ:** ಹಳಗನ್ನಡ ವ್ಯಾಕರಣಗಳಲ್ಲಿ 'ದ' ಎಂಬುದನ್ನು ಭೂತಕಾ ಪ್ರತ್ಯಯವೆಂದು ಹೇಳಿದೆ. ಅಲ್ಲದೆ 'ದ' ಜೊತೆಗೆ ಆಗಮಗಳನ್ನೂ, ಆದ

ಬದಲಾಗಿ ಆದೇಶಗಳನ್ನೂ ಹೇಳಿದೆ. ಇದರಿಂದಲೇ ಭೂತಕಾಲಸೂಚಕಪ್ರತ್ಯಯ ವಿಚಾರ ಸರಳವಲ್ಲ ಎಂಬುದು ತಿಳಿಯುತ್ತದೆ. ಡಾ. ಕಾಲ್ಡ್‌ವೆಲ್ ಅವರು ಧಾತುವಿಗೆ 'ಇ' ಎಂಬ ಪ್ರತ್ಯಯ ಸೇರುವುದರಿಂದ ಮತ್ತು ಕೆಲವೆಡೆ ಧಾತುಗಳ ಅಂತ್ಯ ವ್ಯಂಜನ ದ್ವಿತ್ವವಾಗುವುದರಿಂದ ಭೂತಕಾಲ ಸೂಚಿತವಾಗುತ್ತದೆ ಎನ್ನುತ್ತಾರೆ.

ಉಕಾರಾಂತವಾದ ಧಾತುಗಳಿಗೆ 'ದ' ಪರವಾದಾಗ ಧಾತುವಿನ ಅಂತ್ಯ 'ಉ'>'ಇ' ಆಗುತ್ತದೆ. ಮಾಡು+ದ=ಮಾಡಿದ. ಇಲ್ಲಿ ಬಂದು ಸೇರಿದ 'ಇ' ಭೂತಕಾಲವನ್ನು ಸೂಚಿಸುತ್ತದೆ. ಭೂತಕೃದ್ವಾಚಿಗಳಲ್ಲಿ 'ದು' ಸೇರುವುದೇ ಇಲ್ಲ: ಮಾಡಿ, ನೋಡಿ; 'ದು' ಪ್ರತ್ಯಯ ಸೇರಿದ ಮಾಡಿದು, ನೋಡಿದು ರೂಪಗಳಿಲ್ಲ. ಕೆಲವು ದ್ರಾವಿಡ ಭಾಷೆಗಳಲ್ಲಿ 'ಇ' ಪ್ರತ್ಯಯ ಮಾತ್ರವೇ ಭೂತಕಾಲ ಸೂಚಕವಾಗಿ ಇದೆ. ಆದ್ದರಿಂದ 'ಇ' ಎಂಬುದೂ ಭೂತಕಾಲಪ್ರತ್ಯಯ. ಡಾ. ಕಾಲ್ಡ್‌ವೆಲ್ಲರ ಈ ವಾದವನ್ನು ಕಿಟೆಲ್ ಅವರು ಒಪ್ಪದೆ ಉಕಾರಾಂತ ಧಾತುಗಳಿಗೆ 'ದ' ಸೇರಿದಾಗ ಇಕಾರಾಗಮವಾಗುತ್ತದೆ. 'ಇ' ಭೂತಕಾಲವನ್ನು ಸೂಚಿಸುತ್ತಿದ್ದರೆ 'ದ' ಅನಾವಶ್ಯಕವಾಗುತ್ತಿತ್ತು ಎನ್ನುತ್ತಾರೆ. ಮುಂದುವರಿದು, ಹಳಗನ್ನಡ ವ್ಯಂಜನಾಂತ ಶಬ್ದಗಳು ಹೊಸಗನ್ನಡದಲ್ಲಿ ಉಕಾರಾಂತವಾಗುವುದರಿಂದ ಅಲ್ಲೂ ದ ಪ್ರತ್ಯಯ ಸೇರಿದಾಗ 'ಇ' ಬರುತ್ತದೆ (ಉದಾ : ಆಳ್ದ>ಆಳಿದ) ಎನ್ನುತ್ತಾರೆ. ಆದ್ದರಿಂದ 'ಇ' ಆಗಮ ಉಚ್ಚಾರಣೆಯ ಸೌಲಭ್ಯಕ್ಕಾಗಿ ಬಂದಿದೆ, ಎನ್ನುತ್ತಾರ. ಭೂತ ಕೃದ್ವಾಚಿಯಲ್ಲಿ 'ಕೇಳಿದು ಶೌರಿಯಿಂತೆಂದ' ಎಂಬ 'ದು'ಕಾರವುಳ್ಳ ಪ್ರಯೋಗ ಗಳಿವೆ. ಹೊಸಗನ್ನಡದಲ್ಲಿ ಈ ಬಗೆಯ ಶಬ್ದರೂಪಗಳು ರೂಢಿಯಿಂದ ತಪ್ಪಿ ಕೇಳಿ, ಮಾಡಿ ಎಂದು ಉಳಿದು ಬಂದಿವೆ ಎನ್ನುತ್ತಾರೆ. ಕುಲಕರಣಿಯವರು 'ಇ' ಭೂತಕಾಲ ಸೂಚಕ ಪ್ರತ್ಯಯವಲ್ಲ, ಅದು ಭೂತಕೃದ್ವಾಚಕ ಪ್ರತ್ಯಯ. ಸ್ವತಂತ್ರವಾಗಿ ಉತ್ತ, ಉತ, ಉತ್ತೆಗಳಂತೆ ಸೃಷ್ಟಿಯಾಗಿದೆ. 'ಇ' ಪ್ರತ್ಯಯ 'ಇನ್ನು' ಎಂಬ ಕಾಲಾರ್ಥ ವನ್ನು ಸೂಚಿಸುವ ಶಬ್ದದ ಮೂಲರೂಪವಾಗಿದೆ ಎನ್ನುತ್ತಾರೆ.

ಹಳಗನ್ನಡ ಕಾಲದಿಂದಲೂ ಧಾತುವಿನ ಅಂತ್ಯವ್ಯಂಜನ ದ್ವಿತ್ವ ಆಗುವುದ ರಿಂದಲೂ ಭೂತಕಾಲಸೂಚಿತವಾಗುತ್ತದೆ. ಡು, ಗು, ಱು ಗಳಿಂದ ಅಂತ್ಯವಾಗುವ ಮತ್ತು ಅವುಗಳ ಹಿಂದಿನ ಸ್ವರವು (ಉಪಾಂತ್ಯ) ಹ್ರಸ್ವವಾಗಿರುವ ಶಬ್ದಗಳು ಟ, ಕ ಎಂದು ಪರುಷಾಕ್ಷರವಾಗಿ ದ್ವಿತ್ವ ಪಡೆಯುತ್ತವೆ. ಉದಾ : ಕಿಡು>ಕೆಟ್ಟ, ಪುಗು>ಪೊಕ್ಕ. ಕೇಶಿರಾಜ ಕಾಲಸೂಚಕಪ್ರತ್ಯಯಗಳಾದ ದ, ದಪಂ ಪರವಾದಾಗ ಧಾತುವಿನ ಅಂತ್ಯದ ವರ್ಗಗಳ ತೃತೀಯಾಕ್ಷರಗಳಾದ ಗ ಜ ಡ ದ ಬ ಗಳು ಕ ಚ ಟ ತ ಪ ಎಂಬ ಪೂರ್ವರೂಪ ಪಡೆಯುತ್ತವೆ ಎನ್ನುತ್ತಾನೆ. ಅವನು ಕೊಡುವ ಉದಾಹರಣೆಗಳು : ಪುಗು>ಪೊಕ್ಕಂ, ಇಸು>ಎಚ್ಚಂ, ನಡು>ನಟ್ಟಂ, ಸುಡು> ಸುಟ್ಟಂ, ಪೋಱು>ಪೊತ್ತಂ. ಹೀಗಾಗಲು ಭೂತಕಾಲದ 'ದ' ಪ್ರತ್ಯಯ

ಸೇರುವುದೇ ಕಾರಣವಾಗಿದೆ ಎಂದು ವಿದ್ವಾಂಸರ ಅಭಿಪ್ರಾಯ. ಅಂದರೆ ಕಿಡು+ದ= ಕೆಟ್ಟ ಆಗುತ್ತದೆ. ಇಲ್ಲಿ ಎರಡು ಕ್ರಿಯೆ ನಡೆದಿದೆ—'ಕಿಡು'ವಿನ ಅಂತ್ಯಸ್ವರ ಲೋಪವಾಗಿ 'ಡ್' ಎಂಬುದು 'ಟ್' ಎಂದು ಬದಲಾಗಿದೆ. ಅನಂತರ ದ್ವಿತ್ವ. ಪದಮಧ್ಯದಲ್ಲಿ ಅಥವಾ ಪದಾಂತ್ಯದಲ್ಲಿ ದ್ವಿತ್ವ ಬರುವುದು ಪರುಷ ವ್ಯಂಜನ ಗಳಿಗೆ ಮಾತ್ರ. ಇದು ಎಲ್ಲ ದ್ರಾವಿಡ ಭಾಷೆಗಳಲ್ಲೂ ಕಂಡುಬರುವ ಲಕ್ಷಣ. ಮೂಲದ್ರಾವಿಡ ಭಾಷೆಗಳಲ್ಲಿ ಪರುಷಾಕ್ಷರಗಳು ಮಾತ್ರವೇ ಇದ್ದುದು ಕಾರಣವಿರ ಬೇಕು (ಇಂದಿಗೂ ತಮಿಳಿನಲ್ಲಿ ಕ ಚ ಟ ತ ಪ ಗಳು ಮಾತ್ರವೇ ಇವೆ ಗ ಜ ಡ ದ ಬ ಗಳಿಲ್ಲ). ಇಲ್ಲವೆ ಕೆಡು, ಪುಗು ಗಳ ಮೂಲರೂಪ ಕೆಟ್, ಪೊಕ್ ಎಂದಿದ್ದು 'ದ' ಸೇರಿದಾಗ ಕೆಟ್ಟ, ಪೊಕ್ಕ ಆಗಿರಬಹುದು ಎಂಬುದು ಇನ್ನೊಂದು ಅಭಿಪ್ರಾಯ. ಕುಲಕರಣಿಯವರು ಈ ಎರಡೂ ಅಭಿಪ್ರಾಯಗಳನ್ನು ಒಪ್ಪದೆ, ಕಾಲಸೂಚಕ ಪ್ರತ್ಯಯ ರೂಢಿಗೆ ಬರುವ ಮೊದಲು ಧಾತುವಿನ ಮೇಲೆ ನೇರವಾಗಿ ಪುರುಷವಾಚಕ ಪ್ರತ್ಯಯಗಳು ಸೇರಿ ಆಗುತ್ತಿದ್ದ ರೂಪಗಳು ಎನ್ನುತ್ತಾರೆ. ಈ ರೀತಿ ದ್ವಿತ್ವವಾಗು ವುದನ್ನು ಸಮಾಸಗಳಲ್ಲೂ ಕಾಣಬಹುದು ಎನ್ನುತ್ತಾರೆ. ಉದಾ: ಕಟ್ಬಾಳ್, ನಟ್ಟಡವಿ, ಕಿತ್ತಡಿ (ಕಿಱು+ಅಡಿ), ಕಿತ್ತಿಳೆ (ಕಿಱು+ಈಳೆ>ಕಿಱ್ರೀಳೆ>ಕಿತ್ತೀಳೆ> ಕಿತ್ತಿಳೆ>ಕಿತ್ತಳೆ ಹಣ್ಣು) ಇತ್ಯಾದಿ. ಇಲ್ಲೆಲ್ಲಾ ಹಿಂದಿನ ಪದದ ಅಂತ್ಯಾಕ್ಷರದ ಮೇಲೆ ಆಘಾತ ಬೀಳುವುದರಿಂದ ವ್ಯಂಜನ ದ್ವಿತ್ವವಾಗುತ್ತದೆ. ಹಾಗೆಯೇ ಭೂತಕಾಲ ಸೂಚಿಸಲು ಆದ ರೂಪಗಳು ಎನ್ನುತ್ತಾರೆ.

ಮೀ, ಬೇ, ನೋ, ಸಾ ಎಂಬುವು ಮೂಲರೂಪಗಳು, ಏಕಾಕ್ಷರ ಧಾತುಗಳು. ಇವುಗಳನ್ನು ಮೀಯ್, ಬೇಯ್, ನೋಯ್, ಸಾಯ್ ಎಂದು ಹೇಳುತ್ತಿದ್ದೇವೆ ಅಷ್ಟೆ. ದ್ರಾವಿಡ ಭಾಷೆಗಳಲ್ಲಿ ಕೆಲವು ಶಬ್ದಗಳ ಅಂತ್ಯಸ್ವರ ನಾಸಿಕೋಚ್ಚಾರಣೆ ಪಡೆದಿರುತ್ತವೆ. ಹಾಗೇ ಮೀ, ಬೇ, ನೋ, ಸಾ, ತಾ, ಬಾ ಗಳ ಅಂತ್ಯಸ್ವರವೂ ನಾಸಿಕೋಚ್ಚಾರಣೆ ಹೊಂದಿದ್ದಿರಬೇಕು: ಭೂತಕಾಲದ 'ದ' ಪ್ರತ್ಯಯ ಸೇರಿದಾಗ ಅವು, ದೀರ್ಘಸ್ವರ ಹ್ರಸ್ವವಾಗಿ, ನಾಸಿಕೋಚ್ಚಾರಣೆ 'ನ್' ಆಗಿ ಮಿಂದ, ಬೆಂದ, ನೊಂದ, ತಂದ, ಬಂದ ಎಂದಾಗಿವೆ. ಕೊಳ್ ಎಂಬುದರ ಮೂಲ 'ಕೋ' ಎಂಬುದಿರಬೇಕು ('ಖಂಡವಿದೆಕೊ ರಕ್ತವಿದೆಕೊ'). ಅದೂ ಸಹ ಕೊಂಡ ಎಂದಾಯಿತು. (ಳ್>ಣ್ ಆಗುವುದರಿಂದ ದ>ಡ ಆಯಿತು ಉಳ್>ಉಣ್ಣು ಆಗಿದೆ. ಕೊನ್ನಿ ಎಂಬ ಗ್ರಾಮ್ಯರೂಪ ಸಹ ಇದೆ). ಕೊಲ್, ಸಲ್ ಗಳೂ ಸಹ ನಾಸಿಕೋಚ್ಚಾರಣೆ ಕಾರಣ ಕೊಂದ, ಸಂದ ಆದುವು.

ಪೆಱು, ಪೊಱು ಧಾತುಗಳ ಭೂತಕಾಲದಲ್ಲಿ ಪೆತ್ತಳು, ಪೊತ್ತನು ಎಂಬುದಾಗಿ 'ತ್ತ' ದ್ವಿತ್ವ ಪಡೆದಿವೆ. ದ್ರಾವಿಡ ಭಾಷೆಗಳಲ್ಲಿ 'ಱ' ದ್ವಿತ್ವ ಬೇರೆ ಬೇರೆ ಉಚ್ಚಾರಣೆ ಪಡೆದು ಬದಲಾಗಿದೆ. ತಮಿಳಿನಲ್ಲಿ 'ಟ್ರ' ಆಗುತ್ತದೆ. (ಮಾಱ್ಱಮ್, ಉಚ್ಚಾರಣೆ

ಮಾಟ್ರುವ್ ಎಂದು). ಹಾಗೇ ಇಲ್ಲಿ 'ತ್ರ' ಆಗಿ 'ತ್ತ' ಎಂದು ರೂಢಿಗೆ ಬಂದಿರ ಬೇಕು. ಹೆತ್ತು, ಹೊತ್ತು ಹೊಸಗನ್ನಡ ರೂಪಗಳು. ಇಸು, ಬಿಸು, ಪಸು ಧಾತುಗಳ ಭೂತಕಾಲಕ್ರಿಯಾರೂಪ ಎಚ್ಚಂ, ಬೆಚ್ಚಂ, ಪಚ್ಚಂ ಎಂದಾಗುತ್ತದೆ. ಸ>ಚ ಆಗುತ್ತದೆ. ಬಹುಶಃ ಮೂಲದ್ರಾವಿಡದಲ್ಲಿ 'ಸ'ಕಾರದ ಉಚ್ಚಾರಣೆ ಚ-ಶ-ಸ ಗಳ ಮಧ್ಯಸ್ಥವಾಗಿದ್ದು 'ಚ' ದ್ವಿತ್ವ ಪಡೆದಿರಬೇಕು. ಇಲ್ಲೆಲ್ಲಾ ಭೂತಕಾಲದ 'ದ' ಪ್ರತ್ಯಯವಿಲ್ಲದೆಯೇ ದ್ವಿತ್ವವಾಗುವುದರಿಂದಲೇ ಭೂತಕಾಲಾರ್ಥ ಪ್ರತೀತಿಯಾಗುತ್ತದೆ.

'ಗೆಲ್' ಮೂಲಧಾತು. ಗೆಲ್ದನ್>ಗೆದ್ದನ್>ಗೆದ್ದನು. ಹಾಗೇ ಕಳ್> ಕಳ್ದನ್>ಕದ್ದನು. ಆದರೆ ಕದಿ ಧಾತುವಿನಿಂದ ಕದ್ದನು ಬಂದಿತು ಎನ್ನುವುದು ಸರಿಯಲ್ಲ. ಇರು>ಇರ್ದನ್>ಇದ್ದನು.

**ಭವಿಷ್ಯತ್ಕಾಲ:** ಭವಿಷ್ಯತ್ಕಾಲವನ್ನು ಸೂಚಿಸುವ ವಿಕರಣ 'ವ' ಅಥವಾ 'ಪ'. ಹಳಗನ್ನಡದಲ್ಲಿ ಕೇಶಿರಾಜ ರ, ಱ, ೞ, ನ, ಗ, ಸ, ಓಕಾರಾಂತ ಧಾತುಗಳ ಪರದಲ್ಲಿ ಭವಿಷ್ಯಂತಿಯ 'ವ'ಕಾರ ಬಂದಾಗ ಅದು 'ಪ' ಆಗುತ್ತದೆ ಎಂದಿದ್ದಾನೆ. ಕೆಲವೊಮ್ಮೆ ವಿಕಲ್ಪದಿಂದ 'ಪ' 'ಬ' ಸಹ ಆಗುತ್ತದೆ ಎಂದಿದ್ದಾನೆ. ಅವನು ಕೊಡುವ ಉದಾಹರಣೆಗಳು : ಕೂರ್+ವ=ಕೂರ್ಪಂ, ಬರ್+ವ=ಬರ್ಪಂ, ತರ್ಪಂ, ತೋರ್ಪಂ, ಕೇೞ್ಪಂ, ನೋಂಪಂ, ಪೋಪಂ (ಪೋಗು+ವ=ಇಲ್ಲಿ ಗಾಂತ ಸಾಂತಗಳ ಗ, ಸ ಗಳು ಲೋಪವಾಗುತ್ತವೆ ಎಂದು ಕೇಶಿರಾಜನ ಅಭಿಪ್ರಾಯ. ಆದರೆ ಮೂಲದ್ರಾವಿಡ ಧಾತುವೇ 'ಪೋ' ಅಲ್ಲವೆ.), ಬರಿಪಂ, ಓಪಂ ಇತ್ಯಾದಿ. 'ಡ'ಕಾರಕ್ಕೆ 'ೞ' ಆದೇಶವಾಗುತ್ತದೆ: ನೋೞ್ಪಂ, ಬೇೞ್ಪಂ. 'ಬ' ಆಗುವುದಕ್ಕೆ : ತಿನ್+ವ=ತಿಂಬಂ, ಉಣ್ಬಂ (<ಉಂಬ), ಕಾಣ್ಬಂ. ವ, ಪ, ಪ್ಪ, ಬ ಗಳಲ್ಲಿ 'ವ'ಕಾರವೇ ಭವಿಷ್ಯತ್ಕಾಲದ ಮೂಲ ವಿಕರಣ. ತಮಿಳು ಭಾಷೆಯಲ್ಲೂ 'ವ' ಹೆಚ್ಚು ಬಳಕೆಯಲ್ಲಿದೆ. ತುಳುವಿನಲ್ಲೂ ಮೊದಲು ಭವಿಷ್ಯತ್ ಸೂಚಿಸುತ್ತಿದ್ದು ಈಗ 'ವ' ವರ್ತಮಾನ ಕಾಲದಲ್ಲಿ ರೂಢಿಯಲ್ಲಿದೆ. ಹೊಸಗನ್ನಡದಲ್ಲಿ ವರ್ತಮಾನ, ಭವಿಷ್ಯತ್ ಕಾಲ ಭೇದ ಮರೆಯಾಗಿದೆ. ಆದ್ದರಿಂದಲೇ ಭೂತ ಮತ್ತು ವರ್ತಮಾನ ಭವಿಷ್ಯತ್ ಎಂಬ ಎರಡು ಕಾಲಗಳು ಮಾತ್ರ ಇವೆ ಎನ್ನುವುದು.

ಹಳಗನ್ನಡದಲ್ಲಿ ಪ>ಹ ಆದಾಗ ಭವಿಷ್ಯತ್ಕಾಲದ ಪಕಾರಗಳೂ ರೂಪಾಂತರ ಗೊಂಡುವು. ಬರ್ಪ>ಬಹ, ಪೋಪ> ಹೋಹ ಎಂದು ನಡುಗನ್ನಡದಲ್ಲಿ ಆದುವು. ಬರ್ಪುದು>ಬಪ್ಪುದು>ಬಹುದು. ಅಪ್ಪುದು>ಅಹುದು>(ಹಉದು) ಹೌದು. ಹೊಸಗನ್ನಡದಲ್ಲಿ ಹಳಗನ್ನಡ ವ್ಯಂಜನಾಂತ ಶಬ್ದಗಳೆಲ್ಲಾ ಸ್ವರಾಂತವಾಗುವುದರಿಂದ (ಉಕಾರಾಂತ) 'ವ' ಪ್ರತ್ಯಯ ಮಾತ್ರ ಉಳಿದು ಬಂದಿದೆ. ಬರುವ, ಹೋಗುವ, ಮಾಡುವ, ತಿನ್ನುವ, ಉಡುವ, ತೆಗಳುವ, ಹೇಳುವ ಇತ್ಯಾದಿ.

*

**ಕರ್ಮಣೀ ಪ್ರಯೋಗ :** ದ್ರಾವಿಡ ಭಾಷೆಗಳಲ್ಲಿ ವಾಸ್ತವವಾಗಿ ಕರ್ಮಣೀ ಪ್ರಯೋಗವಿಲ್ಲ. ಕ್ರಿಯಾಪದಗಳು ಕರ್ತೃಪದವನ್ನು ಆಶ್ರಯಿಸಿದ್ದರೆ ಕರ್ತರೀ ಪ್ರಯೋಗ ಎನ್ನುತ್ತಾರೆ. ಕರ್ಮಪದವನ್ನು ಆಶ್ರಯಿಸಿದ್ದರೆ ಕರ್ಮಣೀ ಪ್ರಯೋಗ ಎನ್ನಲಾಗುತ್ತದೆ. ನಾನು ಮನೆ ಕಟ್ಟಿದೆನು, ನಾನು ಹಣ್ಣನ್ನು ತಿಂದೆನು ಎಂದಾಗ ಕಟ್ಟಿದೆನು, ತಿಂದೆನು ಕ್ರಿಯಾಪದಗಳು ನಾನು ಎನ್ನುವ ಕರ್ತೃಪದವನ್ನು ಅನುಸರಿಸಿ ಕ್ರಿಯೆ ಸೂಚಿಸುತ್ತವೆ. ನನ್ನಿಂದ ಮನೆ ಕಟ್ಟಲ್ಪಟ್ಟಿತು ಎಂದಾಗ ಕರ್ತೃವಿಗೆ ಬದಲಾಗಿ ಮನೆ ಶಬ್ದವನ್ನು ಅನುಸರಿಸಿ ಕಟ್ಟಲ್ಪಟ್ಟಿತು ಎಂದಾಗುತ್ತದೆ. ಆದರೆ ದ್ರಾವಿಡ ಭಾಷೆಗಳಿಗೆ ಈ ಬಗೆಯ ವಾಕ್ಯರಚನೆ, ಪ್ರಯೋಗ ವಿದೇಶೀಯ. ಮಾವಿನ ಹಣ್ಣು ನನ್ನಿಂದ ತಿನ್ನಲ್ಪಟ್ಟಿತು ಎಂದು ಯಾರೂ ಹೇಳುವುದಿಲ್ಲ, ಬರೆಯುವುದೂ ಇಲ್ಲ. ಹಾಗೆ ಮಾತನಾಡಿದರೆ ಹಾಸ್ಯಾಸ್ಪದವಾಗುತ್ತದೆ. ಎಲ್ಲೋ ಒಂದೆರಡೆಡೆ 'ಇಲ್ಲಿ ಟೈಪು ಮಾಡಲ್ಪಡುತ್ತದೆ' ಎಂದಿರಬಹುದು. ಆದರೆ ಅದನ್ನೇ 'ಇಲ್ಲಿ ಟೈಪು ಮಾಡಲಾಗುತ್ತದೆ' ಎಂದು ಹೇಳಬಹುದು. ಇದು ದ್ರಾವಿಡ ಭಾಷೆಗಳ ಜಾಯಮಾನ.

ಸಂಸ್ಕೃತ ಪ್ರಭಾವದಿಂದ (ಎಲ್ಲ ಆರ್ಯಭಾಷೆಗಳಲ್ಲೂ ಕರ್ಮಣೀ ಪ್ರಯೋಗವಿದೆ) ಕನ್ನಡದಲ್ಲೂ ಈ ಬಗೆಯ ಕ್ವಚಿತ್ ಪ್ರಯೋಗ ರೂಢಿಯಲ್ಲಿ ಬಂದಿತು. ಹಲ್ಮಿಡಿ ಶಾಸನದಲ್ಲೇ 'ದಾನಪಶುಪತಿಯೆನ್ದು ಪೊಗಟೆಪ್ಪೊಟ್ಟಣ' ಎಂಬ ಪ್ರಯೋಗವಿದೆ. ವಡ್ಡಾರಾಧನೆಯಲ್ಲಿ ತಿನೆಪಡು, ಕೊಲೆಪಡು, ಮಚ್ಚಿಪಟ್ಟ, ಕೋಳ್ಪಟ್ಟಿನ್ ಎಂಬ ಪ್ರಯೋಗಗಳಿವೆ. ಬಸವಪುರಾಣದಲ್ಲೂ 'ಕೇಳಲ್ಪಟ್ಟುದಲ್ಲಾ, ಕಾಣಲ್ಪಟ್ಟುದಲ್ಲಾ' ಪ್ರಯೋಗಗಳಿವೆ. ಹೀಗೆ 'ಪಡು' ಎಂಬ ಪ್ರತ್ಯಯದಿಂದ ಕರ್ಮಣೀ ಪ್ರಯೋಗವನ್ನು ಮಾಡಲಾಗುತ್ತಿತ್ತು, ಈಗಲೂ ಅಪರೂಪಕ್ಕೆ 'ಅಲ್ಪಡು' ರೂಢಿಯಲ್ಲಿ ಅಂದರೆ ಬರಹದಲ್ಲಿ ಮಾತ್ರ ಇದೆ. ತಮಿಳು, ತೆಲುಗುಗಳಲ್ಲೂ ಈ ಬಗೆಯ ಪ್ರಯೋಗಗಳಿವೆ : ತೆರಿಯಪ್ಪಡುಮ್, ಕಟ್ಟಪ್ಪಟ್ಟದು. ಚೇಯನ್‌ಪಡು, ತೆಲಿಯಬಡುನು ಇತ್ಯಾದಿ.

ಕರ್ಮಣೀಪ್ರಯೋಗಕ್ಕೆ ಬದಲಾಗಿ ಅದೇ ಅರ್ಥಸೂಚಕವಾದ ಬೇರೆ ಬಗೆಯ ಹೇಳುವ ಕ್ರಮಗಳಿವೆ. ಕನ್ನಡಿ ಒಡೆಯಿತು, ಮನೆ ಕಟ್ಟಿದೆ, ಕಥೆ ಬರೆದಾಯಿತು, ಬರೆದ ಪುಸ್ತಕ, ಮಾಡಲಾಯಿತು, ಹೇಳಲಾಯಿತು, ವ್ರಾಸಿನ (ತೆ). ಉಡ್ಡೆಂವದು (ತ), ಇತ್ಯಾದಿ. ಒಟ್ಟಿನಲ್ಲಿ ಕರ್ಮಣೀಪ್ರಯೋಗ ಕನ್ನಡ ಜಾಯಮಾನಕ್ಕೆ ಒಗ್ಗುವುದಿಲ್ಲ.

# ೧೯. ಅವ್ಯಯಗಳು

ಸಾಮಾನ್ಯವಾಗಿ ಶಬ್ದಗಳು ಬಗೆ ಬಗೆಯ ಪ್ರತ್ಯಯಗಳನ್ನು ಪಡೆದು ವಿಕಾರ ಹೊಂದುತ್ತವೆ, ವ್ಯತ್ಯಾಸಗೊಳ್ಳುತ್ತವೆ. ನಾಮಪ್ರಕೃತಿಗಳು, ಗುಣವಾಚಕಗಳು, ಸರ್ವನಾಮ ಮೊದಲಾದುವು ಲಿಂಗ, ವಚನ, ವಿಭಕ್ತಿಪ್ರತ್ಯಯಗಳನ್ನು ಪಡೆಯುತ್ತವೆ. ಕನ್ನಡದಲ್ಲಿ ಮಾತ್ರ ವಿಶೇಷಣಗಳು ಮುಂದಿನ ಶಬ್ದದ ಪ್ರತ್ಯಯಗಳನ್ನು ಪಡೆಯುವುದಿಲ್ಲ, ಆದರೆ ಸಂಸ್ಕೃತದಲ್ಲಿ ವಿಶೇಷಣಗಳೂ ಪ್ರತ್ಯಯಗಳನ್ನು ಪಡೆಯುತ್ತವೆ. ಧಾತುಗಳೂ ಸಹ ಆಖ್ಯಾತಪ್ರತ್ಯಯಗಳನ್ನು ಪಡೆಯುತ್ತವೆ. ಹೀಗೆ ಈ ಶಬ್ದಗಳಿಗೆ ಪ್ರತ್ಯಯ ಸೇರಿದಾಗ ಶಬ್ದಸ್ವರೂಪ ಬದಲಾಗುವುದು ಸ್ವಾಭಾವಿಕ. ಇನ್ನೊಂದು ಬಗೆಯ ಶಬ್ದಗಳಿವೆ. ಅವುಗಳಿಗೆ ಕೃತ್ಪ್ರತ್ಯಯಗಳಾಗಲಿ ಆಖ್ಯಾತ ಪ್ರತ್ಯಯಗಳಾಗಲಿ ಸೇರುವುದಿಲ್ಲ. ಆದ್ದರಿಂದ ಆ ಶಬ್ದಗಳು ಯಾವುದೇ ಬಗೆಯ ವಿಕಾರ ಅಥವಾ ವ್ಯತ್ಯಾಸ ಹೊಂದುವುದಿಲ್ಲ. ಇಂತಹ ಅವಿಕಾರಿ ಶಬ್ದಗಳನ್ನು ಅವ್ಯಯ (indeclinables) ಗಳೆನ್ನುತ್ತಾರೆ. ಅವ್ಯಯಗಳಲ್ಲಿ ಕ್ರಿಯಾವಿಶೇಷಣಗಳು, ಸಂಬಂಧಸೂಚಕಗಳು, ಖೇದ, ಆಶ್ಚರ್ಯ ಸೂಚಿಸುವ ನಿಪಾತಗಳು ಸೇರುತ್ತವೆ. ಅವುಗಳಲ್ಲಿ ಕೆಲವು ಸ್ವತಂತ್ರ ಶಬ್ದಗಳಾದರೆ, ಮತ್ತೆ ಕೆಲವು ನಿಷ್ಪನ್ನ ಶಬ್ದಗಳಾಗಿವೆ. ಆಧುನಿಕ ವಿದ್ವಾಂಸರು ಅವ್ಯಯಗಳನ್ನು ನಾಲ್ಕು ವರ್ಗಗಳಾಗಿ ವಿಂಗಡಿಸಿದ್ದಾರೆ :

೧. ಭಾವಸೂಚಕಾವ್ಯಯ (Interjections).
೨. ಕ್ರಿಯಾವಿಶೇಷಣಾವ್ಯಯ (Adverbs).
೩. ಸಮುಚ್ಚಾಯಕಾವ್ಯಯ (Conjunctions).
೪. ಅನುಸರ್ಗಾವ್ಯಯ (Post-positions).

೧. ಭಾವಸೂಚಕಾವ್ಯಯಗಳು : ಆಶ್ಚರ್ಯ, ದುಃಖ, ಭಯ, ಸಂತೋಷ ಮುಂತಾದ ಭಾವನೆಗಳನ್ನು ಸೂಚಿಸಲು ಕೆಲವು ಧ್ವನಿಗಳೊ, ಧ್ವನಿಸಮೂಹಗಳೊ, ಇಲ್ಲವೆ ಶಬ್ದಗಳೊ ಸಾಮಾನ್ಯವಾಗಿ ಎಲ್ಲ ಭಾಷೆಗಳಲ್ಲೂ ಇರುತ್ತವೆ. ಇವು ಭಾವ ಸೂಚಕ ಅವ್ಯಯಗಳು. ಹಾಗೇ, ಪ್ರಶ್ನೆ, ಸಂಶಯ (ವಿಶಂಕೆ), ಸಂಬೋಧನೆ, ಅವಧಾರಣೆಗಳನ್ನು ಸೂಚಿಸುವ ಧ್ವನಿ ಅಲ್ಲವೆ ಶಬ್ದಗಳೂ ಇವೆ. ಅವುಗಳನ್ನು ನಿಪಾತ ಎನ್ನುತ್ತಾರೆ. ಕೇಶಿರಾಜನೂ ಇಂತಹ ಶಬ್ದಗಳ ಪಟ್ಟಿ ಕೊಟ್ಟಿದ್ದಾನೆ: ಅಕ್ಕಟಾ, ಅಯ್ಯೋ, ಅರೆ, ಅಹಹಂ, ಅಹೋ, ಇಸ್ಸಿ, ಎಲಲೇ, ಎಲೇ, ಏ, ಉಃ, ಓಹೋ, ಹೋ ಇತ್ಯಾದಿ. ಅವಧಾರಣೆಯ 'ಏ', ಪ್ರಶ್ನಾರ್ಥಕ ಏ, ಓಗಳು, ವಿಶಂಕೆಯ ಆ, ಓಗಳು ಕನ್ನಡ, ತಮಿಳುಗಳಲ್ಲಿ ಒಂದೇ ಬಗೆಯವಾಗಿವೆ. ಅಯ್ಯೋ ಆಹಾ, ಓಹೋಗಳೂ ಕನ್ನಡ, ತಮಿಳು, ತೆಲುಗುಗಳಿಗೆ ಸಾಮಾನ್ಯವಾದುವು.

ಇವಲ್ಲದೆ ಹೊಸಗನ್ನಡದಲ್ಲಿ ವಿಶಂಕೆಗೆ ಆ, ಎ, ಏನ್, ಒಗಳೂ, ಭಾವಸೂಚಿ ಚಃ, ಥೂ, ಛೆ, ಆಹಾ ಇತ್ಯಾದಿ ಬಳಕೆಗೆ ಬಂದಿವೆ.

೨. ಕ್ರಿಯಾವಿಶೇಷಣಾವ್ಯಯಗಳು : ಕ್ರಿಯೆಯ ವಿಶೇಷವನ್ನು ತಿಳಿಸುತ್ತವೆ. ವಿಶೇಷ ಎಂದರೆ ಕ್ರಿಯೆ ನಡೆದ ರೀತಿ, ಕಾಲ, ಸಂಖ್ಯೆ ಇತ್ಯಾದಿ ಸೂಚಿಸುವುದು. ಇವುಗಳಲ್ಲಿ ಬಹುಪಾಲು ಅನುಕರಣ ಶಬ್ದಗಳು. ಅವ್ಯಯಗಳಿಗೆ ಪ್ರತ್ಯಯ ಸೇರುವುದಿಲ್ಲವೆಂದು ಸಾಮಾನ್ಯವಾಗಿ ಹೇಳಿದರೂ, ಅನೆ, ಅಗೆ ಪ್ರತ್ಯಯಗಳು ಅನುಕರಣ ಶಬ್ದಗಳಿಗೂ, ಗುಣವಾಚಕಗಳಿಂದ ಸಾಧಿಸುವ ಕ್ರಿಯಾವಿಶೇಷಣಗಳಿಗೂ ಸೇರುತ್ತವೆ. ಹಳಗನ್ನಡದಲ್ಲಿ ಭೋಂಕನೆ, ಗಿಜ್ಜನೆ, ತಿಜ್ಜನೆ, ಭೋರನೆ, ಸುಮ್ಮನೆ ಇಮ್ಮನೆ, ಕಮ್ಮನೆ, ನುಣ್ಣನೆ-ನುಣ್ಣಗೆ, ನೆಟ್ಟನೆ (ನೀಡು+ಅನೆ), ನೆಟ್ಟಗೆ, ಮೆಲ್ಲನೆ, ಮೆಲ್ಲಗೆ ಇದ್ದುವು. ತಮಿಳು, ತೆಲುಗುಗಳಲ್ಲೂ ಇಂಥವೇ ಶಬ್ದರೂಪಗಳಿವೆ: ತಟುಕ್ಕನೆ, ಗ್ರಕ್ಕುನ, ಪಡಪಡೆನ ಇತ್ಯಾದಿ. ಹೊಸಗನ್ನಡದಲ್ಲಿ ಎನ್ನು, ಆಗು ಶಬ್ದಗಳ ಭೂತನ್ಯೂನರೂಪಗಳಾದ ಎಂದು, ಆಗಿಗಳನ್ನು ಸೇರಿಸಿಯೂ ಇಂತಹ ರೂಪಗಳನ್ನು ಸಾಧಿಸುವುದುಂಟು : ಥೊಪ್ಪೆಂದು, ಚೊಯ್ಯೆಂದು, ಕೆಂಪಾಗಿ, ಸಡಿಲಾಗಿ ಇತ್ಯಾದಿ.

ಅಲ್ಲದೆ, ಹೋಲಿಕೆಗೆ ಬಳಸುವ ಶಬ್ದಗಳೂ ಭಾವವನ್ನು ಸ್ಪಷ್ಟಪಡಿಸುವಲ್ಲಿ, ಉಕ್ತಿಯ ಸೊಗಸನ್ನು ಹೆಚ್ಚಿಸುವಲ್ಲಿ ಸಹಾಯಕವಾಗುತ್ತವೆ. ಅಂತೆ, ಪೋಲ್, ಅಂತೆವೋಲ್, ಅಂತಿರೆ ಇವುಗಳನ್ನು ಪ್ರಾತಿಪದಿಕಗಳಿಗೆ ಸೇರಿಸಿ ಕ್ರಿಯಾವಿಶೇಷಣ ಮಾಡಿಕೊಳ್ಳಲಾಗುವುದು. ತಮಿಳಿನಲ್ಲೂ 'ಪೋಲ್' ಇದೆ. ತಮಿಳಿನ ಕೆಲವು ಉದಾಹರಣೆಗಳು : ಶುಮ್ಮಾ, ಉಡನ್, ಅನ್ರು, ಎನ್ರಲೋಡುಂ ಇತ್ಯಾದಿ. ಹೊಸಗನ್ನಡದ ಹಾಗೆ, ಹೀಗೆ, ಹೇಗೆಗಳೂ ಅವ್ಯಯಗಳೇ. ಹಳಗನ್ನಡದಲ್ಲಿದ್ದ ಅನ್ನಂ, ಅನ್ನೆಗಂ, ಇನ್ನಂ, ಇನ್ನೆಗಂ, ನೆಱ, ಮುನ್ ಇತ್ಯಾದಿ ಹೊಸಗನ್ನಡದಲ್ಲಿ ಬೇರೆ ಬೇರೆ ರೂಪ ಪಡೆದಿವೆ : ವರೆಗೆ, ಅಂತೆ, ಮುನ್ನ, ಒಟ್ಟಾಗಿ, ಬಳಿಕ ಇತ್ಯಾದಿ.

೩. ಸಮುಚ್ಚಾಯಕಾವ್ಯಯಗಳು : ಜೋಡಿಸುವ ಶಬ್ದಗಳು, ಸಂಬಂಧ ವಾಚಕಗಳು. ಎರಡು ಪದ ಇಲ್ಲವೆ ಎರಡು ವಾಕ್ಯಗಳನ್ನು ಸಮುಚ್ಚಯಗಳು ಸೇರಿಸುತ್ತವೆ. ಹಳಗನ್ನಡದಲ್ಲಿ ಅಂ, ಉಂ ಇದ್ದುವು: ದ್ರೋಣಂಗಂ ನಿನಗಂ, ನರನುಂ ನರನಂದನನುಂ, ಗುರುವುಂ ಗುರುಸುತನುಂ. ಹೊಸಗನ್ನಡದಲ್ಲಿ 'ಅಂ' ಇಲ್ಲ, ಉಂ>ಊ ಆಗಿದೆ. ರಾಮನೂ ಲಕ್ಷ್ಮಣನೂ, ಗಂಗೆಯೂ ಕಾವೇರಿಯೂ ಇತ್ಯಾದಿ. ಇವುಗಳಲ್ಲದೆ ಹಳಗನ್ನಡದಲ್ಲಿ ಮತ್ತೆ, ಮೇಣ್, ಮತ್ತಂಗಳಿದ್ದುವು. ಮತ್ತಂ ಎಂಬುದು ಹೊಸಗನ್ನಡದಲ್ಲಿ ಮತ್ತು ರೂಪದಲ್ಲಿದೆ, ಮತ್ತೆ ಸಹ ಇದೆ. ಮೇಣ್ ಬಳಕೆಯಿಂದ ಬಿಟ್ಟುಹೋಗಿದೆ. 'ಹಾಗೆ' ಎಂಬುದಕ್ಕೆ ಉಕಾರ ಸೇರಿ ಆದ 'ಹಾಗು', 'ಹಾಗೂ', ಎಂಬುವೂ ಹೊಸಗನ್ನಡದಲ್ಲಿ ಸಮುಚ್ಚಯಾರ್ಥ

ಕೊಡುತ್ತವೆ. ತಮಿಳಿನಲ್ಲಿ ಮಱ್ಱು (ಮತ್ತು) ಇದೆ, ಉಂ ಸಹ ಇತ್ತು. ಮಲೆಯಾಳ ದಲ್ಲೂ ಉಂ ಸಮುಚ್ಚಯಾರ್ಥಕ ಶಬ್ದ. ತೆಲುಗಿನಲ್ಲಿ 'ಉ' ಎಂದಿದೆ.

೪. ಅನುಸರ್ಗಾವ್ಯಯಗಳು : ಕೆಲವು ಅವ್ಯಯಗಳು ನಾಮಪದ, ಕೃದಂತ ಗಳ ಮುಂದೆ ಸೇರಿ ವಿಶೇಷ ಅರ್ಥ ಕೊಡುತ್ತವೆ. ಅವು ಅನುಸರ್ಗಗಳು. ಕೇಶಿರಾಜ ಹೀಗೆ ಹೇಳಿದ್ದಾನೆ: ಸತಿಸಪ್ತಮಿಯ 'ಎ'ಕಾರಕ್ಕೆ ಆದೇಶವಾಗಿ ಅನ್ನಂ, ಅನ್ನೆಗಂ, ಇನಂ, ಇನೆಗಂ, ಅಲೊಡಂ, ಅಲೊಡನೆ, ಒಡಂ, ಒಡನೆ, ವರೆಗೆ ಬರುತ್ತವೆ ಎಂದಿದ್ದಾನೆ. ಇವು ವಾಸ್ತವವಾಗಿ ಪ್ರತ್ಯಯಗಳಲ್ಲ ಸ್ವತಂತ್ರ ಅವ್ಯಯಗಳು. ಕೇಶಿರಾಜ ಪ್ರತ್ಯಯದಲ್ಲಿ ಸೇರಿಸಿ, 'ಎ'ಕಾರಕ್ಕೆ ಆದೇಶವಾಗಿ ಹೇಳಿದ್ದಾನೆ. ಉದಾ : "ಓಸರಿಸಿದ ಜವನಿಕೆಯೊಡನೋಸರಿಸಿದನಲ್ತೆ ಕಂತು", "ಬರಲೊಡನೆ ಕೊಟ್ಟಂ". ಓಸುಗ, ತನಕಗಳೂ ಅನುಸರ್ಗ ಅವ್ಯಯಗಳೇ ಆಗಿವೆ: ಹಂಗಿಂಗೋಸುಗವೆ, ನಿನ್ನ ಕಾಣಲೋಸುಗಂ, ಎರಡು ಮೂರ್ದಿನತನಕ. ಇವು ಹೊಸಗನ್ನಡದಲ್ಲೂ ಬಳಕೆಯಲ್ಲಿವೆ. ತಮಿಳಿನಲ್ಲಿ ಓಜ, ಓಜರ ಎಂಬುವು ಓಸುಗ ಅರ್ಥ ಕೊಡುತ್ತವೆ, ತನ್ನೈ ಎಂಬುದು ತನಕ ಅರ್ಥ ನೀಡುತ್ತದೆ. ತೆಲುಗಿನಲ್ಲಿ ದನಕೆ, ದಾಕೆ ರೂಪಗಳಿವೆ. ಇವಲ್ಲದೆ ಹೊಸಗನ್ನಡದಲ್ಲಿ 'ಇಂತ' ಶಬ್ದ ಬಳಕೆಯಲ್ಲದೆ: ಅವನಿಗಿಂತ ಇವನು ಮೇಲು, ತಾಯಿಗಿಂತ ದೇವರಿಲ್ಲ ಇತ್ಯಾದಿ. ಇನ್ ಎಂಬುದರಿಂದ ಇಂತ ಬಂದಿದೆ, ಇದು ಇಂತಹ, ಇಂಥಗಳಿಗೆ ಸಂಬಂಧಿಸಿದ್ದಲ್ಲ, ಸ್ವತಂತ್ರವಾಗಿ ಪ್ರಯೋಗವಾಗುವುದಿಲ್ಲ. ಚತುರ್ಥೀ ವಿಭಕ್ತಿಯ 'ಗೆ' ಮೇಲೆ ಸೇರಿ ಪ್ರಯೋಗವಾಗುತ್ತದೆ.

ಕಾಲವನ್ನು ಸೂಚಿಸುವ ನಿನ್ನೆ, ನಾಳೆ, ನಾಳಿದ್ದು ಎಂಬುವೂ ಸ್ವತಂತ್ರ ಅವ್ಯಯ ಶಬ್ದಗಳಾಗಿವೆ.



# ಶಬ್ದ ಸೂಚಿ

**ಮ**



**ಯ**

# ಗ್ರಂಥ ಋಣ


1. ಭಾಷಾ ವಿಜ್ಞಾನದ ಮೂಲ ತತ್ವಗಳು—ಡಾ. ಎಂ. ಚಿದಾನಂದಮೂರ್ತಿ
2. ಭಾಷೆ ಮತ್ತು ಭಾಷಾವಿಜ್ಞಾನ—ಡಾ. ಕೆ. ಕೆಂಪೇಗೌಡ
3. ಭಾಷಾವರ್ಗೀಕರಣ—ಡಾ. ಕೆ. ಕೆಂಪೇಗೌಡ
4. ಕನ್ನಡ ಭಾಷಾಶಾಸ್ತ್ರ—ಡಾ. ರಾ. ಯ. ಧಾರವಾಡಕರ
5. ಕನ್ನಡ ಕೈಪಿಡಿ (ಸಂಪುಟ–೧)
6. ಕನ್ನಡ ಭಾಷೆಯ ಸಂಕ್ಷಿಪ್ತ ಚರಿತ್ರೆ—ಡಿ. ಯನ್. ಶಂಕರಭಟ್ಟ
7. ಕನ್ನಡ ಭಾಷೆಯ ಚರಿತ್ರೆ—ಪ್ರ. ಗೋ. ಕುಲಕರಣಿ
8. ಕನ್ನಡ ಸಂಸ್ಕೃತಿ—ಎಂ. ಮರಿಯಪ್ಪಭಟ್ಟ
9. ಆಲೋಕ (ಭಾಗ–೧)—ಡಾ. ಎಚ್. ಎಸ್. ಬಿಳಿಗಿರಿ
10. ಕನ್ನಡ ಲಿಪಿಯ ಉಗಮ ಮತ್ತು ವಿಕಾಸ—ಎ. ವಿ. ನರಸಿಂಹಮೂರ್ತಿ
11. ದ್ರಾವಿಡ ಭಾಷಾ ವಿಜ್ಞಾನ—ಡಾ. ಹಂ. ಪ. ನಾಗರಾಜಯ್ಯ
12. ಪದಾರ್ಥ ಚಿಂತಾಮಣಿ—ಪಾ. ವೆಂ. ಆಚಾರ್ಯ
13. ಶಬ್ದಮಣಿ ದರ್ಪಣ—ಡಿ. ಎಲ್. ನರಸಿಂಹಾಚಾರ್
14. *History of Kannada Language*—R. Narasimhacharya
15. *Shabdamanidarpana by Kesiraja*—Dr. A. Shankar Kedilaya
16. *An Outline of Colloquial Kannada*—William Bright
17. *Foreign Loan Words in Kannada*—Dr. A. Shankar Kedilaya
18. *The Grammatical Structure of Dravidian Languages*—Jules Bloch
19. *A Comparative Grammar of the Dravidian Languages*—Dr. Robert Caldwell
20. *An Introduction to Descriptive Linguistics*—H. A. Gleason, Jr.
21. *Language*—Leonard Bloomfield
22. *A Grammar of the Oldest Kanarese Inscriptions*—A. N. Narasimhaiah
23. *An Introduction to Linguistic Science*—E. H. Sturtevant
24. *Study of Language*—J. B. Carrol

ಪ್ರೊಫೆಸರ್ ಎಂ. ಎಚ್. ಕೃಷ್ಣಯ್ಯನವರ 'ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ'ಯ ವ್ಯಾಪ್ತಿ ಅದರ ಹೆಸರು ಸೂಚಿಸುವುದಕ್ಕಿಂತ ಹೆಚ್ಚಿನದು. ಮೊದಲ ಆರು ಅಧ್ಯಾಯಗಳಲ್ಲಿ ಭಾಷೆಯ ಅಧ್ಯಯನಕ್ಕೆ ಅಗತ್ಯವಾದ ಹಿನ್ನೆಲೆಯನ್ನು ರೂಪಿಸಿದ್ದಾರೆ. ಕನ್ನಡ ಭಾಷೆ ನಡೆದು ಬಂದ ದಾರಿಯನ್ನು ಕೃತಿಯು ಹಂತ ಹಂತವಾಗಿ ಗುರುತಿಸುತ್ತದೆ. ಲಿಪಿ, ಶಬ್ದ ಸಂಪತ್ತು, ವ್ಯಾಕರಣ ಎಲ್ಲ ಅಂಗಗಳ ಬೆಳವಣಿಗೆಯನ್ನು ಶಾಸ್ತ್ರೀಯವಾಗಿ ಚಾರಿತ್ರಿಕ ದೃಷ್ಟಿಯಿಂದ ಪ್ರೊ. ಕೃಷ್ಣಯ್ಯ ವಿವರಿಸುತ್ತಾರೆ. ಒಂದಿಗೇ ವಿಶಾಲವಾದ ದೃಷ್ಟಿಯಿಂದ ಮನುಷ್ಯನ ವಿಶಿಷ್ಟ ಸೃಷ್ಟಿ, ಸಂಪತ್ತು ಆದ ಭಾಷೆಯ ಚೌಕಟ್ಟಿನಲ್ಲಿ ಇಟ್ಟು ನೋಡುತ್ತಾರೆ. ಭಿನ್ನಾಭಿಪ್ರಾಯವಿರುವಲ್ಲಿ ಗಮನಿಸುತ್ತಾರೆ; ಮತ್ತೆ ಮತ್ತೆ ಇತರ ದ್ರಾವಿಡ ಭಾಷೆಗಳು, ಸಂಸ್ಕೃತ, ಇಂಗ್ಲಿಷ್ (ಮತ್ತು ಚೀನೀ ಅಂತಹ) ಭಾಷೆಗಳೊಡನೆ ಹೋಲಿಕೆಯು ಅಧ್ಯಯನಕ್ಕೆ ವೈಶಾಲ್ಯವನ್ನು ತಂದುಕೊಡುತ್ತದೆ.

ಅಡಕತನ, ಖಚಿತತೆ, ಸ್ಫುಟತ್ವ ಇವು ಪ್ರೊ. ಕೃಷ್ಣಯ್ಯನವರ ನಿರೂಪಣೆಯ ಗುಣಗಳು. ಮೂರು ದಶಕಗಳಿಗೂ ಮೀರಿ ಶಿಕ್ಷಣ ಕ್ಷೇತ್ರದಲ್ಲಿದ್ದು ಬಹು ಒಳ್ಳೆಯ ಉಪಾಧ್ಯಾಯರೆನಿಸಿಕೊಂಡ ಈ ಪ್ರಾಧ್ಯಾಪಕರು ವಿಸ್ತಾರವಾದ, ಜಟಿಲವಾದ ಸಾಮಗ್ರಿಯನ್ನು ಹಾಳತವಾಗಿ ವ್ಯವಸ್ಥೆಗೊಳಿಸಿಕೊಂಡು ನಿಷ್ಕೃಷ್ಟವೂ, ಸ್ಪಷ್ಟವೂ ಆದ ನಿರೂಪಣೆಯಿಂದ ಕನ್ನಡ ಭಾಷೆಯ ವಿದ್ಯಾರ್ಥಿಗಳಿಗೂ ಈ ಕ್ಷೇತ್ರದಲ್ಲಿ ಆಸಕ್ತಿ ಇರುವ ಓದುಗರಿಗೂ ಅತ್ಯಂತ ಉಪಯುಕ್ತವಾದ ಕೃತಿಯನ್ನು ನೀಡಿದ್ದಾರೆ.

ಪ್ರೊ|| ಎಲ್. ಎಸ್. ಶೇಷಗಿರಿ ರಾವ್

ಸುವಿದ್ಯಾ ಪ್ರಕಾಶನ : : ಬೆಂಗಳೂರು–೫೬೦ ೦೦೪